# ಅಧ್ಯಾತ್ಮಶಂಕರವಿಜಯ



श्रुतिस्मृतिपुराणानामालयं करुणालयम् ।
नमामि भगवत्पादशङ्करं लोकशङ्करम् ॥

ಪ್ರಕಾಶಕರು
ಅಧ್ಯಾತ್ಮಪ್ರಕಾಶ ಕಾರ್ಯಾಲಯಾ
ಹೊಳೆನರಸೀಪುರ

ಅಧ್ಯಾತ್ಮಗ್ರಂಥಾವಳಿ

# ಅಧ್ಯಾತ್ಮಶಂಕರವಿಜಯ

ಬರೆದವರು:
ಅಧ್ಯಾತ್ಮವಿದ್ಯಾಪ್ರವೀಣ, ವೇದವಿದ್ಯಾಭೂಷಣ
ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ

ಕ್ರಮಾಂಕ ೨೦೬

ಪ್ರಕಾಶಕರು:
ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ
1998

# ಓಂ. ಶ್ರೀ. ಶ್ರೀ. ಜಗದ್ಗುರು ಶಂಕರಾಚಾರ್ಯರ ದಿವ್ಯ ದರ್ಶನ.



"ಯಾವುದಕ್ಕಾಗಿ ನೀನು ಹುಡುಕುತ್ತಿದ್ದೀಯೋ ಅದು ನಿನ್ನಲ್ಲಿಯೇ ಇದೆ. ಅದು ನೀನೆ ಆಗಿದ್ದೀಯೇ"....!

ಶೃಂಗೇರಿ:- 2-8-1997. ಶುಕ್ರವಾರ.

① ಶಂಕರಾಚಾರ್ಯರು — 2-8-1997- ಶುಕ್ರವಾರ. ದಿವಸ ನನಗೆ ಕಾಣಿಸಿಕೊಂಡ ಚಿತ್ರ.

# ಕೃತಜ್ಞತಾಸಮರ್ಪಣೆ

*ಈ ಗ್ರಂಥದ ಪ್ರಕಟನೆಗೆ ಉದಾರವಾಗಿ ದಾನ ಮಾಡಿರುವ ದಾನಿಗಳ ಪರಿಚಯವನ್ನು ಈ ಕೆಳಗೆ ಕೊಡಲಾಗಿದೆ.*

**ದಿ|| ಶ್ರೀಮತಿ ಎ. ಉಮಾದೇವಿ, ಎಂ.ಎಸ್‌ಸಿ.,**

**ಇವರ ಸ್ಮರಣೆ**

ಬೆಂಗಳೂರು ನಗರದ ಸುಪ್ರಸಿದ್ಧ ಶಸ್ತ್ರವೈದ್ಯಪ್ರವೀಣ ದಿ|| ಡಾ. ಎಸ್. ಸುಬ್ಬರಾಯರ ಮೊಮ್ಮಗಳೂ ಹಾಗೂ ಡಾ || ಎಸ್. ಅನಂತಸ್ವಾಮಿ ಮತ್ತು ಶ್ರೀಮತಿ ಸೌ|| ವೆಂಕಮ್ಮನವರ ಮಗಳೂ ಆದ **ಶ್ರೀಮತಿ ಉಮಾದೇವಿ**ಯವರು ''ಶುಚೀನಾಂ ಶ್ರೀಮತಾಂಗೇಹೇ'' ಎಂಬ ಭಗವಂತನ ವಚನದಂತೆ ಯೋಗಭ್ರಷ್ಟ ಅಧ್ಯಾತ್ಮಜೀವಿಯಾಗಿ ಬಾಳಿದವರು. ಇವರ ಮಾತಾಮಹರಾದ ಬೇಲೂರಿನ ಕಾಫಿಪ್ಲಾಂಟರ್ ಹಾಗೂ ಅಡ್ವೊಕೇಟರಾದ ಕೀರ್ತಿಶೇಷ ದಿ|| ಕೆ.ಟಿ ಶೇಷಯ್ಯನವರ ಸಂಪರ್ಕದಿಂದ ಇವರು ಶ್ರೀರಾಮಕೃಷ್ಣಾಶ್ರಮದ ಸಂಬಂಧವನ್ನು ಹೊಂದಿದರು. ಬಾಲ್ಯದಿಂದಲೂ ದೈವಭಕ್ತಿಸಂಪನ್ನರಾದ ಇವರು ಮುಂದೆ ಶ್ರೀರಾಮಕೃಷ್ಣಪರಮಹಂಸರ ಭಕ್ತೆಯಾದರು.

ಇವರು ವಿಮೆನ್ಸ್‌ಪೀಸ್‌ಲೀಗ್ ಶಾಲೆಯಲ್ಲಿ ಹೈಸ್ಕೂಲ್ ಶಿಕ್ಷಣವನ್ನು ಪೂರೈಸಿ ಬೆಂಗಳೂರಿನ ಪ್ರಸಿದ್ಧ ನ್ಯಾಷನಲ್ ಕಾಲೇಜಿನಲ್ಲಿ ಬಿ.ಎಸ್‌ಸಿ., ಪದವೀಧರೆಯಾಗಿ ಆನಂತರ ಸೆಂಟ್ರಲ್ ಕಾಲೇಜಿನಲ್ಲಿ ಗಣಿತಶಾಸ್ತ್ರದಲ್ಲಿ ಎಂ.ಎಸ್‌ಸಿ., ಪದವೀಧರೆ ಯಾದರು. ಪ್ರತಿಹಂತದಲ್ಲಿಯೂ ಉತ್ತಮ ಶ್ರೇಣಿಯಲ್ಲಿ ತೇರ್ಗಡೆ ಯಾಗಿ ಅನಂತರ 'ಭಾರತೀಯ ಜೀವವಿಮಾ ನಿಗಮ'ದಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದರು.

ಶ್ರೀರಾಮಕೃಷ್ಣಾಶ್ರಮದ ಆದರ್ಶವಾದ **ಮಾನವನ ಸೇವೆಯೇ ಮಾಧವನ ಸೇವೆ** ಎಂಬುದು ಉಮಾದೇವಿಯವರ ಬಾಳಿನ ಗುರಿಯಾಗಿತ್ತು. ಸದಾ ಹಸನ್ಮುಖಿಯಾಗಿ ಶಿಸ್ತಿನ ಜೀವನವೂ ಇವರ ಸ್ವಭಾವವಾಗಿದ್ದು ಎಲ್ಲರ ಆಸೆ ಆಕಾಂಕ್ಷೆಗಳನ್ನೂ ಸಹನೆ - ಸಂತೋಷಗಳಿಂದ ಸ್ವೀಕರಿಸಿ ಊರ್ಜಿತಗೊಳಿಸುತ್ತಿದ್ದರು. ಇವರ ಸಂಪಾದನೆಯ ಬಹುಪಾಲು ಅನಾಥಾಶ್ರಮ, ಅಬಲಾಶ್ರಮ

- ಮುಂತಾದ ಸಂಸ್ಥೆಗಳಿಗೆ ಹಂಚಿ ಹೋಗುತ್ತಿತ್ತು. ಇವರು ಸಂಗೀತ, ಸಾಹಿತ್ಯ ಮತ್ತು ಆಧ್ಯಾತ್ಮಿಕ ವಿಷಯಗಳಲ್ಲಿ ಹೆಚ್ಚಿನ ಒಲವನ್ನು ಹೊಂದಿದ್ದರು. ಶ್ರೀಶಂಕರಭಗವತ್ಪಾದರ ''ಭಜಗೋವಿಂದಮ್'' ''ಗುರ್ವಷ್ಟಕ'', ''ಭವಾನೀಅಷ್ಟಕ'' ಇವುಗಳು ಇವರ ಅಚ್ಚು ಮೆಚ್ಚಿನ ಕೃತಿಗಳಾಗಿದ್ದವು.

ಯಾವದೇ ಅನಾರೋಗ್ಯವನ್ನೂ ಕಾಣದ ಈ ಪರಿಯ ಜೀವನವನ್ನು ನಡೆಯಿಸುತ್ತಿದ್ದ ಪುಣ್ಯಜೀವಿಯಾದ ಇವರು ಹಠಾತ್ತನೆ ತಾ|| 13-11-97 ರಂದು ದೈವಾಧೀನರಾದರು. ಇಂಥ ಪುಣ್ಯ ಜೀವಿಯ ಸ್ಮರಣಾರ್ಥವಾಗಿ ಸನಾತನಧರ್ಮದ ಪುನರುತ್ಥಾನ ಮಾಡಿದ ಪೂಜ್ಯ ಶ್ರೀಶಂಕರಭಗವತ್ಪಾದರ ಜೀವನ ಕೃತಿಗೆ ಮೇಲಿನ ಕಿರುಕಾಣಿಕೆ ಅರ್ಪಿತವಾಗಿದೆ.

*ಶ್ರೀಮತಿ ಮತ್ತು ಶ್ರೀ ಡಾ|| ಎಸ್. ಅನಂತಸ್ವಾಮಿ*

ಬೆಂಗಳೂರು

# ಮುನ್ನುಡಿ

ಅಧ್ಯಾತ್ಮಪ್ರಕಾಶಕಾರ್ಯಾಲಯವು ಇದರ ಸಂಸ್ಥಾಪಕರಾದ ಬ್ರಹ್ಮೀಭೂತ ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀ ಮಹಾಸ್ವಾಮಿಗಳವರ ಕನ್ನಡ - ಇಂಗ್ಲಿಷ್ ಹಾಗೂ ಸಂಸ್ಕೃತ ಭಾಷೆಯ ಕೃತಿಗಳನ್ನೆಲ್ಲ ಪ್ರಕಟಿಸಿ ಪ್ರಚಾರಮಾಡುತ್ತಿರುವದು ಮಹಾಜನರಿಗೆ ವೇದ್ಯವೇ ಆಗಿದೆ. ಶ್ರೀಶ್ರೀಗಳವರ ಕಾಲಾನಂತರ ಅವರ ಶಿಷ್ಯರೂ ಕಾರ್ಯಾಲಯದ ಪಂಡಿತರೂ ಆದ ಶ್ರೀಲಕ್ಷ್ಮೀನರಸಿಂಹಮೂರ್ತಿಗಳು ಕಾಲಕಾಲಕ್ಕೆ ಶ್ರೀಶ್ರೀಗಳವರ ಕೃತಿಗಳನ್ನೆಲ್ಲ ಮತ್ತೆಮತ್ತೆ ಮುದ್ರಿಸಿ ಸಂಸ್ಥೆಯ ಮೂಲಕವೇ ಪ್ರಕಾಶನಗೊಳಿಸುತ್ತಿದ್ದಾರೆ. ಈ ಸಂದರ್ಭದಲ್ಲಿ ಪಂಡಿತರ ಕೆಲವು ಸ್ವಂತಕೃತಿಗಳೂ ಪ್ರಕಾಶಿತವಾಗಿ ಮಹಾಜನರ ಮೆಚ್ಚುಗೆಗೆ ಪಾತ್ರವಾಗಿವೆ. ಇವುಗಳಲ್ಲಿ **ಅಧ್ಯಾತ್ಮಶಂಕರವಿಜಯವೂ** ಒಂದಾಗಿದ್ದು ಈಗ್ರಂಥವು ಮೊದಲಬಾರಿಗೆ ಹೊಳೆನರಸೀಪುರದ 'ಶ್ರೀಶಂಕರ ಜಗದ್ಗುರು ಸೇವಾಸಂಘ'ದ ಮೂಲಕ **1986**ರಲ್ಲಿ ಪ್ರಕಟವಾಯಿತು. ಅದರ ಪ್ರತಿಗಳೆಲ್ಲವೂ ಮಾರಾಟವಾಗಿಬಿಟ್ಟಿದ್ದರಿಂದ ಅಧ್ಯಾತ್ಮಪ್ರಕಾಶಕಾರ್ಯಾಲಯದವರೇ ಎರಡನೆಯ ಬಾರಿಗೆ ಈ ಗ್ರಂಥವನ್ನು ಪ್ರಕಟಿಸಿ ಮಹಾಜನರಿಗೆ ಸಮರ್ಪಿಸಿದ್ದಾರೆ.

ಎರಡನೆಯ ಬಾರಿಗೆ ಪ್ರಕಟವಾಗುತ್ತಿರುವ ಈ ಗ್ರಂಥದಲ್ಲಿ ಲೇಖಕರು ಕೆಲವು ಮಾರ್ಪಾಡುಗಳನ್ನು ಮಾಡಿ ವಿಷಯಗಳನ್ನು ಸಾಧ್ಯವಾದಮಟ್ಟಿಗೂ ವಿವಾದಾಸ್ಪದ ವಾಗದಂತೆ ನೋಡಿಕೊಂಡಿರುತ್ತಾರೆ ಮತ್ತು ಸಂಸ್ಕೃತ ಭಾಷೆಯಲ್ಲಿರುವ 'ಮಾಧವೀಯ ಶಂಕರವಿಜಯ'ದ ಕಥೆಯನ್ನೇ ಅನುಸರಿಸಿದ್ದಾರಾದರೂ ಕೆಲವುಕಡೆಗಳಲ್ಲಿ ಶ್ರೀಶಂಕರಭಗವತ್ಪಾದರ ಪ್ರಸ್ಥಾನತ್ರಯಭಾಷ್ಯಗಳಲ್ಲಿ ಪ್ರತಿಪಾದಿತವಾಗಿರುವ ವೇದಾಂತ ಸಿದ್ಧಾಂತಕ್ಕನುಗುಣವಾಗಿ ವಿಚಾರಸರಣಿಯನ್ನೂ ಕಥೆಯನ್ನೂ ಹೆಣೆದಿದ್ದಾರೆ. ಪರಿಶಿಷ್ಟದಲ್ಲಿ **ಶಂಕರವಿಜಯಡಿಂಡಿಮ** ವ್ಯಾಖ್ಯಾನಕಾರರು ಕೊಟ್ಟಿರುವ ಸ್ತೋತ್ರ ಗಳನ್ನು ಅರ್ಥಸಮೇತವಾಗಿ ಅಳವಡಿಸಿರುತ್ತಾರೆ. ಐತಿಹಾಸಿಕವಾಗಿಯೂ ಸಂಶೋಧನಾತ್ಮಕ ವಾಗಿಯೂ ಆಚಾರ್ಯಭಗವತ್ಪಾದರ ಚರಿತ್ರೆಯನ್ನು ಅವಲೋಕಿಸಲು ಇಚ್ಛಿಸುವವರು ಪೂಜ್ಯ ಶ್ರೀಶ್ರೀಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳು ರಚಿಸಿರುವ **ಶ್ರೀಶಂಕರಭಗವತ್ಪಾದವೃತ್ತಾಂತಸಾರಸರ್ವಸ್ವ** ಎಂಬ ಗ್ರಂಥವನ್ನು ಅವಲೋಕಿಸ ಬೇಕಾಗಿ ಪ್ರಾರ್ಥನೆ. ಈ ಗ್ರಂಥವು ಕಾರ್ಯಾಲಯದಲ್ಲಿ ದೊರೆಯುತ್ತದೆ.

ವಾಚಕರು ಈ ಪ್ರಾಸಾದಿಕಗ್ರಂಥವನ್ನು ಪಠನಮಾಡಿ ಗುರುಭಕ್ತಿಯನ್ನೂ, ವೇದಾಂತಜಿಜ್ಞಾಸೆಯಲ್ಲಿ ಶ್ರದ್ಧಾದಿಗಳನ್ನು ಪಡೆಯಲೆಂದು ಹಾರೈಸುತ್ತೇನೆ. ಸಂಸ್ಥೆಯ ಪರವಾಗಿ ಲೇಖಕರಿಗೂ, ಈ ಗ್ರಂಥಪ್ರಕಟಣೆಗೆ ಧನಸಹಾಯವನ್ನು ನೀಡಿರುವ ದಾನಿಗಳಾದ ಬೆಂಗಳೂರಿನ ಡಾ|| ಎಸ್. ಅನಂತಸ್ವಾಮಿಯವರಿಗೂ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಈ ಮೂಲಕ ಸಮರ್ಪಿಸುತ್ತೇನೆ.

ಇತಿ

13-11-1998
ಹೊಳೆನರಸೀಪುರ

ಅರಕಲಗೂಡು ತಾಂಡವೇಶ್ವರ
ಅಧ್ಯಕ್ಷರು, ಅಧ್ಯಾತ್ಮ ಪ್ರಕಾಶಕಾರ್ಯಾಲಯ

# ವಿಷಯಾನುಕ್ರಮಣಿಕೆ

॥ ಓಮ್ ॥

# ಆಧ್ಯಾತ್ಮ ಶಂಕರವಿಜಯ

**ಶ್ರುತಿ ಸ್ಮೃತಿಪುರಾಣಾನಾಮಾಲಯಂ ಕರುಣಾಲಯಮ್।**
**ನಮಾಮಿ ಭಗವತ್ಪಾದಶಂಕರಂ ಲೋಕಶಂಕರಮ್ ॥**

## ಪ್ರಥಮಪುಷ್ಪ

### 1. ಪೂರ್ವಪೀಠಿಕೆ

ಶ್ರೀ ಶ್ರೀ ಜಗದ್ಗುರು ಶಂಕರಭಗವತ್ಪಾದರವರ ಹೆಸರು ಈಗಲೂ ಭರತ ಖಂಡದಲ್ಲಿಯೂ, ವಿದೇಶಗಳಲ್ಲಿಯೂ ಪ್ರಸಿದ್ಧವಾಗಿದೆ. ಆದರೆ ಆ ಮಹನೀಯರ ಜೀವನಚರಿತ್ರೆಯು ಐತಿಹಾಸಿಕವಾಗಿ ಸರ್ವಸಮ್ಮತವಾಗಿ ದೊರೆಯುತ್ತಿಲ್ಲ. ಆದರೂ ಅವರ ಶಿಷ್ಯ ವರ್ಗದವರೂ, ಭಕ್ತವೃಂದದವರೂ ಅವರ ದಿವ್ಯಚರಿತ್ರೆಯನ್ನು ಪಠಿಸಿ ಕೃತಾರ್ಥರಾಗಬೇಕೆಂದು ಇಚ್ಛಿಸುತ್ತಾರೆ. ಇಂಥ ವಾಚಕರ ಉಪಯೋಗಕ್ಕಾಗಿ ಈ ಗ್ರಂಥವನ್ನು ಆ ಭಗವತ್ಪಾದರ ಪ್ರೇರಣೆಯಂತೆ ರಚಿಸಲಾಗಿದೆ.

ಶ್ರೀ ಶಂಕರವಿಜಯಗಳೆಂಬ ಹೆಸರಿನಿಂದ ಈಗಲೂ ಸಂಸ್ಕೃತ ಭಾಷೆಯಲ್ಲಿರುವ ಕೆಲವು ಚರಿತ್ರೆ ಗ್ರಂಥಗಳು ಸಿಗುತ್ತವೆ. ಆಯಾ ಕಾಲಕ್ಕೆ ತಕ್ಕಂತೆ ಅವುಗಳಲ್ಲಿ ಆಚಾರ್ಯರ ಜೀವನ, ಅವರ ಲೋಕೋಪಕಾರ, ಅವರು ಸ್ಥಾಪಿಸಿರುವ ಗುರುಪೀಠಗಳು, ಸಂಪ್ರದಾಯಪರಂಪರೆ - ಇವುಗಳನ್ನು ಭಕ್ತರಿಗೆ ಮೆಚ್ಚಾಗುವಂತೆ ಪ್ರತಿಪಾದಿಸಲಾಗಿದೆ.

ಇಂಥ ಗ್ರಂಥಗಳಲ್ಲಿ ''ಮಾಧವೀಯಶಂಕರದಿಗ್ವಿಜಯ'' ವು ನಮ್ಮ ದಕ್ಷಿಣ ದೇಶದಲ್ಲಿ ಸುಪ್ರಸಿದ್ಧವಾಗಿದೆ. ಇದರಲ್ಲಿ ತಿಳಿಸಿರುವಂತೆ ಪೂಜ್ಯ ಶ್ರೀ ಶಂಕರಾಚಾರ್ಯರು ಭಾರತದೇಶದ ನಾಲ್ಕು ದಿಕ್ಕುಗಳಲ್ಲಿಯೂ ಸ್ಥಾಪಿಸಿರುವ

ಮಠಗಳಲ್ಲಿ ದಕ್ಷಿಣಾಮ್ನಾಯ ಶ್ರೀಶಾರದಾಪೀಠವು ಕರ್ನಾಟಕದೇಶದ ಶೃಂಗೇರಿ ಪವಿತ್ರ ಕ್ಷೇತ್ರದಲ್ಲಿ ಈಗಲೂ ವಿರಾಜಮಾನವಾಗಿದೆ. ಅಲ್ಲಿ ಶ್ರೀ ಶಂಕರಭಗವತ್ಪಾದರ ಪರಂಪರೆಯ ಜಗದ್ಗುರುಗಳು ವಿರಾಜಮಾನರಾಗಿದ್ದಾರೆ. ಅಧ್ಯಾತ್ಮ ಪ್ರಕಾಶ ಕಾರ್ಯಾಲಯದ ಸಂಸ್ಥಾಪಕರಾದ ಬ್ರಹ್ಮೀಭೂತ ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಮಹಾಸ್ವಾಮಿಗಳು ತಮ್ಮ ಜೀವಿತ ಕಾಲದಲ್ಲಿ ಪೂರ್ವಾಶ್ರಮದಲ್ಲಿ ಶ್ರೀ ಶೃಂಗೇರಿ ಜಗದ್ಗುರು ಪೀಠಾಧಿಪತಿಗಳಿಂದಲೇ ನೇರಾಗಿ ಬ್ರಹ್ಮಸೂತ್ರಭಾಷ್ಯ ಶಾಂತಿಯನ್ನು ಪಡೆದವರಾಗಿದ್ದು ಭಗವತ್ಪಾದರ ಅನುಗ್ರಹದಿಂದ ಪ್ರಸ್ಥಾನತ್ರಯ ಭಾಷ್ಯಗಳನ್ನು ಅಭ್ಯಾಸಮಾಡಿ ಕನ್ನಡನಾಡಿನ ಜನರಿಗೆ ಶಂಕರವೇದಾಂತ ತತ್ತ್ವಗಳನ್ನು ತಿಳಿದುಕೊಳ್ಳಲು ಅನುಕೂಲಿಸುವಂತೆ ಶ್ರೀ ಶಂಕರಭಗವತ್ಪಾದರ ಪ್ರಸ್ಥಾನತ್ರಯ ಭಾಷ್ಯಗಳನ್ನೆಲ್ಲ ಕನ್ನಡಕ್ಕೆ ಅನುವಾದಮಾಡಿ ಪ್ರಕಟಿಸಿ ಪರಮೋಪಕಾರವನ್ನು ಮಾಡಿದ್ದಾರೆ. ಅವರು ತಮ್ಮ ಅಮೋಘಪಾಂಡಿತ್ಯ ಹಾಗೂ ವ್ಯಾಸಂಗಗಳ ಫಲವಾಗಿ **''ಶ್ರೀಶಂಕರಭಗವತ್ಪಾದವೃತ್ತಾಂತ ಸಾರಸರ್ವಸ್ವ ''*** ಎಂಬ ಹೆಸರಿನಿಂದ ಬರೆದು ಪ್ರಕಟಿಸಿರುವ ಮಹಾನಿಬಂಧವು ಶ್ರೀ ಶಂಕರಾಚಾರ್ಯರ ಕಾಲದಿಂದ ಈಚಿನ ಘಟನೆಗಳನ್ನು ಒಳಗೊಂಡಿದ್ದು ವಿಚಾರಶೀಲರಾದ ಜಿಜ್ಞಾಸುಗಳಿಗೂ ವಿದ್ವಾಂಸರುಗಳಿಗೂ ಅನುಸಂಧಾನ ಯೋಗ್ಯವಾಗಿದೆ. ಶ್ರೀಶಂಕರಭಗವತ್ಪಾದರ ಎಲ್ಲಾ ಭಾಷ್ಯ - ಪ್ರಕರಣ- ಸ್ತೋತ್ರ ಗ್ರಂಥಗಳನ್ನೂ ಶ್ರೀ ಶ್ರೀಗಳವರು ಕನ್ನಡದಲ್ಲಿ ಅನುವಾದಿಸಿ ಪ್ರಕಟಿಸಿ ತಮ್ಮ ಜೀವಿತವನ್ನೆಲ್ಲ ಶ್ರೀ ಭಗವತ್ಪಾದರ ಸೇವೆಗೆ ಸಮರ್ಪಿಸಿಕೊಂಡಿರುತ್ತಾರೆ.

ಈಗ ಕರ್ನಾಟಕದೇಶದಲ್ಲಿ ಹೆಚ್ಚಾಗಿ ಪ್ರಚಾರದಲ್ಲಿರುವ ಶ್ರೀಶಂಕರಾಚಾರ್ಯರ ಚರಿತ್ರ ಗ್ರಂಥವೆಂದರೆ ''ಮಾಧವೀಯ ಶಂಕರ ದಿಗ್ವಿಜಯ''ವೇ ಆಗಿರುತ್ತದೆ. ಇದನ್ನು ಈಚೆಗೆ ಶೃಂಗೇರಿ ಜಗದ್ಗುರು ಪೀಠದವರು ಬೆಂಗಳೂರಿನ ವಿದ್ವಾನ್ ಶ್ರೀ ಎನ್. ರಂಗನಾಥಶರ್ಮರಿಂದ ಕನ್ನಡಕ್ಕೆ ಅನುವಾದ ಮಾಡಿಸಿ ಮೂಲ ಸಮೇತವಾಗಿ ಪ್ರಕಟಿಸಿದ್ದಾರೆ. ಆದರೆ ಶ್ರೀ ಶಂಕರಾಚಾರ್ಯರ ಜೀವನಚರಿತ್ರೆಯ ಜೊತೆಗೆ ಅವರ ಕೆಲವು ಪ್ರಧಾನೋಪದೇಶಗಳನ್ನೂ ಕಥಾ ಸಂದರ್ಭದೊಡನೆ ಒಂದುಗೂಡಿಸಿ ಬಹು ಮಟ್ಟಿಗೆ ಮಾಧವೀಯ ಶಂಕರ ವಿಜಯದ ಕಥೆಯನ್ನೇ ಅನುಸರಿಸಿ ಒಂದು ಗ್ರಂಥವನ್ನು ರಚಿಸಿಬೇಕೆಂತ ನನಗೆ ಗುರುಪ್ರೇರಣೆಯಾಯಿತು. ಅದರಂತೆ ಈ **''ಅಧ್ಯಾತ್ಮಶಂಕರವಿಜಯ''** ಗ್ರಂಥವನ್ನು ಬರೆದು ವಾಚಕರಿಗೆ ಸಮರ್ಪಿಸಿದ್ದೇನೆ. ಕೆಲವು ಸಂದರ್ಭಗಳಲ್ಲಿ ನನಗೆ ತೋರಿದ

---

* ಈ ಗ್ರಂಥವು ಈಗ ಹೊಳೆನರಸೀಪುರದ ಅಧ್ಯಾತ್ಮಪ್ರಕಾಶ ಕಾರ್ಯಾಲಯದಲ್ಲಿ ದೊರೆಯುತ್ತದೆ

ಕೆಲವು ಅಧ್ಯಾತ್ಮವಿಚಾರಗಳನ್ನೂ ಪ್ರಸ್ತಾಪಿಸಿದ್ದೇನೆ ಮತ್ತು ಸ್ವಲ್ಪ ಮಟ್ಟಿಗೆ ಕಥಾಭಾಗವನ್ನೂ ಅಲ್ಲಲ್ಲಿ ಮಾರ್ಪಡಿಸಿಕೊಂಡಿರುತ್ತೇನೆ. ಒಟ್ಟಿನಲ್ಲಿ ಯಾರೇ ಈ ಗ್ರಂಥವನ್ನು ಪಠನಮಾಡಿದರೂ ಶ್ರೀ ಶಂಕರ ಭಗವತ್ಪಾದರ ಗುಣಗಾನ, ಚರಿತ್ರ ಕಥನಗಳಿಂದ ಗುರುಭಕ್ತಿಯನ್ನೂ ಅಧ್ಯಾತ್ಮವಿಚಾರದಲ್ಲಿ ಆಸಕ್ತಿಯನ್ನೂ ಹೊಂದುವಂತೆ ನೋಡಿಕೊಂಡಿದ್ದೇನೆ. ಈ ಅಲ್ಪಸೇವೆಯನ್ನು ವಾಚಕರು ಸ್ವೀಕರಿಸಿ ಗುಣಗ್ರಹಣಮಾಡಿ ಈ ಲೇಖಕನನ್ನು ಹರಸಬೇಕೆಂದು ಪ್ರಾರ್ಥಿಸುತ್ತೇನೆ.

## ಆಚಾರ್ಯರ ಚರಿತ್ರೆಯ ಆರಂಭ :

'ಈಶಾನಃ ಸರ್ವವಿದ್ಯಾನಾಮ್' ಎಂದು ಶ್ರುತಿಯಲ್ಲಿ ಸ್ತುತಿಸಲ್ಪಟ್ಟಿರುವ ಭಗವಾನ್ ಶಂಕರನು ಚಂದ್ರಶೇಖರನೆಂದೂ ಚಂದ್ರಮೌಳಿಯೆಂದೂ ಪುರಾಣಗಳಲ್ಲಿ ಹೆಸರಿಸಲ್ಪಟ್ಟಿದ್ದಾನೆ. ಈ ಮಹಾದೇವನು ಸರ್ವಜ್ಞನು; ಸರ್ವಶಕ್ತನು; ಸರ್ವವಿದನು; ಸರ್ವೇಶ್ವರನೂ ಆಗಿರುವನು. ನಾರಾಯಣ, ಬ್ರಹ್ಮ, ರುದ್ರರೆಂಬ ತ್ರಿಮೂರ್ತಿಗಳೂ ಈ ಭಗವಂತನ ವಿಭೂತಿಗಳೇ ಆಗಿರುವರು. ಗುರು ಪರಂಪರೆಯ ಅಡಿಗಲ್ಲುಳ್ಳ ಅಧ್ಯಾತ್ಮವಿದ್ಯಾಪ್ರಕಾಶವು ಇದೇ ಮಹಾದೇವನ ಲೀಲಾಕಾರ್ಯವಾಗಿದೆ. ಆದ್ದರಿಂದ ಉಮಾ- ಮಹೇಶ್ವರನೆನಿಸಿರುವ ಈತನೇ ಗುರುವೂ ದಕ್ಷಿಣಾಮೂರ್ತಿಯೂ ಆಗಿ ವಿರಾಜಮಾನನಾಗಿರುವನು. ಈತನ ಅರ್ಧಾಂಗಿಯೆನಿಸಿರುವ ಚಿಚ್ಛಕ್ತಿಯೇ ವ್ಯವಹಾರಪ್ರಪಂಚದಲ್ಲಿ ಉಮೆ- ಯೆನಿಸಿದ್ದಾಳೆ. ಈಕೆಯೇ ದೇವೇಂದ್ರನಿಗೆ ಬ್ರಹ್ಮೋಪದೇಶವನ್ನು ಮಾಡಿದಳೆಂದು ಕೇನೋಪನಿಷತ್ತಿನಲ್ಲಿದೆ. ಜಗತ್ತಿನ ಸ್ಥಿತಿಕಾಲದಲ್ಲಿ ಜನರಿಗೆ ಅಜ್ಞಾನವನ್ನು ಕಳೆದು ಜ್ಞಾನವನ್ನು ಪ್ರದಾನಮಾಡುವ ಕಾರ್ಯವು ಬಹುಮುಖ್ಯವಾಗಿರುವದು. ಅದರಲ್ಲಿಯೂ ಲೌಕಿಕವಸ್ತುಗಳ ಅಥವಾ ಅನಾತ್ಮವಸ್ತುಗಳ ವಿಷಯದ ಅಜ್ಞಾನವನ್ನು ಕಳೆದು ತಿಳಿವಳಿಕೆಯನ್ನು ದಾನಮಾಡುವದಕ್ಕಿಂತಲೂ ಆತ್ಮ ಸ್ವರೂಪದ ವಿಷಯಕ್ಕೆ ಪ್ರತಿಯೊಬ್ಬನಿಗೂ ಸ್ವಾಭಾವಿಕವಾಗಿ ಇದ್ದುಕೊಂಡಿರುವ ಅವಿದ್ಯೆಯನ್ನು ಕಳೆದು ಬ್ರಹ್ಮವಿದ್ಯೆಯನ್ನು ಅನುಗ್ರಹಿಸಲು 'ಸದ್ಗುರು'ವೊಬ್ಬನೇ ಸಮರ್ಥನು. ಅಂಥ ಸದ್ಗುರುವಾಗುವ ಅರ್ಹತೆಯು ಅಷ್ಟಮೂರ್ತಿರೂಪದಿಂದ ಜಗತ್ತನ್ನೆಲ್ಲ ಧರಿಸಿರುವ ಪರಮೇಶ್ವರನನ್ನು ಬಿಟ್ಟರೆ ಬೇರಾರಿಗೂ ಇರುವದಿಲ್ಲ. ಆದ್ದರಿಂದಲೇ ಗೀತೆಯಲ್ಲಿ "ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್" ಎಂದು ಅರ್ಜುನನು ಭಗವಂತನನ್ನು ಸ್ತುತಿಸಿರುತ್ತಾನೆ. ಹೀಗೆ ಪರಮೇಶ್ವರನು ತನ್ನ ಅವತಾರಲೀಲೆಯಲ್ಲಿ ಒಮ್ಮೆ ಬಾಲಕನಾಗಿ ದಕ್ಷಿಣಾಭಿಮುಖ ವಾಗಿ ಯೋಗಾಸನದಲ್ಲಿ ವಟವೃಕ್ಷದಡಿ ಯಲ್ಲಿ ಕುಳಿತು ಚಿನ್ಮುದ್ರೆಯಿಂದ ಜೀವಬ್ರಹ್ಮೈಕ್ಯತತ್ತ್ವವನ್ನು ಋಷಿಗಳಿಗೆ ಬೋಧಿಸಿದನು. ಆದರೇನು? ಕಾಲಕ್ರಮದಲ್ಲಿ ಈ ಬ್ರಹ್ಮವಿದ್ಯೆಯು ಪ್ರಾಪಂಚಿಕರಿಗೆ ಮರೆಯಾಗಿಬಿಟ್ಟಿತು. ಬಹಿರ್ದೃಷ್ಟಿಪ್ರಧಾನರಾದ ಜನರು ತಾವು ತಾವೇ ಬುದ್ಧಿಶಕ್ತಿಯಿಂದ ಊಹಿಸಿಕೊಂಡ ವಿಚಾರಗಳನ್ನು

ಸಂಪ್ರದಾಯಾಗಮಗಳ ಬಲವಿಲ್ಲದೆ ಶಾಸ್ತ್ರಗಳಾಗಿ ರಚಿಸಿಕೊಂಡರು. ಅಂಥವರಲ್ಲಿ ಕೆಲವರು ಮುಖ್ಯರು ದರ್ಶನಕಾರರೆಂದೂ ಪ್ರಸಿದ್ಧರಾಗಿಬಿಟ್ಟರು. ಪ್ರಪಂಚದ ಸ್ವಭಾವವೇನೆಂದರೆ ಆಯಾ ಕಾಲಕ್ಕೆ ಯಾವದು ಹೊಸದಾಗಿ ತೋರಿಕೊಳ್ಳುತ್ತದೆಯೋ ಅದನ್ನು ಸ್ವೀಕರಿಸಿಬಿಡುವದೇ ಆಗಿದೆ. ಗುಣದೋಷಗಳನ್ನು ವಿಚಾರಮಾಡಿ ಸತ್ಯವನ್ನು ಹುಡುಕಿ ಕಂಡುಕೊಳ್ಳುವಷ್ಟು ವ್ಯವಧಾನವೂ ಚಿತ್ತನೈರ್ಮಲ್ಯವೂ ಜನತೆಗೆ ಇರುವದಿಲ್ಲ. ಇದರ ಜೊತೆಗೆ ಹೊಸ ಹೊಸ ಸಿದ್ಧಾಂತಗಳಿಗೆ ಆಯಾ ಕಾಲದ ರಾಜಮಹಾರಾಜರುಗಳ ಆಶ್ರಯವೂ ದೊರಕಿತೆಂದರೆ ಕೇಳಬೇಕೆ ? ನಿಜವು ಅಂಥ ಸಂದರ್ಭದಲ್ಲಿ ತಾತ್ಕಾಲಿಕವಾಗಿ ಮರೆಯಾಗಿಬಿಡುತ್ತದೆ. ನಿಜದ ಆಭಾಸವೇ ಜನರಿಗೆ ರುಚಿಸುತ್ತದೆ. ನಮ್ಮ ಭರತಖಂಡದಲ್ಲಿ ಇಂಥ ಒಂದು ಸಂದರ್ಭವು ಶ್ರೀಶಂಕರಾಚಾರ್ಯರ ಅವತಾರಕ್ಕೆ ಮುಂಚೆ ಒದಗಿತ್ತೆನ್ನಬಹುದು.

ನಿತ್ಯಸತ್ಯ ಸ್ವರೂಪನಾದ ಪರಮೇಶ್ವರನು ಇಂಥ ಕಾಲದಲ್ಲಿ ಸತ್ಯ- ಧರ್ಮಗಳ ಹಾಗೂ ತತ್ತ್ವವಿಚಾರದ ಉದ್ಧಾರಕ್ಕಾಗಿ ಸಂಕಲ್ಪಮಾಡಬೇಕಾಗುವದು. ಇದಕ್ಕೆ ಪ್ರೇರಕರಾಗಿ ದೇವತೆಗಳೂ ಋಷಿಮುನಿಗಳೂ ಜಗತ್ತಿನ ಪರಿಸ್ಥಿತಿಯನ್ನು ಭಗವಂತನಲ್ಲಿ ವಿಜ್ಞಾಪಿಸಿ ಪ್ರಾರ್ಥಿಸುವರು. ಒಂದು ಸಮಯದಲ್ಲಿ ಕೈಲಾಸದಲ್ಲಿ ದೇವತೆಗಳು ಹೀಗೆ ಭೂಲೋಕದಲ್ಲಿ ಆಗಿನ ಕಾಲಕ್ಕೆ ನಾಸ್ತಿಕವಾದವು ಹರಡಿ ಸನಾತನಧರ್ಮದ ಎರಡು ಶಾಖೆಗಳಾದ ಕರ್ಮಕಾಂಡ -ಜ್ಞಾನಕಾಂಡಗಳ ಅನುಷ್ಠಾನವು ಕಣ್ಮರೆಯಾಗಿರುವದನ್ನೂ ಇದರಿಂದ ದುರಾಚಾರ ಸ್ವೇಚ್ಛಾಚಾರಗಳಿಗೆ ಅವಕಾಶವಾಗಿದ್ದು ಜನರು ದಾರಿತಪ್ಪುತ್ತಿರುವದನ್ನೂ ಶಂಕರನ ಸನ್ನಿಧಿಯಲ್ಲಿ ನಿವೇದಿಸಿದರು. ಕೂಡಲೆ ಭಗವಂತನು ತನ್ನ ಪುತ್ರನಾದ ಕುಮಾರಸ್ವಾಮಿಯ ಕಡೆಗೆ ತನ್ನ ದೃಷ್ಟಿಯನ್ನು ಹರಿಸಲಾಗಿ ಆತನು ಎದ್ದು ನಿಂತನು. ತಂದೆಯ ಅಪ್ಪಣೆಯನ್ನು ಪರಿಪಾಲಿಸುವದರಲ್ಲಿ ನಿಷ್ಠನಾದ ಅವನನ್ನು ಕುರಿತು ಮಹಾದೇವನು 'ಕುಮಾರನೆ, ಕೇಳು. ಈಗ ನೀನು ಭೂಲೋಕದಲ್ಲಿ ಶ್ರೋತ್ರಿಯನೂ ಅಕಾಮಹತನೂ ಆದ ಬ್ರಾಹ್ಮಣನಾಗಿ ಅವತರಿಸಿ ಪ್ರಧಾನವಾಗಿ ವೇದದ ಪೂರ್ವಭಾಗವಾದ ಕರ್ಮಕಾಂಡವನ್ನು ಉದ್ಧಾರಮಾಡು. ವೇದಪ್ರಾಮಾಣ್ಯವನ್ನು ಸ್ಥಾಪಿಸಲು ಅಗತ್ಯವಾದರೆ ಶರೀರಪಾತದಂಥ ಕ್ರಮವಾದರೂ ಸರಿ; ಅಂಥದ್ದನ್ನು ಕೈಗೊಂಡು ಜನರಲ್ಲಿ ಶ್ರದ್ಧೆಯುಂಟುಮಾಡಿ ಸನಾತನ ವೈದಿಕಧರ್ಮವನ್ನು ಸಂಸ್ಥಾಪನೆ ಮಾಡು. ಇದರಿಂದ ನಿನ್ನನ್ನು ಜನರು 'ಸುಬ್ರಹ್ಮಣ್ಯ'ನೆಂದು ಕರೆಯುವರು'- ಎಂದನು. ಕುಮಾರನು ತಂದೆಯ ಅಪ್ಪಣೆಯನ್ನು ಶಿರಸಾವಹಿಸಿ ಕಾರ್ಯೋನ್ಮುಖನಾದನು. ಆತನು ಮಹಾಜ್ಞಾನಿಯೂ ಹೌದು. ನಾರದಮಹರ್ಷಿಗಳಿಗೆ ಬ್ರಹ್ಮೋಪದೇಶವನ್ನು ಅವನೇ ಸನತ್ಕುಮಾರ ಋಷಿಗಳ ರೂಪದಿಂದ ಮಾಡಿದನೆಂದು ಛಾಂದೋಗ್ಯೋಪನಿಷತ್ತಿನಲ್ಲಿದೆ. ಇನ್ನು ಈತನ ಲೋಕಸಂಗ್ರಹಕಾರ್ಯವನ್ನು ನೋಡೋಣ.

## ಕುಮಾರಿಲಭಟ್ಟರ ದಿಗ್ವಿಜಯ :

ಪರಮೇಶ್ವರನ ಪುತ್ರನಾದ ಷಣ್ಮುಖಸ್ವಾಮಿಯು ಕುಮಾರಿಲಭಟ್ಟನೆಂಬ ಹೆಸರಿನ ಬ್ರಾಹ್ಮಣನಾಗಿ ಭೂಮಿಯಲ್ಲಿ ಅವತಾರಮಾಡಿದನು. ಆ ಕಾಲಕ್ಕೆ ಅವನು ತನ್ನ ದೇಶದ ರಾಜನಾಗಿದ್ದ ಸುಧನ್ವನೆಂಬವನನ್ನು ರಾಜಸಭೆಯಲ್ಲಿ ಭೇಟಿಮಾಡಿ ತನ್ನ ಪಾಂಡಿತ್ಯಪ್ರಭಾವದಿಂದ ಅಲ್ಲಿ ನೆರೆದಿದ್ದ ಆಸ್ಥಾನವಿದ್ವಾಂಸರುಗಳನ್ನೆಲ್ಲ ವಾದದಲ್ಲಿ ಸೋಲಿಸಿಬಿಟ್ಟನು. ವೇದಶಾಸ್ತ್ರಗಳಲ್ಲಿ ಪ್ರತಿಪಾದಿತವಾಗಿರುವ ಧರ್ಮವು ಪದವಾಕ್ಯಪ್ರಮಾಣಗಳಿಂದ ನಿರ್ಧರಿಸಲ್ಪಟ್ಟಿರುವದರಿಂದ ಕೇವಲ ಯುಕ್ತಿಗಳಿಂದ ನಿಂತಿದ್ದ ಇತರ ಮತಗಳು ಸೋಲನ್ನನನುಭವಿಸಿದವು. ಆಗ ರಾಜನಿಗೂ ವೈದಿಕಧರ್ಮದಲ್ಲಿ ನಂಬುಗೆಯುಂಟಾಯಿತು. ಆದರೂ ಉಳಿದ ಪಂಡಿತರುಗಳನ್ನು ತೃಪ್ತಿಗೊಳಿಸುವುದಕ್ಕಾಗಿ ಕುಮಾರಿಲಭಟ್ಟರನ್ನು ಪರೀಕ್ಷೆಗಳಿಗೆ ಗುರಿಪಡಿಸಿದನು. ಬೆಟ್ಟದ ಮೇಲಿನಿಂದ ಕೆಳಕ್ಕೆ ಹಾರಿಯೂ ಏನೂ ಮುಕ್ಕಾಗದಂತೆ ಶರೀರವನ್ನು ಕಾಪಾಡಿಕೊಳ್ಳಬೇಕೆಂಬುದು ಒಂದು ಪರೀಕ್ಷೆಯಾಯಿತು. ಕುಮಾರಿಲಭಟ್ಟರು ವೇದಗಳನ್ನೇ ಪರಮಸತ್ಯವೆಂದು ನಂಬಿ ಸ್ಪರ್ಧೆಗೆ ಇಳಿದುದರ ಫಲವಾಗಿ ಜಯಶೀಲರಾದರು. ಆಗ ಉಳಿದ ಪಂಡಿತರುಗಳು ಈತನೇನೋ ಮಣಿ ಮಂತ್ರೌಷಧಾದಿಗಳಿಂದ ಶರೀರರಕ್ಷಣೆಯನ್ನು ಮಾಡಿಕೊಂಡಿರಬೇಕು. ಇಷ್ಟರಿಂದ ಈತನ ಮತವು ಸತ್ಯವೆಂದು ಹೇಗಾದೀತು? ಎಂದು ಶಂಕಿಸಿದರು. ಆಗ ರಾಜನು ಎಲ್ಲಾ ಪಂಡಿತರ ಸಮಕ್ಷಮದಲ್ಲಿ ಸಭೆಯಲ್ಲಿ ಬಟ್ಟೆಯಿಂದ ಬಾಯಿ ಬಿಗಿದಿದ್ದ ಒಂದು ಮಡಕೆಯನ್ನು ಇಡಿಸಿ 'ಇದರಲ್ಲೇನಿದೆ? ಹೇಳಿರಿ; ಯಾರ ಮಾತು ನಿಜವೆಂಬುದು ಗೊತ್ತಾಗುತ್ತದೆ' ಎಂದನು. ಆಗ ಪಂಡಿತರುಗಳಿಗೂ ಭಯವಾಗಿಬಿಟ್ಟಿತು. ಉತ್ತರವನ್ನು ಹೇಳಲು ಮೂರು ದಿನಗಳ ಅವಧಿಯನ್ನು ತೆಗೆದುಕೊಂಡು ಮೆಲ್ಲನೆ ಉಪಾಯಾಂತರಗಳಿಂದ ರಾಜನು ಮಡಕೆಯಲ್ಲಿ ಒಂದು ಹಾವನ್ನು ತುಂಬಿಸಿರುವ ನೆಂಬುದನ್ನು ಪತ್ತೆ ಹಚ್ಚಿ ಸಭೆಯಲ್ಲಿ ಉತ್ತರವನ್ನು ಹೇಳಲು ಸಿದ್ಧರಾದರು. ಕುಮಾರಿಲಭಟ್ಟನು ಬುದ್ಧಿಪ್ರೇರಕನಾದ ಭಗವಾನ್ ಸವಿತೃದೇವ (ಸೂರ್ಯ)ನನ್ನು ಉಪಾಸನೆ ಮಾಡಲಾಗಿ ಆ ದೇವನ ಅನುಗ್ರದಿಂದ ಸಭೆಯಲ್ಲಿ ಮಾತನಾಡುವಾಗ ಏನು ಪ್ರೇರಣೆಯಾಯಿತೋ ಅದನ್ನು ಹೇಳಿದನು. ರಾಜನಿಗೆ ಕುಮಾರಿಲನ ಉತ್ತರಕ್ಕೂ ಪಂಡಿತರುಗಳ ಉತ್ತರಕ್ಕೂ ಅಭಿಪ್ರಾಯಭೇದವಿರುವದರ ಅರಿವಾಯಿತು. ಹೇಗೆಂದರೆ ಭಟ್ಟನು 'ಮಡಕೆಯಲ್ಲಿ ನಾಗಶಯನನಾದ ವಿಷ್ಣುವಿದಾನೆ' - ಎಂದುಬಿಟ್ಟಿದ್ದನು. ಪಂಡಿತರುಗಳು ನಾಗರಾಜನಿದಾನೆ- ಎಂದಿದ್ದರು. ರಾಜನು ಕುಮಾರಿಲಭಟ್ಟನಿಗೆ ಪರಾಜಯವಾಯಿತೆಂದು ಭಾವಿಸಿ ಗಡಿಗೆಯಲ್ಲಿ ಕೈ ಹಾಕಿ ತೆಗೆಯಿರಿ- ಎಂದಪ್ಪಣೆ ಮಾಡಿದನು. ಏನೇನೂ ಅತಂಕಪಟ್ಟುಕೊಳ್ಳದೆ ಭಟ್ಟನು

ಮಡಕೆಗೆ ಕೈ ಹಾಕಿ ತೆಗೆಯಲಾಗಿ ಅನಂತಶಯನಮೂರ್ತಿಯೇ ದೊರಕಿತು. ಇದರಿಂದ ಪ್ರಭಾವಿತನಾದ ರಾಜನು ಕುಮಾರಿಲಭಟ್ಟನ ಮತವನ್ನೇ ಸತ್ಯವೆಂದು ನಂಬಿ ಆಶ್ರಯಿಸಿದನು. ಬ್ರಹ್ಮವೆಂದರೆ ವೇದವು. ಯಾವನು ಬ್ರಹ್ಮವನ್ನೇ ಅಧ್ಯಯನ ಮಾಡುತ್ತಿರುವನೋ ಅಂಥ ವಿಪ್ರನ ಮುಖದಿಂದ ಅನೃತವು ಹೊರಬೀಳಲೇ ಆರದು. ಒಂದು ವೇಳೆ ಏನಾದರೂ ಸಂದರ್ಭವಶದಿಂದ ಬಾಯಲ್ಲಿ ಲೌಕಿಕವಾದ ಶಬ್ದಗಳು ಹೊರಬಿದ್ದರೆ ಆ ಶಬ್ದಾನುಗುಣವಾಗಿಯೇ ಪದಾರ್ಥಗಳು ಇದ್ದುಕೊಂಡೇ ಬಿಡುವವು. ಇದು ಆತನ ವಾಙ್ಮಯತಪಸ್ಸಿನ ಫಲವು. ಒಮ್ಮೆ ತಪಸ್ವಿಗಳಾದ ವಾಲ್ಮೀಕಿಮುನಿಗಳಿಗೆ ಅವರ ಆಶ್ರಯದಲ್ಲಿದ್ದ ಗರ್ಭಿಣಿಯಾದ ಸೀತಾದೇವಿಯು ನಮಸ್ಕರಿಸಲಾಗಿ ''ಪುತ್ರಾವಾಪ್ನುಹಿ'' (ಇಬ್ಬರು ಗಂಡುಮಕ್ಕಳನ್ನು ಪಡೆ) ಎಂದುಬಿಟ್ಟರಂತೆ. ಆ ವೇಳೆಗಾಗಲೇ ಶ್ರೀ ರಾಮನು ಸೀತೆಯನ್ನು ಪರಿತ್ಯಾಗಮಾಡಿಬಿಟ್ಟಿದ್ದನು. ಎರಡನೆಯ ಮಗುವಾಗುವ ಸಂದರ್ಭವಿರಲಿಲ್ಲ. ಆದರೂ ಋಷಿವಾಕ್ಯದ ಸತ್ಯತೆಯಿಂದಾಗಿ ಆಕೆಯು ಯಮಳ (ಅವಳಿಜವಳಿ) ರನ್ನೇ ಹಡೆದಳು. ಅವರೇ ಲವ- ಕುಶರು. ಹೀಗೆ ಬ್ರಹ್ಮಜ್ಞಾನಿಗಳ, ಋಷಿಗಳ, ಮಹಾತ್ಮರ ವಚನಗಳು ತ್ರಿಕಾಲದಲ್ಲಿಯೂ ಸತ್ಯವಾಗಿರುವವು. ಇನ್ನು ವೇದವೇ ಮೂರ್ತಿವೆತ್ತಂತೆ ಧರೆಗೆ ಇಳಿದು ಬಂದಿದ್ದ ಈಶ್ವರಪುತ್ರನಾದ ಕುಮಾರನ ಮಾತು ಹುಸಿಯಾಗಲು ಹೇಗೆ ಸಾಧ್ಯ? ಆತನು ತನ್ನ ಬ್ರಹ್ಮತೇಜಸ್ಸಿನಿಂದ ಉಳಿದೆಲ್ಲ ಪಂಡಿತರನ್ನೂ ಪರಾಭವಗೊಳಿಸಿದನು. ಪರಮೇಶ್ವರನು ಶಂಕರನಾಗಿ ಅವತರಿಸುವ ಕಾಲಕ್ಕೆ ಭೂಲೋಕದಲ್ಲಿ ಸನಾತನ ವೈದಿಕ ಧರ್ಮದ ಸ್ಥಾಪನೆಯಾಗಿತ್ತು. ಈ ಕುಮಾರಿಲಭಟ್ಟನೇ ಇನ್ನು ಮುಂದೆ ಭಟ್ಟಪಾದನೆಂದೂ ಪ್ರಸಿದ್ಧನಾದನು. ಈತನ ಮುಖ್ಯಶಿಷ್ಯನೇ ಮಂಡನಮಿಶ್ರನು. ಮುಂದಿನ ಕಥೆಯಲ್ಲಿ ಇದು ಗೊತ್ತಾಗಲಿದೆ.

## ಶ್ರೀಶಂಕರರ ಮಾತಾಪಿತೃಗಳು :

ಭಗವಾನ್ ಪರಮೇಶ್ವರನೇ ತನ್ನ ಅಂಶದಿಂದ ಅವತಾರಮಾಡುವ ಸಂದರ್ಭವು ಒದಗಿದಾಗ ಆ ಮಹಾದೇವನು ತನ್ನ ಲೀಲೆಯ ಪ್ರಕಟನೆಗಾಗಿ ಪ್ರಾರಂಭಕ್ಕೆ ಭಾರತದ ದಕ್ಷಿಣ ಭಾಗದಲ್ಲಿರುವ ಕೇರಳದೇಶವನ್ನಾರಿಸಿಕೊಂಡನು. ದಕ್ಷಿಣಾಮೂರ್ತಿಯು ದಕ್ಷಿಣದಿಕ್ಕಿನಲ್ಲೇ ಉದಯಿಸಲಿರುವದು ಕಾಕತಾಳೀಯವಾಗಿ ಹೊಂದಿಕೊಂಡಿತು. ಪೂರ್ಣಾನದಿಯ ದಡದಲ್ಲಿರುವ ವೃಷಭಾದ್ರಿ ಎಂಬಲ್ಲಿ ಸ್ವಯಂಭುಲಿಂಗವಾಗಿ ಮಹಾದೇವನು ತೋರಿಕೊಂಡನು. ಆ ಕಾಲಕ್ಕೆ ಅಲ್ಲಿ ರಾಜನಾಗಿದ್ದ ರಾಜಶೇಖರೆಂಬವನಿಗೆ ಸ್ವಪ್ನದಲ್ಲಿ ಪ್ರೇರಣೆಯಾದಂತೆ ಅಲ್ಲಿ ದೇವಾಲಯವು ನಿರ್ಮಿಸಲ್ಪಟ್ಟು ಅದೊಂದು ಪುಣ್ಯಕ್ಷೇತ್ರವಾಗಿಬಿಟ್ಟಿತು. ಅದಕ್ಕೆ ಹೊಂದಿಕೊಂಡಂತೆ ಕಾಲಡಿ ಎಂಬ ಅಗ್ರಹಾರವಿತ್ತು. ಅಗ್ರಹಾರಗಳೆಂಬಿವು ಹಿಂದೆ ರಾಜ

ಮಹಾರಾಜರುಗಳು ನದೀತೀರದಲ್ಲಿರುತ್ತಿದ್ದ ಫಲವತ್ತಾದ ಭೂಮಿಯನ್ನು ಬ್ರಾಹ್ಮಣರಿಗೆ ದಾನವಾಗಿಕೊಟ್ಟು ಅವರಿಗೆ ಅನುಕೂಲಮಾಡಿಕೊಟ್ಟಿದ್ದಂಥ ಸ್ಥಳಗಳು. ನೀರಿನ ಸೌಕರ್ಯವು ಚೆನ್ನಾಗಿ ಇರುವ ಜಾಗಗಳಲ್ಲೇ ಅಗ್ರಹಾರಗಳು ಇರುತ್ತಿದ್ದವು. ಬ್ರಾಹ್ಮಣರಿಗೆ ಪ್ರತಿ ದಿನದ ಸ್ನಾನ, ಆಹ್ನಿಕ, ತರ್ಪಣಾದಿವೈದಿಕಕರ್ಮಗಳಿಗೆ ಅವಶ್ಯವಾಗಿ ನೀರು ಬೇಕಾಗುವದು. ಇಂಥ ನೀರು ದೇವಖಾತ (ಕೆರೆ) ಗಳಲ್ಲಾಗಲೀ ನದಿಗಳಲ್ಲಾಗಲಿ ಸಮೃದ್ಧವಾಗಿ ದೊರಕುವದು. **ನೀರನ್ನು ಪಾತ್ರೆಯಲ್ಲಿ ಕೂಡಿಟ್ಟು ಆಹ್ನಿಕ ಮಾಡುವದು ಶ್ರೇಷ್ಠವಲ್ಲ. ಪಟ್ಟಣವಾಸದ ನಿಮಿತ್ತ ಈಗ ಇದು ಅನಿವಾರ್ಯವಾಗಿದೆ. ಆದರೆ ವೇದದಲ್ಲಿ ಒಂದು ಕಡೆ ''ಉದ್ಧೃತಪರಿಪೂತಾಭಿಃ ಅದ್ಭಿಃ ಕಾರ್ಯಂ ಕುರ್ವೀತ। ಅಸಂಚಯವಾನ್'' ಎಂದು ತಿಳಿಸಿದೆ. ಆಗ ತಾನೆ ಮೇಲಕ್ಕೆತ್ತಿದ ಪವಿತ್ರವಾದ ಜಲದಿಂದಲೇ ವೈದಿಕಕರ್ಮಗಳನ್ನು ಮಾಡಬೇಕು; ಅದನ್ನು ಕೂಡಿಡಬಾರದು- ಎಂದು ಮಂತ್ರದ ಅಭಿಪ್ರಾಯ.** ಹೀಗೆ ಸ್ವತಂತ್ರವಾಗಿ ಸಮೃದ್ಧಿಯಾಗಿ ನೀರನ್ನು ಬಳಸಿ ಕರ್ಮಾನುಷ್ಠಾನವನ್ನು ಕೈಗೊಳ್ಳಬೇಕಾಗಿರುವ ಬ್ರಾಹ್ಮಣನು ಅಗ್ರಹಾರನಿವಾಸಿ ಯಾಗಬೇಕೇ ಹೊರತು ನಗರವಾಸಿಯಾಗಬಾರದು. ಇರಲಿ. ಕಾಲಡಿಯು ಆದರ್ಶವಾದ ಅಗ್ರಹಾರವಾಗಿತ್ತು. ಅಲ್ಲಿದ್ದ ವಿಪ್ರೋತ್ತಮರಲ್ಲಿ ವಿದ್ಯಾಧಿರಾಜ ನೆಂಬುವನು ಮುಖ್ಯನಾಗಿದ್ದನು. ಅವನು ಹೆಸರಿಗೆ ತಕ್ಕಂತೆ ಸಕಲ ವಿದ್ಯಾಪಾರಂಗತ ನಾಗಿದ್ದನು. ಆ ಕಾಲಕ್ಕೆ ಕಾಲಡಿ ಅಗ್ರಹಾರದಲ್ಲಿದ್ದ ಪಂಡಿತರುಗಳೆಲ್ಲರಿಗಿಂತಲೂ ವಿದ್ಯಾವಂತನಾಗಿದ್ದುದರಿಂದ ಆ ಹೆಸರು ಅವನಿಗೆ ಅನ್ವರ್ಥವಾಗಿತ್ತು. ಕಾಲಕ್ರಮದಲ್ಲಿ ಅವನಿಗೆ ಪುತ್ರಸಂತಾನವಾಯಿತು. ಮಗುವಿಗೆ ಮಾತಾಪಿತೃಗಳು 'ಶಿವಗುರು' ಎಂದು ಹೆಸರಿಟ್ಟರು. ಈತನೇ ಶಂಕರರ ತಂದೆಯು. ಶಿವಗುರುವು ಬಾಲ್ಯದಲ್ಲಿಯೇ ತನ್ನ ತಂದೆಯವರಿಂದ ವೇದಶಾಸ್ತ್ರಗಳನ್ನು ಅಧ್ಯಯನಮಾಡಿದನು. ಅನಂತರವೂ ಗುರುಕುಲವಾಸವನ್ನು ಮಾಡಿ ತಂದೆಗಿಂತ ಹೆಚ್ಚಿನ ವಿದ್ಯಾವಂತನಾದನು. ಮಗನು ತಂದೆಗಿಂತ ಹೆಚ್ಚು ವಿದ್ಯಾವಂತನೂ ಕೀರ್ತಿವಂತನೂ ಆಗುವದು ಭಾರತೀಯ ಸಂಸ್ಕೃತಿಯಲ್ಲಿ ಒಂದು ಗೌರವವೆಂದೇ ಪರಿಗಣಿಸಲ್ಪಟ್ಟಿರುವದು. ''ಪುತ್ರಾದಿಚ್ಛೇತ್ ಪರಾಜಯಮ್'' (ವಿದ್ಯಾದಿಗಳ ವಿಷಯದಲ್ಲಿ ತಂದೆಯು ಮಗನಿಂದ ಸೋಲನ್ನು ಬಯಸಬೇಕು) ಎಂದು ಸುಭಾಷಿತವೂ ಇದೆ. ಶಿವಗುರುವು ವಿದ್ಯಾಧಿರಾಜನಿಗೆ ಅಂಥ ಪುತ್ರನಾಗಿದ್ದನು ಕಾಲಕ್ರಮದಲ್ಲಿ ಜ್ಞಾನದಲ್ಲಿ ಶಿವನಂತೆಯೂ ವಾಕ್ಕಿನಲ್ಲಿ ಬೃಹಸ್ಪತಿಯಂತೆಯೂ ಪ್ರಸಿದ್ಧನಾದ ಆತನಿಗೆ ಶಿವಗುರು ಎಂಬ ಹೆಸರು ಸಾರ್ಥಕವೇ ಆಗಿಬಿಟ್ಟಿತು. ಮಾತಾಪಿತೃಗಳು ಶುಭಮುಹೂರ್ತದಲ್ಲಿ ಮಾಡುವ 'ನಾಮಕರಣ' ಸಂಸ್ಕಾರದ ಬೆಲೆಯೇನೆಂಬುದನ್ನು ಇದರಿಂದ ತಿಳಿಯಬೇಕು. ಪ್ರತಿಯೊಬ್ಬನಿಗೂ

ತನ್ನ ಹೆಸರಿನ ವಿಷಯಕ್ಕೆ ಹೆಮ್ಮೆಯಿರುತ್ತದೆ. ಹೆಸರನ್ನು ಕೆಡಿಸಿಕೊಳ್ಳಲು ಯಾರೂ ಇಚ್ಛಿಸುವದಿಲ್ಲ. ಆದರೆ ಒಣಹೆಮ್ಮೆಗಿಂತ ಹೆಸರಿನ ಸಾರ್ಥಕ್ಯಕ್ಕಾಗಿ ನಾವು ಜೀವನದಲ್ಲಿ ಪ್ರಯತ್ನಮಾಡಿದರೆ ಆತ್ಮಕಲ್ಯಾಣಕ್ಕೂ ಇಹಪರಗಳಿಗೂ ಅನುಕೂಲವಾಗುವದು. ಆದ್ದರಿಂದ ಒಳ್ಳೆಯ ಹೆಸರುಗಳನ್ನು ಇಟ್ಟುಕೊಳ್ಳುವದು ಯೋಗ್ಯವೇ ಆಗಿದೆ. ಶಿವಗುರುವಿನ ಗುರುಕುಲವಿದ್ಯಾಭ್ಯಾಸವು ಪೂರೈಸಿದ ಮೇಲೂ ಅವನು ನೈಷ್ಠಿಕಬ್ರಹ್ಮಚಾರಿಯಾಗಿಯೇ ಗುರುವಿನ ಬಳಿಯಲ್ಲಿಯೇ ಉಳಿದುಕೊಳ್ಳುವದಾಗಿ ಹಟಮಾಡಿದನು. ಆದರೆ ತಂದೆಯವರೇ ಗುರುಕುಲಕ್ಕೆ ಬಂದು ಮಗನನ್ನು ಒಪ್ಪಿಸಿ ಮನೆಗೆ ಕರೆತಂದರು.

## ಶಿವಗುರುವಿನ ವಿವಾಹ :

ವಿದ್ಯಾಧಿರಾಜನು ತನ್ನ ಪುತ್ರನನ್ನು ಕುಳ್ಳಿರಿಸಿಕೊಂಡು ಅವನು ಓದಿರುವದನ್ನೆಲ್ಲ ಕೇಳಿ ಸಂತೋಷಪಟ್ಟನು. ವೇದಾಧ್ಯಯನ, ಪದ, ಕ್ರಮ, ಜಟಾಘನಪಾಠಗಳು, ಶಾಸ್ತ್ರಗಳ ಅಧ್ಯಯನ, ಸದಾಚಾರ, ಶ್ರೌತಸ್ಮಾರ್ತಕರ್ಮಗಳ ವಿಷಯಕ್ಕೆ ಬೇಕಾದ ತಿಳಿವಳಿಕೆ, ಧರ್ಮಜಿಜ್ಞಾಸೆಯ ಅಧ್ಯಯನಾದಿಗಳೆಲ್ಲವೂ ಶಿವಗುರುವಿಗೆ ಪೂರ್ಣವಾಗಿದ್ದು ಎಲ್ಲವೂ ಚೆನ್ನಾಗಿ ಉಪಸ್ಥಿತಿಯಲ್ಲಿದ್ದವು. ಆದ್ದರಿಂದ ಮಗನನ್ನು ಗೃಹಸ್ಥನನ್ನಾಗಿ ಮಾಡಲು ತಂದೆಯು ಆಲೋಚಿಸಿದನು. ವೇದದ ಅಪ್ಪಣೆಯು ತಂದೆಯಾದವನು ಮಗನನ್ನು ಸರಿಯಾಗಿ ನೆಲೆಗೊಳಿಸಿ ಆತನಿಗೆ ಮದುವೆಮಾಡಿ ಮೊಮ್ಮಗ (ಪೌತ್ರ)ನನ್ನು ಕಂಡು ಆನಂತರವೇ ವಿರಕ್ತನಾಗಬೇಕೆಂದು ಇರುವದರಿಂದ ವಿದ್ಯಾಧಿರಾಜನು ತನ್ನ ಕರ್ತವ್ಯವನ್ನು ಕೈಗೊಂಡನು. ಶಿವಗುರುವಿಗೆ ತಕ್ಕವಳಾದ ಕುಲ- ಶೀಲ- ವಯೋವಿದ್ಯಾ- ರೂಪ ಸೌಭಾಗ್ಯ- ಸದಾಚಾರಸಂಪನ್ನಳಾದ ''ಆರ್ಯಾಂಬೆ'' ಎಂಬ ಕನ್ಯೆಯನ್ನು ಗೊತ್ತು ಮಾಡಿ ವಿವಾಹವನ್ನು ನೆರವೇರಿಸಿದನು. 'ಧರ್ಮಪ್ರಜಾಸಂಪತ್ತ್ಯರ್ಥಂ ಸ್ತ್ರಿಯಮುದ್ವಹೇ' (ಧರ್ಮಪ್ರಜೆಯನ್ನು ಪಡೆದು ಲೋಕಸಂತಾನವನ್ನು ಬೆಳೆಸುವದಕ್ಕಾಗಿ ಸ್ತ್ರೀಯನ್ನು ಮದುವೆಯಾಗುವೆನು) ಎಂಬ ವಿವಾಹಕಾಲದ ಸಂಕಲ್ಪವು ಶಿವಗುರುವಿನ ಮೇಲೆ ಪರಿಣಾಮವುಂಟುಮಾಡಿತು. ಹಾಗೂ ವಿವಾಹಕಾಲದಲ್ಲಿ ಪುರೋಹಿತರು ಹೇಳಿಸಿದ 'ಆವಾಭ್ಯಾಂ ಕರ್ಮಾಣಿ ಕರ್ತವ್ಯಾನಿ' (ಇನ್ನು ನಾವಿಬ್ಬರೂ ಗಾರ್ಹಸ್ಥ್ಯಕರ್ಮಗಳನ್ನು ಮಾಡತಕ್ಕದ್ದು) ಎಂಬ ವಾಕ್ಯವು ಅವನನ್ನು ಈವರೆಗೆ ಓದಿದ್ದ ವೇದಾಧ್ಯಯನವು ವಿದ್ಯೆ (Theory) ಯೆಂದೂ ಈಗ ಗೃಹಸ್ಥನಾಗಿ ವೇದೋಕ್ತಕರ್ಮಗಳನ್ನು ಮಾಡುವದು ಪ್ರಯೋಗ (Practical) ವೆಂದೂ ಎಚ್ಚರಿಸಿತು. ಹಾಗೆಯೇ ವಿವಾಹಕಾಲಕ್ಕೆ ಅದೇ ಸಮಯಕ್ಕೆ ವಧುವಿನ ಮುಖದಿಂದ ಹೇಳಿಸಿದ 'ಪ್ರಜಾಶ್ಚ ಉತ್ಪಾದಯಿತವ್ಯಾಃ' (ಮಕ್ಕಳನ್ನೂ

ಉಂಟುಮಾಡತಕ್ಕದ್ದು) ವಾಕ್ಯವೂ ಮನಸ್ಸಿಗೆ ನಾಟಿತು. ಪುತ್ರೋತ್ಪತ್ತಿಯು ವಿಳಂಬವಾದಲ್ಲಿ ತಪೋಯೋಗಾದಿಸಾಧನಗಳಿಂದಲಾದರೂ ಸುಪುತ್ರನನ್ನು ಪಡೆಯಬೇಕೆಂದು ಆ ವಾಕ್ಯದ ಅರ್ಥವನ್ನು ಗ್ರಹಿಸಿದನು. ಮತ್ತು **ಮೊಟ್ಟಮೊದಲಿಗೆ ಹುಟ್ಟುವ ಮಗನು ಧರ್ಮಪ್ರಜೆಯೆಂದೂ ಅನಂತರ ಹುಟ್ಟುವ ಮಕ್ಕಳು ಕಾಮಜರಾದ್ದರಿಂದ ಕಾಮಪ್ರಜೆಗಳೆನಿಸುವರೆಂದೂ ಅವನಿಗೆ ತಿಳಿಯಿತು.** ಆದ್ದರಿಂದ ಕರ್ತವ್ಯಪೂರಣಕ್ಕಾಗಿ ಧರ್ಮಪ್ರಜೋತ್ಪಾದನೆ ಗಾಗಿ ಗೃಹಮೇಧಿ ಯಾಗಿರುವ ತಾನು ಸಹಧರ್ಮಚಾರಿಣಿಯೊಡನೆ ವೈದಿಕಶ್ರೌತಸ್ಮಾರ್ತ ನಿತ್ಯನೈಮಿತ್ತಿಕಕರ್ಮಗಳನ್ನು ಮಾಡುತ್ತಾ ದುರಿತಕ್ಷಯವನ್ನು ಮಾಡಿಕೊಳ್ಳುತ್ತಾ ದೇವತಾರಾಧನತತ್ಪರನಾಗಿದ್ದು ಆದರ್ಶಗೃಹಸ್ಥನಾಗಿ ಬಾಳಬೇಕೆಂದು ತೀರ್ಮಾನಿಸಿ ದನು. ಅದಕ್ಕೆ ಅನುರೂಪಳೂ ಅನುಕೂಲಳೂ ಆದ ಪತ್ನಿಯಾಗಿ ಆರ್ಯಾಂಬೆಯು ದೊರೆತಿದ್ದಳು. ಶಿವಗುರುವಿನ ಗಾರ್ಹಸ್ಥ್ಯ ಜೀವನವು ಧರ್ಮಕ್ಕೆ ಚ್ಯುತಿಯಾಗದಂತೆ ಮುಂದುವರೆಯುತ್ತಿತ್ತು. ಪರಮೇಶ್ವರನು ಈ ದಂಪತಿಗಳ ಗರ್ಭದಿಂದಲೇ ತಾನು ಭೂಲೋಕದಲ್ಲಿ ಅವತರಿಸಲು ಸಂಕಲ್ಪಿಸಿದನು. ಸತ್ಯ ಸಂಕಲ್ಪನಾದ ಮಹಾದೇವನ ಅವತಾರಲೀಲೆಯನ್ನು ಇನ್ನು ಮುಂದೆ ನೋಡೋಣ.

---

# ೨. ಆಚಾರ್ಯರ ಜನನ, ಬಾಲ್ಯ, ವಿದ್ಯಾಭ್ಯಾಸ

**ಶಿವಗುರುವಿನ ತಪಸ್ಸು:**

ನೂತನದಂಪತಿಗಳಾದ ಆರ್ಯಾಂಬೆ- ಶಿವಗುರು- ಇವರಿಬ್ಬರಿಗೂ ಕೆಲವು ಕಾಲದವರೆಗೆ ಪುತ್ರಸಂತಾನವಾಗಲಿಲ್ಲ. ಪುತ್ರನಿಂದಲೇ ಈ ಲೋಕವನ್ನು ಜಯಿಸತಕ್ಕದು- ಎಂದು ಒಂದು ವೇದವಚನವಿದೆ. ಇದರ ಅಭಿಪ್ರಾಯವೇನೆಂದರೆ: ತಾನು ಬದುಕಿದ್ದಾಗ ಯಾವ ಯಾವ ದೇವತಾಕಾರ್ಯ, ಅಧ್ಯಯನಾಧ್ಯಾಪನ, ಧರ್ಮಕಾರ್ಯಗಳನ್ನೂ, ಕುಲಾಚಾರವ್ರತನಿಯಮಗಳನ್ನೂ ಮಾಡುತ್ತಿರುತ್ತಾನೋ ಅವುಗಳು ತನ್ನ ಅನಂತರವೂ ಅವಿಚ್ಛಿನ್ನವಾಗಿ ಸಾಗುತ್ತಿರಬೇಕಾದರೆ ಗುಣವಂತನಾದ ಔರಸಪುತ್ರನನ್ನು ಪಡೆಯುವದು ಅಗತ್ಯವಾಗುವದು. ಈ ಅಭಿಪ್ರಾಯದಿಂದಲೇ ಪುತ್ರೋತ್ಪತ್ತಿಯನ್ನು ಅವಶ್ಯವೆಂದು ಶಾಸ್ತ್ರವು ಪ್ರತಿಪಾದಿಸುತ್ತದೆ. ಶಿವಗುರುವಿಗೆ ಸದ್ಯಕ್ಕೆ ಪುತ್ರನಿಲ್ಲದ ಕೊರತೆಯು ಕಾಡಲಾರಂಭಿಸಿತು. ಒಮ್ಮೆ ಧರ್ಮಪತ್ನಿಯಾದ ಆರ್ಯಾಂಬೆಯೊಡನೆಯೂ ಈ ವಿಚಾರವನ್ನು ಪ್ರಸ್ತಾಪಿಸಿದನು. ಆಕೆಯು ದೈವಭಕ್ತಳು. ಮಾನವನು ದೇವರನ್ನು ಸರಿಯಾದ ರೀತಿಯಲ್ಲಿ ಬಳಿಸಾರದೆ ಇರುವದೇ ಇಷ್ಟಾರ್ಥಪ್ರಾಪ್ತಿಗೆ ಅಡ್ಡಿಯಾಗಿರುತ್ತದೆಯೆಂದೂ, ಜಡತ್ವವನ್ನು ಕೈಬಿಟ್ಟು ಭಕ್ತಕಲ್ಪವೃಕ್ಷನೆನೆಸಿದ ಶಿವನನ್ನು ಮೊರೆಹೊಕ್ಕರೆ ಪುತ್ರಸಂತಾನವಾಗುವದೆಂದೂ ಆಕೆಯು ಯಜಮಾನನಿಗೆ ಸೂಚಿಸಿದಳು. ಶಿವಗುರುವಿಗೂ ದೈವಭಕ್ತಿಯಿದ್ದಿತಾದರೂ ಅದು ದೃಢವಾಗಲು ಹೆಂಡತಿಯ ಮಾತು ಕಾರಣವಾಯಿತು. ಇಬ್ಬರೂ ವೃಷಭಾದ್ರೀಶನಾದ ಪರಮೇಶ್ವರನನ್ನೇ ಕುರಿತು ತಪಸ್ಸನಾಚರಿಸಲಾರಂಭಿಸಿದರು. ಇದರಿಂದ ತಿಳಿಯ ಬರುವದೇನೆಂದರೆ : ಒಳ್ಳೆಯ ಮಕ್ಕಳನ್ನು ಪಡೆಯಲಿಚ್ಛಿಸುವ ತಂದೆತಾಯಿಗಳು ಸತ್ಕರ್ಮಗಳನ್ನೂ ವ್ರತನಿಯಮ-ತಪ ಆದಿಗಳನ್ನೂ ಸಾಕಷ್ಟು ಮಾಡಬೇಕು. ಇಲ್ಲವಾದರೆ ಪುತ್ರರುಂಟಾದರೂ ಪುತ್ರಸೌಖ್ಯವು ಲಭಿಸಲಾರದು. ಇರಲಿ. ಈ ದಂಪತಿಗಳ ತಪಸ್ಸು ವೃದ್ಧಿಯಾದಂತೆಲ್ಲ ಪರಮೇಶ್ವರನಿಗೂ ಇವರನ್ನು ಅನುಗ್ರಹಿಸುವ ನೆಪದಲ್ಲಿ ತಾನೇ ಅವತರಿಸಬೇಕೆಂದು ಸಂಕಲ್ಪವುಂಟಾಯಿತು. ಆದರೆ ಕರ್ಮಫಲಾನುಗುಣವಾಗಿ ಜಗದ್ವ್ಯಾಪಾರಗಳನ್ನು ಗೊತ್ತುಮಾಡಿ ನಿರ್ವಹಿಸುವ ಭಗವಂತನು ಪುತ್ರಸೌಖ್ಯದ ಪೂರ್ಣಫಲವು ಈ ದಂಪತಿಗಳ ಭಾಗಕ್ಕೆ ಇಲ್ಲವೆಂಬುದನ್ನು ತಿಳಿದು ತಾನೇ ಬ್ರಾಹ್ಮಣವೇಷದಿಂದ ಶಿವಗುರುವಿನ ಕನಸಿನಲ್ಲಿ

ಕಾಣಿಸಿಕೊಂಡು "ಸರ್ವಗುಣೋಪಪನ್ನನಾದ ಒಬ್ಬ ಮಗನು ನಿನಗೆ ಬೇಕೊ? ಅಥವಾ ಬಹುಕಾಲ ಬದುಕುವಂಥ ಸರ್ವಜ್ಞರಲ್ಲದ ಹೆಚ್ಚು ಮಕ್ಕಳು ಬೇಕೊ?" ಎಂದು ಕೇಳಿದನು. ಶಿವಗುರುವು 'ಕುಲಭೂಷಣನಾದ ಸರ್ವಜ್ಞನಾದ ಒಬ್ಬನೇ ಮಗನು ಸಾಕು' ಎನ್ನಲಾಗಿ 'ನೀನು ತಪಸ್ಸನ್ನು ಪೂರ್ಣಗೊಳಿಸುವವನಾಗು. ಪರಮೇಶ್ವರನು ನಿನಗೆ ಪುತ್ರನನ್ನು ದಯಪಾಲಿಸಲಿದ್ದಾನೆ' ಎಂದು ಹೇಳಿ ಮಾಯವಾದನು. ಈ ಸ್ವಪ್ನ ವಿಚಾರವನ್ನು ಶಿವಗುರುವು ತನ್ನ ಪತ್ನಿಗೂ ತಿಳಿಸಿದನು. ವ್ರತನಿಯಮಗಳನ್ನು ಪೂರೈಸಿ ದಂಪತಿಗಳಿಬ್ಬರೂ ಗಾರ್ಹಸ್ಥ್ಯಧರ್ಮನಿರತರಾಗಿ ಕೆಲವು ಕಾಲ ಇದ್ದರು.

## ಆರ್ಯಾಂಬೆಯ ಗರ್ಭಧಾರಣೆ

ಛಾಂದೋಗ್ಯೋಪನಿಷತ್ತಿನಲ್ಲಿ ಪಂಚಾಗ್ನಿವಿದ್ಯೆಯೆಂಬ ಪ್ರಕರಣ ವೊಂದಿದೆ. ಅದರಲ್ಲಿ ತಿಳಿಸುವಂತೆ ಗಂಡಸು- ಹಾಗೂ ಹೆಂಗಸು ಇಬ್ಬರೂ ಅಗ್ನಿಗಳೆಂದೂ ಪುರುಷನು ಯೋಷಾಗ್ನಿಯಲ್ಲಿ ರೇತಸ್ಸನ್ನು ಹೋಮ ಮಾಡುವದರಿಂದ ಸತ್ಪ್ರಜೆಗಳುಂಟಾಗುವರೆಂದೂ ಪುಣ್ಯಶೇಷದಿಂದ ಹುಟ್ಟುವ ಪುರುಷರುಗಳು ಜನ್ಮವನ್ನು ಎತ್ತುವಾಗ ಇಂಥ ಉಪಾಸಕರನ್ನು ಮಾತ್ರ ಪಿತೃಗಳನ್ನಾಗಿ ಆಶ್ರಯಿಸುವರೆಂದೂ ಅಲ್ಲಿ ವಿವರಿಸಿದೆ. ಮತ್ತು ಹುಟ್ಟಲಿರುವ ಪುಣ್ಯಜೀವಿಗಳು ಪುರುಷನು ತಿನ್ನುವ ಅನ್ನದ ಮೂಲಕ ಅವನಲ್ಲಿ ಪ್ರವೇಶಿಸಿ ಅನಂತರ ಋತುಕಾಲದಲ್ಲಿ ಸ್ತ್ರೀಗರ್ಭವನ್ನು ಹೊಕ್ಕು ಜನ್ಮವನ್ನು ಪಡೆಯುತ್ತಾರೆಂದೂ ವರ್ಣಿಸಿರುತ್ತದೆ. ಮುಂಡಕೋಪನಿಷತ್ತಿನಲ್ಲಿಯೂ ಇದರ ಪರಾಮರ್ಶವಿದೆ. ಅದರಂತೆ ಒಂದು ದಿನ ಶಿವಗುರುವು ಊಟಮಾಡಿದ ಅನ್ನದಲ್ಲಿ ಶೈವತೇಜಸ್ಸು ಗೋಪ್ಯವಾಗಿ ಬಂದು ಸೇರಿ ಕಾಲಕ್ರಮದಲ್ಲಿ ಅದು ರೇತೋರೂಪದಿಂದ ಆರ್ಯಾಂಬೆಯನ್ನು ಹೊಕ್ಕಿತು. ಆಕೆಯು ಗರ್ಭವತಿಯಾದಳು. ಪರಶಿವನ ಅಂಶವನ್ನೇ ಆಕೆಯು ಧರಿಸಿದ್ದುದರಿಂದ ತೇಜಸ್ವಿನಿಯಾಗಿ ಕಾಣುತ್ತಿದ್ದಳು. ತನ್ನ ತಪಸ್ಸು ಫಲಪ್ರದವಾಯಿತೆಂದು ಶಿವಗುರುವು ಒಳಗೊಳಗೇ ಸಂತೋಷ ಪಡುತ್ತಿದ್ದನು. ಆರ್ಯಾಂಬೆಗೆ ವಿಚಿತ್ರವಾದ ಕನಸುಗಳಾಗುತ್ತಿದ್ದವು. ತಾನು ಬಿಳುಪಾದ ಎತ್ತನ್ನು ಏರಿ ಸಂಚರಿಸುವಂತೆಯೂ ವಿದ್ಯಾಧರ ಗಂಧರ್ವಾದಿಗಳು ಸುತ್ತುಗಟ್ಟಿ ತನ್ನನ್ನು ಸ್ತುತಿಸುತ್ತಿರುವಂತೆಯೂ ಜಯಕಾರಗಳನ್ನು ಘೋಷಮಾಡುತ್ತಿರುವಂತೆಯೂ ಕನಸುಗಳನ್ನು ಕಂಡಳು. ಹೀಗೆ ನವಮಾಸಗಳು ತುಂಬಿದವು.

## ಶ್ರೀಶಂಕರರ ಜನ್ಮ

ಆರ್ಯಾಂಬೆಯು ಸುಪುತ್ರನನ್ನು ಪಡೆಯುವ ಶುಭದಿನವೂ ಬಂದೇ ಬಂದಿತು. ಆಸ್ತಿಕಮಹಾಜನರ ನಂಬಿಕೆಯಂತೆ ಆ ದಿನ ವೈಶಾಖ ಶುಕ್ಲ

ಪಂಚಮಿಯಾಗಿತ್ತು.* ನಕ್ಷತ್ರವು ಆರಿದ್ರೆಯಾಗಿತ್ತು. ಗ್ರಹಗಳಲ್ಲಿ ಸೂರ್ಯ, ಅಂಗಾರಕ, ಶನಿಗಳು ಕ್ರಮವಾಗಿ ಮೇಷ, ಮಕರ, ತುಲಾರಾಶಿಗಳಲ್ಲಿದ್ದುಕೊಂಡು ಉಚ್ಚರಾಗಿದ್ದರು. ಗುರುವು ಕೇಂದ್ರದಲ್ಲಿದ್ದನು. ಆ ದಿನ ಶುಭಲಗ್ನದಲ್ಲಿ ಶ್ರೀಪಾರ್ವತೀ ದೇವಿಯು ಕುಮಾರನನ್ನು ಪ್ರಸವಿಸುವಂತೆ ಶಿವಗುರುವಿನ ಧರ್ಮಪತ್ನಿಯು ಗಂಡುಮಗುವನ್ನು ಹೆತ್ತಳು. ಗಂಡುಮಗುವು ಜನನವಾದ ವೃತ್ತಾಂತವು ತಿಳಿದಕೂಡಲೆ ಶಿವಗುರುವು ಸಚೇಲಸ್ನಾನವನ್ನು ಮಾಡಿ ಬ್ರಾಹ್ಮಣರಿಗೆಲ್ಲ ದಾನಧರ್ಮಗಳನ್ನು ಮಾಡಿದನು. ಬಹಳ ಆನಂದಭರಿತನಾದನು. ಪ್ರಕೃತಿಯಲ್ಲಿಯೂ ಕೆಲವು ಪರಿವರ್ತನೆಗಳು ಕಂಡುಬಂದವು. ವೈರಪ್ರಾಣಿಗಳಾದ ಗೋವು,ಹುಲಿಗಳು, ಆನೆಸಿಂಹಗಳು, ಹಾವು- ಇಲಿಗಳು ಮುಂತಾದವುಗಳು ಅನ್ಯೋನ್ಯವಾಗಿ ಕೂಡಿ ಸಂಚರಿಸಿದವು. ಗಿಡಮರಬಳ್ಳಿಗಳು ಹೂ ಹಣ್ಣುಗಳನ್ನು ಸುರಿಸಿದವು. ದ್ವೈತವಾದಿಗಳು ಕೈಯಲ್ಲಿ ಹಿಡಿದುಕೊಂಡಿದ್ದ ವಾದಗ್ರಂಥಗಳು ಅಕಸ್ಮಾತ್ತಾಗಿ ಜಾರಿ ಕೆಳಗೆ ಬಿದ್ದವು. ವೇದೋಪನಿಷದ್ದೇವತೆಗಳು ಗಟ್ಟಿಯಾಗಿ ಆನಂದದಿಂದ ನಕ್ಕರು. ಆಕಾಶದಿಂದ ಪುಷ್ಪವೃಷ್ಟಿಯಾಯಿತು. ಮೇಘಗಳು ಹಗುರವಾಗಿ ಮಳೆಗರೆದವು. ಹೀಗೆ ಪ್ರಕೃತಿಯೂ ಪ್ರಸನ್ನವಾಗಿ ತೋರಿಕೊಂಡು ಮಹಾಪುರುಷನ ಜನ್ಮವನ್ನು ಸಾರಿತು. ಶಿವಗುರುವು ಮಗುವಿಗೆ ಜಾತಕರ್ಮವನ್ನು ನೆರವೇರಿಸಿದನು. ಶಿಶುವಿನ ಹೊಕ್ಕಳುನಾಳವನ್ನು ಛೇದನಮಾಡುವವರೆಗೂ ಜಾತಾಶೌಚವು ಪ್ರಾಪ್ತವಾಗುವದಿಲ್ಲವೆಂದು ಶಾಸ್ತ್ರವಿದೆ. ಆದ್ದರಿಂದ ನಾಳಛೇದನಕ್ಕೆ ಮುಂಚೆಯೇ ಜಾತಕರ್ಮವನ್ನು ನೆರವೇರಿಸಬೇಕು. ಈ ಸಂಸ್ಕಾರದ ಮುಖ್ಯ ವಿಷಯಗಳೆಂದರೆ ತಂದೆಯು ಮಗುವನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ವೇದಮಂತ್ರಗಳಿಂದ ಅಭಿಮಂತ್ರಿಸಿ 'ಆತ್ಮಾ ವೈ ಪುತ್ರ ನಾಮಾಸಿ' ಎಂದು ಹೇಳಿ ನೆತ್ತಿಯನ್ನು ಮೂಸಬೇಕು. ಅನಂತರ ಜೇನು ಹಾಗೂ ತುಪ್ಪವನ್ನೂ ಮೊಸರು- ತುಪ್ಪವನ್ನೂ ನೆಕ್ಕಿಸಬೇಕು. ತಾಯಿಯ ತೊಡೆಯ ಮೇಲೆ ಮಲಗಿಸಿ ಮೊಲೆಯುಣಿಸುವಂತೆ ಹೇಳಬೇಕು. ಮಗುವಿನ ಬಲಗಾಲನ್ನು ನೆಲಕ್ಕೆ ಸೋಂಕಿಸಬೇಕು. ನಂತರ ಅಗ್ನಿಯಲ್ಲಿ ಅಕ್ಕಿಯ ತೌಡನ್ನೂ ಬಿಳೀಸಾಸುವೆಯನ್ನೂ

---

*'ಶಂಕರ' ಎಂಬ ಹೆಸರಿನಲ್ಲಿಯೇ ಆಚಾರ್ಯರ ಜನ್ಮ ಕಾಲವು ಸೂಚಿತವಾಗಿದೆ. ಹೇಗೆಂದರೆ 'ಶ' ಎಂಬಿದು ಅವರ್ಗೀಯವ್ಯಂಜನಾಕ್ಷರಗಳಲ್ಲಿ ಐದನೆಯದು. ಆದ್ದರಿಂದ ಪಂಚಮೀತಿಥಿಯೆಂದಾಯಿತು. ಹಾಗೆಯೇ 'ಕ' ಎಂಬಿದು ವರ್ಗೀಯವ್ಯಂಜನಗಳಲ್ಲಿ ಮೊದಲನೆಯದು. ಅದು ಶುಕ್ಲಪಕ್ಷ ಎಂದು ತಿಳಿಸುತ್ತದೆ. ಇನ್ನು 'ರ' ಎಂಬಿದು ಅವರ್ಗೀಯ ವ್ಯಂಜನದ ಎರಡನೆಯ ಅಕ್ಷರವಾಗಿದೆ. ಅದು ಎರಡನೆಯ ವೈಶಾಖಮಾಸವನ್ನು ಸೂಚಿಸುತ್ತದೆ. ಹೀಗೆ ವೈಶಾಖ- ಶುಕ್ಲ- ಪಂಚಮಿಯೆಂದು ಶಂಕರ ಎಂಬ ಹೆಸರಿನಲ್ಲೇ ಜನ್ಮದಿನದ ಸಂಕೇತವಿದೆ- ಎಂದು ಕೆಲವರು ಅಭಿಪ್ರಾಯಪಡುತ್ತಾರೆ.

ಬೆರೆಯಿಸಿ ಹೋಮ ಮಾಡಿ ಸೂತಿಕಾಗೃಹಕ್ಕೆ ಬಾಧೆಯುಂಟುಮಾಡುವ ಕ್ಷುದ್ರದೇವತೆಗಳನ್ನು ತೃಪ್ತಿಗೊಳಿಸಿ ಹೊರಕ್ಕೆ ಕಳುಹಿಸಬೇಕು. ಆಗ ತಾಯಿಗೂ ಮಗುವಿಗೂ ಕ್ಷೇಮವುಂಟಾಗುವದು. ಈ ವಿಧಿನಿಯಮಗಳನ್ನೆಲ್ಲ ಶಿವಗುರುವು ನೆರವೇರಿಸಿದನು. ಹುಟ್ಟಿದ ಮಗುವಿಗೆ ಮಾಡಬೇಕಾದ ಸಂಸ್ಕಾರಗಳಲ್ಲಿ ಜಾತಕರ್ಮವೂ ಒಂದಾಗಿದೆ. ಇದು ಮಗುವು ಹುಟ್ಟಿದೊಡನೆಯೇ ಆಗಬೇಕಾದದ್ದು- ಎಂದು ಶಾಸ್ತ್ರದಲ್ಲಿ ವಿಧಿಸಿದೆ. ಶಾಸ್ತ್ರಜ್ಞನೂ ಕರ್ಮಠನೂ ಆದ ಶಿವಗುರುವು ಜಾತಕರ್ಮವನ್ನು ಸಕಾಲದಲ್ಲಿ ಮಾಡಿ ಮುಂದೆ ನಾಮಕರಣಕ್ಕೆ ಸಿದ್ಧಮಾಡಿದನು.

## ಮಗುವಿಗೆ ನಾಮಕರಣ:

ಹುಟ್ಟಿದ ಶಿಶುವಿಗೆ ನಾಮಕರಣವೂ ಒಂದು ಮುಖ್ಯ ಸಂಸ್ಕಾರವೆನಿಸಿದೆ. ಇದಕ್ಕೆ ಮುಖ್ಯಕಾಲವು ಹುಟ್ಟಿದ ದಿನದಿಂದ ಹನ್ನೊಂದು ಅಥವಾ ಹನ್ನೆರಡನೆಯ ದಿನವು ಮಾತ್ರ, ಉಳಿದದ್ದು ಗೌಣಕಾಲವು. ಸಂಸ್ಕಾರಗಳು ವೀರ್ಯವತ್ತಾಗ ಬೇಕಾದರೆ ಸಮಯಕ್ಕೆ ಸರಿಯಾಗಿ ಮಾಡಿದ ಬಿತ್ತನೆಯು ಫಲಕೊಡುವಂತೆ ಸಕಾಲದಲ್ಲಿಯೇ ನಡೆಸಬೇಕು. ಹೆಸರಿಡುವದು ವ್ಯವಹಾರಸಿದ್ಧಿಗೇ ಆದರೂ ಮುಂದೆ ಮಗುವು ದೊಡ್ಡವನಾದಾಗ ಆ ಹೆಸರಿಗೆ ಬೆಲೆ ಹೆಚ್ಚುವದು. ವ್ಯಕ್ತಿಯು ಕೀರ್ತಿಶಾಲಿಯಾದಾಗ ಆ ಹೆಸರೂ ಸುಪ್ರಸಿದ್ಧವಾಗುವದು. ಅದಕ್ಕಾಗಿ ವಿಚಾರಮಾಡಿ ಹೆಸರಿಡುತ್ತಾರೆ. ಇನ್ನು ಹೆಸರು ಮಗುವಿನ ಸ್ವಭಾವ, ರೂಪ, ಗುಣಾದಿಗಳಿಗೂ ತಕ್ಕಂತೆ ಇರಬೇಕು. ಶಿವಗುರುವು ತನಗೆ ಪರಮೇಶ್ವರನೇ ಪುತ್ರನನ್ನು ದಯಪಾಲಿಸಿದನೆಂದು ಸಂಪೂರ್ಣವಾಗಿ ನಂಬಿದ್ದುದರಿಂದಲೂ ನೋಡಿ ದವರಿಗೂ ಮಗುವು ಶಂ- ಎಂದರೆ ಸುಖವನ್ನುಂಟು ಮಾಡುತ್ತಿದ್ದುದರಿಂದಲೂ ಈಶ್ವರಾಂಶನಾದ ತನ್ನ ಮಗುವಿಗೆ ಪರಮೇಶ್ವರನ ಪ್ರಿಯನಾಮವೂ ರುದ್ರಾಧ್ಯಾಯಪ್ರತಿಪಾದ್ಯವೂ ಆದ 'ಶಂಕರ'ನೆಂಬ ಹೆಸರನ್ನೇ ಕರೆದು ನಾಮಕರಣವನ್ನು ಮಾಡಿದನು. ಗಂಡುಮಕ್ಕಳಿಗೆ ಸಮಾಕ್ಷರ (ಸಮಸಂಖ್ಯೆಯ ಅಕ್ಷರಗಳುಳ್ಳ) ನಾಮವನ್ನಿಡುವದು ರೂಢಿಯು. ಆದ್ದರಿಂದ ಶಂಕರನನ್ನು ನಾವು ಇನ್ನು ಮುಂದೆ 'ಶ್ರೀ ಶಂಕರ'ನೆಂದೇ ಕರೆದು ವ್ಯವಹರಿಸೋಣ. ಶ್ರೀಶಂಕರನು ಶಿಶುವಾಗಿ ತೋರಿಕೊಂಡು ನೋಡಲು ಬಂದವರನ್ನೆಲ್ಲ ಸಂತೋಷಗೊಳಿಸಿದನು. ಮಗುವಿನ ನೆತ್ತಿಯಲ್ಲಿ ಚಂದ್ರಲೇಖೆಯೂ ಹಣೆಯಲ್ಲಿ ಕಣ್ಣಿನ ಗುರುತೂ ತೋಳುಗಳಲ್ಲಿ ತ್ರಿಶೂಲದ ಚಿಹ್ನೆಯೂ ಮೈಯೆಲ್ಲ ಸ್ಫಟಿಕದಂತೆ ಬಿಳುಪೂ ಆಗಿದ್ದುದನ್ನು ಕಂಡು ಬಲ್ಲವರು ಈತನು ಈಶ್ವರಾಂಶನೇ- ಎಂದು ಭಾವಿಸಿದರು. ಶುಕ್ಲಪಕ್ಷದ ಚಂದ್ರನಂತೆ ಶ್ರೀಶಂಕರನು ತಂದೆತಾಯಿಗಳ ಪೋಷಣೆಯಲ್ಲಿ ಬೆಳೆದು ದೊಡ್ಡವನಾಗುತ್ತಾ ಬಂದನು.

## ಚೌಲ, ವಿದ್ಯಾಭ್ಯಾಸ :

ಮಗುವು ಮೊದಲನೆಯ ವರ್ಷದಲ್ಲಿಯೇ ಸ್ಫುಟವಾಗಿ ಮಾತನಾಡಲು ಶಕ್ತನಾದನು. ಎರಡನೆಯ ವರ್ಷಕ್ಕಾಗಲೆ ಬರೆದಿದ್ದ ಅಕ್ಷರಗಳನ್ನು ಓದುವಷ್ಟು ತಿಳಿವಳಿಕೆಯು ಬಂದಿದ್ದಿತು. ಮಗುವಿಗೆ ಇತಿಹಾಸ, ಕಾವ್ಯಪುರಾಣಗಳನ್ನು ಕೇಳುವದರಲ್ಲಿ ಬಹಳ ಆಸಕ್ತಿಯಿತ್ತು. ಇವನಿಗೆ ವಿದ್ಯೆಯನ್ನು ಕಲಿಸುವ ಉಪಾಧ್ಯಾಯರಿಗೆ ಕಷ್ಟವೇ ಆಗಲಿಲ್ಲ. ಏಕೆಂದರೆ ಹೇಳಿದ್ದನ್ನು ಕೂಡಲೆ ಗ್ರಹಿಸಿ ಹಾಗೆಯೇ ಕಲಿತುಬಿಡುತ್ತಿದ್ದನು. ಇಂಥ ಚುರುಕುಬುದ್ಧಿಯನ್ನು ಕಂಡು ಶಿವಗುರುವು ಮೂರನೆಯ ವರ್ಷದಲ್ಲಿಯೇ ಮಗುವಿಗೆ ಚೂಡಾಕರ್ಮವನ್ನು ನೆರವೇರಿಸಿದನು. ಆದರೆ ಮಗುವಿನ ಪುರೋಭಿವೃದ್ಧಿಯನ್ನು ಇನ್ನೂ ಕೆಲವು ಕಾಲ ನೋಡುತ್ತಾ ಸಕಾಲದಲ್ಲಿ ಉಪನಯನವನ್ನು ಮಾಡಿ ಮಗನಿಗೆ ತಾನೇ ವೇದಶಾಸ್ತ್ರಗಳನ್ನು ಕಲಿಸುವ ಪುಣ್ಯವು ಶಿವಗುರುವಿಗೆ ಇರಲಿಲ್ಲವೆನ್ನಬೇಕಾಗುತ್ತದೆ. ಏಕೆಂದರೆ **ಶ್ರೀಶಂಕರನು ಕೇವಲ ಮೂರು ವರ್ಷದ ಮಗುವಾಗಿರುವಾಗಲೆ ಶಿವಗುರುವು ವಯೋಧರ್ಮದಿಂದ ಮೃತನಾಗಿಬಿಟ್ಟನು. ಆರ್ಯಾಂಬೆಯೇ ತಾಯಿಯೂ, ತಂದೆಯೂ ಆಗಿ ಮಗುವನ್ನು ಸಲಹ ಬೇಕಾಯಿತು.** ಮಗುವಿನ ವಿದ್ಯಾಶಕ್ತಿ, ಪ್ರಜ್ಞಾ- ಮೇಧಾದಿಗಳನ್ನು ಕಂಡ ತಾಯಿಯು ಆದಷ್ಟು ಬೇಗನೆ ಉಪನಯನವನ್ನು ಮಾಡಿ ವೇದ ಶಾಸ್ತ್ರಾಧ್ಯಯನಗಳಲ್ಲಿ ಮಗನನ್ನು ನಿಯೋಜಿಸ ಬೇಕೆಂದು ಆಸೆಪಡುತ್ತಿದ್ದಳು. ಶ್ರೀಶಂಕರನು ಆ ವೇಳೆಗೆ ಐದು ವರ್ಷಗಳ ವಯಸ್ಸಿನವನಾದನು.

## ಉಪನಯನಮಹೋತ್ಸವ :

ಬ್ರಾಹ್ಮಣವಟುವಿಗೆ ಎಂಟನೆಯ ವರ್ಷದಲ್ಲಿ ಉಪನಯನವನ್ನು ಮಾಡಬೇಕೆಂದು ಶಾಸ್ತ್ರವು ತಿಳಿಸುತ್ತದೆ. ಇದು ವೇದಾಧ್ಯಯನವನ್ನು ಪೂರೈಸಿ ಧರ್ಮಜಿಜ್ಞಾಸೆಯನ್ನೂ ಮುಗಿಸಿಕೊಂಡು ಗುರುಕುಲದಿಂದ ಹಿಂದಿರುಗಿ ಬರುವದಕ್ಕೆ ಅನುಕೂಲಕರವಾಗುವದು. ಗುರುಕುಲವಿದ್ಯಾಭ್ಯಾಸವು ಹನ್ನೆರಡು ವರ್ಷಗಳ ಕಾಲಾವಧಿಯುಳ್ಳದ್ದಾಗಿರುವದು. ಈಗಲೂ ಪ್ರಾಥಮಿಕ ವಿದ್ಯಾಭ್ಯಾಸದಿಂದ ಹದಿನೈದು ವರ್ಷಗಳ ಕಾಲದ ಅಭ್ಯಾಸಕ್ರಮವು ಜಾರಿಯಲ್ಲಿದ್ದೇ ಇದೆ. ಹಿಂದೆ ವೇದಾಧ್ಯಯನ - ಶಾಸ್ತ್ರಾಧ್ಯಯನಗಳ ಕಾಲವನ್ನು ಉಪನಯನ ಕಾಲದಿಂದಾರಂಭಿಸಿ ಹನ್ನೆರಡು ವರ್ಷಗಳು ಎಂದು ಗೊತ್ತುಪಡಿಸಲಾಗಿತ್ತು. ಆರ್ಯಾಂಬೆಗೆ ಶ್ರೀಶಂಕರನ ವಿದ್ಯಾಗ್ರಹಣ- ಧಾರಣಶಕ್ತಿಗಳನ್ನು ಕಂಡಾಗ ಎಂಟನೆಯ ವರ್ಷದವರೆಗೆ ಉಪನಯನವನ್ನು ತಡಮಾಡುವದು ಸರಿಯಲ್ಲವೆನಿಸಿತು. ತೇಜಸ್ಸಿಗಳಾದ ಪುರುಷರಿಗೆ ವಯೋಧರ್ಮವು ತೀರ ಮುಖ್ಯವಲ್ಲವೆಂದೂ ಅವಳು ತಿಳಿದಿದ್ದಳು. ಇನ್ನು ವಿಶೇಷವಾದ ಸಂದರ್ಭದಲ್ಲಿ ಬ್ರಹ್ಮವರ್ಚಸಕಾಮನಾದವನಿಗೆ ಐದನೆಯ ವರ್ಷದಲ್ಲೇ

ಉಪನಯನವನ್ನು ನೆರವೇರಿಸಬಹುದೆಂತ ಬಲ್ಲವರಿಂದಲೂ ಆಕೆಯು ಕೇಳಿ ತಿಳಿದುಕೊಂಡಳು. ಅನಂತರ ಒಂದು ಶುಭಮುಹೂರ್ತದಲ್ಲಿ ಬಂಧು ಬಾಂಧವರೊಡಗೂಡಿ ಮಗನಿಗೆ ಉಪನಯನಸಂಸ್ಕಾರವನ್ನು ನಡೆಯಿಸಿದಳು. ವಿದ್ಯಾಭ್ಯಾಸಕ್ಕಾಗಿ ಗುರುಕುಲಕ್ಕೂ ಕಳುಹಿಸಿದಳು.

## ಶ್ರೀಶಂಕರನ ಬ್ರಹ್ಮಚರ್ಯಾಶ್ರಮ :

ಕೇವಲ ಐದು ವಯಸ್ಸಿನಲ್ಲಿಯೇ ವೇದಾರಂಭ ಮಾಡಿದ ಶಂಕರನು ಯಾವ ಗುರುಗಳಲ್ಲಿಯೂ ಹೆಚ್ಚುಕಾಲ ನಿಲ್ಲಲಿಲ್ಲ. ಏಕೆಂದರೆ ಆಯಾ ಗುರುಗಳು ತಿಳಿದಿದ್ದ ವೇದಶಾಸ್ತ್ರಗಳನ್ನೆಲ್ಲ ಕೆಲಕೆಲವೇ ದಿನಗಳಲ್ಲಿ ಅಧ್ಯಯನಮಾಡಿ ಮುಗಿಸಿಬಿಟ್ಟನು. ನಾಲ್ಕು ವೇದಗಳ ಅಧ್ಯಯನಕ್ಕೆ ಹಾಗೂ ವೇದಾಂಗಗಳ ಅಧ್ಯಯನಕ್ಕೆ ಷಡ್ದರ್ಶನಗಳ ವಿಚಾರಕ್ಕೆ- ಕೇವಲ ಮೂರು ವರ್ಷಗಳಷ್ಟು ಕಾಲವು ಶ್ರೀ ಶಂಕರನಿಗೆ ಸಾಕಾಗಿಬಿಟ್ಟಿತು. ಇಂಥ ಪ್ರತಿಭಾಶಾಲಿಯು ಜಗತ್ತಿನಲ್ಲಿ ಈವರೆಗೂ ಬೇರೊಬ್ಬನು ಹುಟ್ಟಿಲ್ಲವೆಂದರೆ ಅತಿಶಯೋಕ್ತಿಯೇನಲ್ಲ. ನಾಲ್ಕು ವೇದಗಳ ಪಠನದಲ್ಲಿ ಬ್ರಹ್ಮನಂತೆಯೂ, ಷಡಂಗಗಳ ತಿಳಿವಳಿಕೆಯಲ್ಲಿ ಗಾರ್ಗ್ಯಮಹರ್ಷಿಯಂತೆಯೂ, ವೇದಗಳ ತಾತ್ಪರ್ಯಾರ್ಥವರ್ಣನೆಯಲ್ಲಿ ಬೃಹಸ್ಪತಿಗೆ ಸಮನೂ, ವೇದೋಕ್ತಕರ್ಮಗಳ ವಿವರಣೆಯಲ್ಲಿ ಜೈಮಿನಿಗಳಿಗೆ ಸದೃಶನೂ, ಇನ್ನು ವೇದಗಳ ಸಾರವಾದ ತತ್ತ್ವಜ್ಞಾನಪ್ರತಿಪಾದನೆಯಲ್ಲಿ ವೇದವ್ಯಾಸರಿಗೆ ಸರಿಸಾಟಿಯಾಗಿಯೂ ಆಗಿಬಿಟ್ಟನು. ಹಾಗೆಯೇ ನ್ಯಾಯಶಾಸ್ತ್ರ, ಸಾಂಖ್ಯಶಾಸ್ತ್ರ, ವ್ಯಾಕರಣಶಾಸ್ತ್ರ, ಪೂರ್ವಮಿಮಾಂಸಾಶಾಸ್ತ್ರ, ಇವುಗಳೆಲ್ಲವೂ ಕರತಲಾಮಲಕವಾಗಿದ್ದವು. ಅದ್ವೈತಸಿದ್ಧಾಂತವನ್ನು ಸಾಕ್ಷಾದಪರೋಕ್ಷವಾಗಿ ಕಂಡುಕೊಂಡಿದ್ದ ಈ ವಿದ್ಯಾಸಾಗರನಲ್ಲಿ ಉಳಿದ ನದೀಸ್ಥಾನೀಯಗಳಾದ ಸಮಸ್ತವಿದ್ಯೆಗಳು ಬಂದು ಸೇರಿಬಿಟ್ಟಿದ್ದವು. ಆದ್ದರಿಂದ ಗುರುಕುಲವಾಸದ ವ್ರತವನ್ನು ತನ್ನ ಎಂಟನೆಯ ವಯಸ್ಸಿನ ವೇಳೆಗೇ ಶ್ರೀಶಂಕರನು ಪೂರ್ಣಗೊಳಿಸಿಬಿಟ್ಟನು. ಬ್ರಹ್ಮತೇಜಸ್ಸಿನಿಂದ ಹೊಳೆಯುತ್ತಿದ್ದ ಈ ಬ್ರಹ್ಮಚಾರಿಯನ್ನು ಹಿರಿಯರೂ ಗೌರವಿಸುತ್ತಿದ್ದರು. ಹೀಗೆ ವಿದ್ಯಾಭ್ಯಾಸವನ್ನು ಪೂರ್ಣಗೊಳಿಸಿದ ಶ್ರೀಶಂಕರನು ತಾಯಿಯ ಸೇವೆಯನ್ನು ಮಾಡಿಕೊಂಡು ಕೆಲವು ಕಾಲ ಬ್ರಹ್ಮಚರ್ಯನಿರತನಾಗಿದ್ದುಕೊಂಡಿದ್ದನು. ಒಬ್ಬನೇ ಮಗನಾದ ಹಾಗೂ ಸಕಲವಿದ್ಯಾಪಾರಂಗತನಾದ ಈತನಿಗೆ ಆದಷ್ಟು ಬೇಗನೆ ವಿವಾಹವನ್ನೂ ನೆರವೇರಿಸಿಬಿಡಬೇಕೆಂದು ತಾಯಿಗೆ ಆಲೋಚನೆಯುಂಟಾಗಿದ್ದರೆ ಆಶ್ಚರ್ಯವೇನೂ ಇಲ್ಲ.

## ಶ್ರೀಶಂಕರನ ತಪಸ್ಸಿದ್ಧಿ :

ಆದರ್ಶಬ್ರಹ್ಮಚಾರಿಯೂ ವ್ರತನಿಷ್ಠನೂ ಆದ ಶ್ರೀಶಂಕರನ ಮಹತ್ತ್ವವನ್ನು ಲೋಕಕ್ಕೆ ಪ್ರಕಟಗೊಳಿಸುವ ಒಂದು ಸನ್ನಿವೇಶವು ಅಬ್ಯಗ್ರವಾಗಿ ಪ್ರಾಪ್ತವಾಯಿತು. ಒಂದು ದಿನ ಈ ಬ್ರಹ್ಮಚಾರಿಯು ಎಂದಿನಂತೆ ಭಿಕ್ಷಕ್ಕೆ ಹೊರಟವನಾಗಿ ಒಂದು

ಮನೆಯಮುಂದೆ ನಿಂತು 'ಭವತಿ ಭಿಕ್ಷಾಂ ದೇಹಿ' ಎಂದು ಕೇಳಿದನು. ಆ ಮನೆಯ ಯಜಮಾನಿಯು ಹೊರಗೆ ಬಂದು ನೋಡಿ ತೇಜಸ್ವಿಯಾದ ಈ ಬಾಲಕನಿಗೆ ಏನಾದರೂ ಭಿಕ್ಷೆಯನ್ನು ನೀಡೋಣವೆಂದು ಮನೆಯನ್ನೆಲ್ಲ ಹುಡುಕಿದಳು. ಆಕೆಯ ಮನೆಯಲ್ಲಿ ದರಿದ್ರಲಕ್ಷ್ಮಿಯು ಸಂಪೂರ್ಣವಾಗಿ ನೆಲೆಸಿದ್ದಳು. ಬ್ರಹ್ಮಚಾರಿಗೆ ಕೊಡಲು ಏನೂ ದೊರೆಯದಿದ್ದುದರಿಂದ ಖಿನ್ನಳಾದ ಆಕೆಯು 'ಮಗು, ನಾವು ತೀರ ದುರದೃಷ್ಟವಂತರು, ನಿನ್ನಂಥ ಬ್ರಹ್ಮಚಾರಿಗೆ ಭಿಕ್ಷೆಯನ್ನು ಕೊಡಲು ಏನೂ ಇಲ್ಲವಾಗಿದೆಯಲ್ಲ ? ಅಯ್ಯೊ, ನನ್ನ ಜನ್ಮವು ವ್ಯರ್ಥ' ಎಂದು ನೊಂದುಕೊಳ್ಳುತ್ತಾ ನುಡಿದಳು. ಆದರೂ ಮನಸ್ಸು ತಡೆಯದೆ ಮತ್ತೆ ಒಳಗೆ ಹೋಗಿ ಹುಡುಕಿ ಕಡೆಗೆ ಒಂದು ಒಣಗಿದ ನೆಲ್ಲಿಕಾಯಿಯು ದೊರೆಯಲು ಅದನ್ನೇ ತಂದು ಬ್ರಹ್ಮಚಾರಿಯ ಜೋಳಿಗೆಗೆ ಹಾಕಿದಳು. ಇದರಿಂದ ಆಕೆಯು ತನ್ನ ಸರ್ವಸ್ವವನ್ನೂ ಸತ್ಪಾತ್ರದಲ್ಲಿ ದಾನಮಾಡಿದಂತಾಯಿತು. ಶ್ರೀಶಂಕರನು ಈ ಕರುಣಾಜನಕವಾದ ಸ್ಥಿತಿಯನ್ನು ಕಂಡು ಮರುಗಿದವನಾಗಿ ಶ್ರೀಮಹಾಲಕ್ಷ್ಮಿಯನ್ನು ಕುರಿತು ಸ್ತೋತ್ರಮಾಡಿದನು. ಇವನ ಸ್ತೋತ್ರಕ್ಕೆ ಮೆಚ್ಚಿ ಲಕ್ಷ್ಮಿಯು ಪ್ರತ್ಯಕ್ಷಳಾದಳು. ಶ್ರೀಶಂಕರನು ಆ ದೇವಿಗೆ ವಂದಿಸಿ 'ಮಹಾತಾಯೆ, ಈ ಯಜಮಾನಿತಿಗೆ ಸಕಲೈಶ್ವರ್ಯವನ್ನೂ ದಯಪಾಲಿಸು' ಎಂದು ಕೇಳಿಕೊಂಡನು. ಆಗ ಲಕ್ಷ್ಮಿಯು 'ಅಯ್ಯ ಬ್ರಹ್ಮಚಾರಿಯೆ, ನನ್ನ ಪತಿಯಾದ ಶ್ರೀಮಹಾವಿಷ್ಣುವಿನ ಅಪ್ಪಣೆಯು ಹೀಗಿದೆ; 'ಯಾರು ಹಿಂದಿನ ಜನ್ಮಗಳಲ್ಲಿ ದಾನಧರ್ಮಗಳನ್ನು ನಡೆಯಿಸಿರುತ್ತಾರೋ ಅಂಥವರಿಗೆ ಮಾತ್ರ ಐಶ್ವರ್ಯವನ್ನು ನೀನು ಕೊಡತಕ್ಕದ್ದು;' ಹೀಗೆ ಭಗವಂತನು ಆಜ್ಞೆ ಮಾಡಿದ್ದಾನೆ. ಈ ಮಹಿಳೆಯಾದರೋ, ಹಿಂದೆ ಯಾವ ದಾನಧರ್ಮಗಳನ್ನೂ ಮಾಡಿರುವದಿಲ್ಲ. ಆದ್ದರಿಂದ ವಿಷ್ಣುವಿನ ಆಜ್ಞೆಯನ್ನು ಮೀರಿ ನಾನು ಹೇಗೆ ನಡೆಯಲಿ ? ಎಂದಳು. ಆಗ ಶ್ರೀಶಂಕರನು 'ತಾಯೆ, ಹಿಂದಿನ ಜನ್ಮದ ವಿಚಾರವು ಹಾಗಿರಲಿ. ಈಗ ಸತ್ಪಾತ್ರದಲ್ಲಿ ಸರ್ವಸ್ವವನ್ನೂ ದಾನಮಾಡಿದ್ದಕ್ಕೆ ಈಗಲೇ ಫಲವನ್ನು ನೀಡಬೇಕಲ್ಲವೆ? ಅತ್ಯುತ್ಕಟವಾದ ಪಾಪಪುಣ್ಯಗಳಿಗೆ ಇಲ್ಲಿಯೇ ಫಲವುಂಟಾಗಿಬಿಡುವದೆಂದು ಶಾಸ್ತ್ರವು ತಿಳಿಸುತ್ತದೆಯಲ್ಲವೆ?' ಎಂದನು. ಈ ಮಾತಿಗೆ ಮನಸೋತವಳಾಗಿ ಲಕ್ಷ್ಮೀದೇವಿಯು ಚಿನ್ನದ ನೆಲ್ಲಿಕಾಯಿಗಳನ್ನೇ ಮಳೆಗರೆದಳು. ಶ್ರೀಶಂಕರನು ಆಕೆಯನ್ನು ಕನಕಧಾರಾಸ್ತುತಿಗಳಿಂದ ಹಾಡಿ ಹೊಗಳಿದನು. ಉದಾಹರಣೆಗಾಗಿ ಒಂದು ಪದ್ಯವನ್ನು ನೋಡಿರಿ.

**ಗೀರ್ದೇವತೇತಿ ಗರುಡಧ್ವಜಸುಂದರೀತಿ**
**ಶಾಂಕಭರೀತಿ ಶಶಿಶೇಖರವಲ್ಲಭೇತಿ ।**
**ಸೃಷ್ಟಿಸ್ಥಿತಿಪ್ರಲಯಕೇಲಿಷು ಸಂಸ್ಥಿತಾಯೈ**
**ತಸ್ಯೈ ನಮಸ್ತ್ರಿಭುವನೈಕಗುರೋಸ್ತರುಣ್ಯೈ ॥**

'ವಾಗ್ದೇವಿಯೆಂದೂ ಗರುಡಧ್ವಜನಾದ ಮಹಾವಿಷ್ಣುವಿನ ಪತ್ನಿಯೆಂದೂ ಶಾಕಂಭರಿಯೆಂದೂ ಚಂದ್ರಶೇಖರನ ಅರ್ಧಾಂಗಿಯೆಂದೂ ನೀನೊಬ್ಬಳೇ ಜಗತ್ತಿನ ಉತ್ಪತ್ತಿ, ಸ್ಥಿತಿ, ಪ್ರಲಯವ್ಯಾಪಾರಗಳ ನಿಮಿತ್ತದಿಂದ ಸ್ತುತಿಸಲ್ಪಟ್ಟವಳಾಗಿರುವೆ. ಮೂರು ಲೋಕಗಳಿಗೂ ಒಡೆಯನೂ ಜಗದ್ಗುರುವೂ ಆದ ಶ್ರೀಮನ್ನಾರಾಯಣನ ಪತ್ನಿಯಾದ ನಿನಗೆ ನಮಸ್ಕಾರಗಳು''; ಹೀಗೆಂದು ಸ್ತುತಿಸಿ ನಮಸ್ಕರಿಸಿದನು. ಅನಂತರ ದೇವಿಯು ಅಂತರ್ಧಾನಳಾದಳು. ಈ ಮಹಿಮೆಯನ್ನು ಕಂಡು ಜನರೆಲ್ಲರೂ ಬೆರಗಾಗಿ ಶಂಕರನಲ್ಲಿ ಹೆಚ್ಚು ಗೌರವವನ್ನೂ ಭಕ್ತಿಶ್ರದ್ಧೆಗಳನ್ನೂ ಪ್ರಕಟಿಸಲಾರಂಭಿಸಿದರು.

## ಶ್ರೀಶಂಕರನ ಮಹಿಮೆ

ಈಶಾನನೂ ಸರ್ವವಿದ್ಯಾಧಿಪನೂ ಸರ್ವಭೂತಗಳಿಗೂ ಈಶ್ವರನೂ ಆಗಿರುವ ಕೈಲಾಸನಾಥನಾದ ಶಂಕರನೇ ಮಾನುಷಶಂಕರನಾಗಿ ಅವತಾರ ಮಾಡಿದ್ದನಾದ್ದರಿಂದ ಶಂಕರಬ್ರಹ್ಮಚಾರಿಯನ್ನು ಕಂಡ ವೇದಜ್ಞರು, ಶಾಸ್ತ್ರಜ್ಞರು, ಪಂಡಿತರು, ವಿದ್ವಾಂಸರುಗಳೆಲ್ಲರೂ ಈತನನ್ನು ನಾನಾರೀತಿಯಾಗಿ ವರ್ಣಿಸಿ ಆನಂದಪಡುತ್ತಿದ್ದರು. ಇವನ ಶರೀರಸೌಂದರ್ಯ, ಮುಖಭಾವ, ಸದ್ಗುಣಗಳ ಸಮೂಹ, ಅಪರಿಮಿತವಾದ ತೇಜಸ್ಸು, ಸಕಲವಿದ್ಯೆಗಳ ಸಮಾಗಮ, ನಯವಿನಯಾದಿಗಳು, ನಡೆನುಡಿಗಳು, ಗಾಂಭೀರ್ಯ, ಜನಪ್ರಿಯತೆ ಮುಂತಾದವುಗಳಿಂದ ಆಕರ್ಷಿತರಾದ ಜನರು ಈತನ ದರ್ಶನದಿಂದ ತಮ್ಮನ್ನೇ ತಾವು ಮರೆತುಬಿಡುತ್ತಿದ್ದರು. ಕೆಲವು ಭಾವುಕರಾದ ಭಕ್ತರಿಗೆ ಪರಮೇಶ್ವರನೇ ದಕ್ಷಿಣಾಮೂರ್ತಿಯಾಗಿ ಹಿಂದೆ ಅವತಾರಮಾಡಿದನು. ಈಗ ವಟವೃಕ್ಷದ ಬುಡದಿಂದ ಹೊರಟು ಸಾಕ್ಷಾತ್ತಾಗಿ ಶಂಕರಾಚಾರ್ಯರ ರೂಪದಿಂದ ಭೂಮಿಗೆ ಬಂದುಬಿಟ್ಟಿರುವನೋ- ಎಂಬ ಭಾವನೆಯುಂಟಾಗುತ್ತಿತ್ತು. ಬಲ್ಲವರು ಶಂಭುವಿನ ಮೂರ್ತಿಯೇ ಇಲ್ಲಿ ಓಡಾಡುತ್ತಿದೆಯೆಂದು ಕಂಡುಕೊಂಡರು. ಆಚಾರ್ಯರನ್ನು ಸ್ತುತಿಸುವ ಈ ಕೆಳಗಿನ ಶ್ಲೋಕವನ್ನು ಒಮ್ಮೆ ಮನನಮಾಡಿ ಮುಂದುವರೆಯೋಣ.

**ಅಜ್ಞಾನಾಂತರ್ಗಹನಪತಿತಾನಾತ್ಮವಿದ್ಯೋಪದೇಶೈಃ**
**ತ್ರಾತುಂ ಲೋಕಾನ್ ಭವದವಶಿಖಾತಾಪಪಾಪಚ್ಯಮಾನಾನ್।**
**ಮುಕ್ತ್ವಾ ಮೌನಂ ವಟವಿಟಪಿನೋ ಮೂಲತೋ ನಿಷ್ಪತಂತೀ**
**ಶಂಭೋರ್ಮೂರ್ತಿಶ್ಚರತಿ ಭುವನೇ ಶಂಕರಾಚಾರ್ಯರೂಪಾ॥**

''ದಟ್ಟವಾದ ಅಜ್ಞಾನವೆಂಬ (ಕಾಡಿನಲ್ಲಿ) ಸಿಕ್ಕಿಬಿದ್ದು ಸಂಸಾರವೆಂಬ ಭಯಂಕರವಾದ ಕಾಡುಗಿಚ್ಚಿನಿಂದ ಸುಡಲ್ಪಡುತ್ತಾ ಬಳಲುತ್ತಿರುವ ಜನರನ್ನು ಆತ್ಮವಿದ್ಯೋಪದೇಶಗಳಿಂದ ಉದ್ಧರಿಸಿ ಕಾಪಾಡುವದಕ್ಕಾಗಿ ಮೌನವನ್ನು ಮುರಿದು ವಟವೃಕ್ಷದ ಬುಡದಿಂದ ಹೊರಬಂದು ಸಂಚರಿಸುತ್ತಿರುವ ಶಂಭುವಿನ

ದಿವ್ಯಮೂರ್ತಿಯೇ ಶಂಕರಾಚಾರ್ಯರೆಂಬ ರೂಪದಿಂದ ಓಡಾಡುತ್ತಿರುವದು.'' ಹೀಗೆಂದು ಮಾಧವೀಯಶಂಕರವಿಜಯಕಾರರು ಸ್ತುತಿಸಿರುತ್ತಾರೆ. ಇನ್ನು ಮುಂದೆ ಶಂಕರಾಚಾರ್ಯರೆಂದೇ ನಾವೂ ವ್ಯವಹರಿಸೋಣ.

## ಆಚಾರ್ಯರ ಮಾತೃಸೇವೆ :

ಸಕಲವಿದ್ಯಾಪಾರಂಗತರಾದ ಆಚಾರ್ಯರು ತಮ್ಮ ಎಳನೆಯ ವಯಸ್ಸಿಗೇ ಕಲಿಯಬೇಕಾದದ್ದೆಲ್ಲವನ್ನೂ ಪೂರೈಸಿದ್ದರಿಂದ ಅನಂತರ ತಾಯಿಯೊಡನೆ ಇದ್ದುಕೊಂಡು ಆಕೆಯ ಸೇವಾತತ್ಪರರಾಗಿದ್ದರು. ಒಂದು ದಿನ ತಾಯಿಯು ಸ್ನಾನಕ್ಕಾಗಿ ನದಿಗೆ ಹೋಗಿದ್ದವಳು ಹಿಂದಿರುಗಿ ನಡೆದುಬರುವಾಗ ಬಿಸಿಲಿನಿಂದ ಬಹಳವಾಗಿ ಬಳಲಿದವಳಾಗಿ ತಡಮಾಡಿದಳು. ಶಂಕರರು ಕೂಡಲೆ ಆಕೆಯನ್ನು ಹುಡುಕಿಕೊಂಡು ಹೊರಟು ದಣಿವಾರಿಸಿಕೊಳ್ಳುತ್ತಿದ್ದ ಅವಳನ್ನು ಜನರ ಸಹಾಯದಿಂದ ಎತ್ತಿತಂದು ಮನೆಗೆ ಬಿಟ್ಟರು. ತಾವರೆಯ ಹೂಗಳಿಂದ ಗಾಳಿಯನ್ನು ಬೀಸಿ ಉಪಚಾರಮಾಡಿದರು. ಅನಂತರ ನದಿಯನ್ನೇ ಮನೆಗೆ ಸಮೀಪವಾಗಿಯೇ ಹರಿಯುವಂತೆ ಮಾಡಬೇಕೆಂದು ನದೀದೇವಿಯನ್ನು ಪ್ರಾರ್ಥಿಸಿದರು. ಆಗ ದೇವಿಯು ಸಂತುಷ್ಟಳಾಗಿ ನಾಳೆಯ ದಿನವೇ ನಿನ್ನ ಇಷ್ಟಾರ್ಥವು ಕೈಗೂಡುವದೆಂದು ವರದಾನಮಾಡಿದಳು. ಸಕಲರಿಗೂ ಒಳ್ಳೆಯದನ್ನು ಕೋರುವವರಿಗೆ ಒಳ್ಳೆಯದಾಗುವದೆಂಬುದೇ ಪ್ರಕೃತಿನಿಯಮವು. ಅದರಂತೆ ಆಚಾರ್ಯರಿಗೂ ಫಲವಾಯಿತು. ಮಾರನೆಯ ಬೆಳಿಗ್ಗೆ ಎದ್ದು ನೋಡಲಾಗಿ ನದಿಯು ಮನೆಯ ಸಮೀಪದಲ್ಲಿಯೇ ಹರಿಯುತ್ತಿತ್ತು. ಈ ಅದ್ಭುತವನ್ನು ಕಂಡು ಜನರೆಲ್ಲರೂ ಆಶ್ಚರ್ಯಭರಿತರಾದರು.

## ರಾಜನಿಗೆ ಅನುಗ್ರಹ :

ಆಚಾರ್ಯರು ನದಿಯನ್ನು ಮನೆಯ ಬಳಿಗೆ ಬದಲಾಯಿಸಿದರೆಂಬ ಸುದ್ದಿಯು ಆ ದೇಶದ ರಾಜನಿಗೂ ಮುಟ್ಟಿತು. ಚಿಕ್ಕವಯಸ್ಸಿನಲ್ಲಿಯೇ ಇಂಥ ತಪಸ್ವಿಗಳೂ ಸಿದ್ಧಿಸಂಪನ್ನರೂ ಆದ ಇವರನ್ನು ಭೇಟಿಮಾಡಬೇಕೆಂದು ಇಚ್ಛಿಸಿ ರಾಜನು ಆಹ್ವಾನವನ್ನು ನೀಡಿದನು. ಬ್ರಹ್ಮಚರ್ಯಾಶ್ರಮದ ನಿಯಮಗಳನ್ನೂ ಮೀರಿ ರಾಜನ ದರ್ಶನವನ್ನು ಮಾಡಿ ಸಾಧಿಸಬೇಕಾದದ್ದೇನಿದ್ದೀತು? ರಾಜನಿಂದ ಧನಾದಿಗಳನ್ನು ಪ್ರತಿಗ್ರಹಮಾಡಬೇಕಾದ ಅವಶ್ಯಕತೆಯೇನಿದೆ? ಎಂದುಕೊಂಡು ಆಚಾರ್ಯರು ರಾಜನ ದರ್ಶನಕ್ಕೆ ಹೋಗಲಿಲ್ಲ. ಈ ವಿಚಾರವು ರಾಜನಿಗೆ ತಿಳಿದು ಅವನು ತಾನೇ ಆಚಾರ್ಯರ ಸಂದರ್ಶನಕ್ಕಾಗಿ ಬಂದನು. ಹತ್ತು ಸಾವಿರ ಸಂಖ್ಯೆಯ ಸುವರ್ಣನಾಣ್ಯಗಳನ್ನು ಕಾಣಿಕೆಯಾಗಿ ಅರ್ಪಿಸಿ ತಾನು ರಚಿಸಿದ್ದ ಮೂರು ನಾಟಕಗ್ರಂಥಗಳನ್ನು ಅವಲೋಕನಮಾಡಬೇಕೆಂದು ಒಪ್ಪಿಸಿದನು. ಧನದ ವ್ಯಾಮೋಹವನ್ನು ಮೊದಲೇ ಗೆದ್ದಿದ್ದ ಆಚಾರ್ಯರು ರಾಜನನ್ನು ಕುರಿತು

'ಭೂಪಾಲನೆ, ಈ ನಾಣ್ಯಗಳ ಅವಶ್ಯಕತೆಯು ನನಗಿಲ್ಲ. ನಾನು ಬ್ರಹ್ಮಚಾರಿ. ಆದ್ದರಿಂದ ಇದನ್ನು ಹೇಗೆ ವಿನಿಯೋಗ ಮಾಡಲಿ? ನೀನೇ ಈ ಧನವನ್ನು ಒಯ್ದು ಗೃಹಸ್ಥರಾದ ಯೋಗ್ಯರಾದ ಹಾಗೂ ಅವಶ್ಯಕತೆಯುಳ್ಳ ಜನರಿಗೆ ಹಂಚಿಬಿಡು' ಎಂದರು. ಇದು ಆಚಾರ್ಯರ ವಿರಕ್ತಿಗೆ ಉದಾಹರಣೆಯಾಗಿದೆ. ಈಗಲೂ ಲೋಕದಲ್ಲಿ ಜನರು ವಿರಕ್ತರಿಗೆ ಧನವನ್ನು ಅರ್ಪಿಸುವದು, ಏನನ್ನೂ ಎಂದೆಂದೂ ಕೇಳದ ದೇವರಿಗೆ - ಎಂತ ಡಬ್ಬಿಗಡಿಗೆಗೆ ಹಣವನ್ನು ಹಾಕುವದು- ಹೀಗೆ ಮಾಡುತ್ತಾರೆ. ಇದು ಭಕ್ತಿಯ ಕುರುಹು- ಎಂದುಕೊಳ್ಳಬಹುದಾದರೂ ಆಚಾರ್ಯರ ದೃಷ್ಟಿಯಂತೆ ಅವಶ್ಯವಿರುವವರಿಗೆ ಹಂಚುವದೇ ಹೆಚ್ಚಿನ ಸದ್ವಿನಿಯೋಗವಾಗಿರುತ್ತದೆ. ಈ ಘಟನೆಯಿಂದ ನಾವು ಪಾಠ ಕಲಿಯಬೇಕು. ಇರಲಿ. ಮಹಾರಾಜನು ರಚಿಸಿದ್ದ ನಾಟಕಗ್ರಂಥಗಳನ್ನು ಅವಲೋಕಿಸಿ ಆಚಾರ್ಯರು ಅನುಗ್ರಹಿಸಿದರು. ಅನಂತರ ರಾಜನು ತನಗೆ ಮಕ್ಕಳಾಗುವಂತೆ ವರಪ್ರದಾನಮಾಡಬೇಕೆಂದು ಕೇಳಿಕೊಂಡನು. ಆಗ ಅವನಿಗೆ ಪುತ್ರಪ್ರಾಪ್ತಿಯಾಗುವಂಥ ಒಂದು ಶುಭವೈದಿಕಕರ್ಮವನ್ನು ತಿಳಿಸಿಕೊಟ್ಟು 'ನಿನ್ನ ಇಷ್ಟಾರ್ಥಸಿದ್ಧಿಯಾಗಲಿದೆ'- ಎಂದು ಹರಸಿದರು. ರಾಜನು ಹಿಂದಿರುಗಿದ ಅನಂತರ ಎಂದಿನಂತೆ ಆಚಾರ್ಯರು ಮಾತೃಸೇವಾತತ್ಪರರಾಗಿದ್ದರು.

**ಋಷಿಗಳ ಸಮಾಗಮ :**

ತ್ರಿಕಾಲಜ್ಞರಾದ ಮಹರ್ಷಿಗಳು ಪರಮೇಶ್ವರನು ತನ್ನ ಅಂಶದಿಂದ ಶಂಕರನಾಗಿ- ಅವತಾರಮಾಡಿದ್ದಾನೆಂಬುದನ್ನರಿತು ಅವನ ದರ್ಶನಕ್ಕಾಗಿ ಬಂದರು. ಉಪಮನ್ಯು, ದಧೀಚಿ, ಗೌತಮ, ತ್ರಿತಲ, ಅಗಸ್ತ್ಯರೇ ಮೊದಲಾದ ಋಷಿಗಳ ಗುಂಪು ತಮ್ಮ ಮನೆಗೇ ಬರಲು ಆಚಾರ್ಯರು ಬಹುಸಂತೋಷಗೊಂಡರು. ಇಂಥ ವಿಪ್ರೋತ್ತಮರ ದರ್ಶನವು ದುರ್ಲಭವೆಂದೇ ಆಚಾರ್ಯರು ಭಾವಿಸಿದರು. ಈ ಕೆಳಗಿನ ಸ್ಮೃತಿವಾಕ್ಯವನ್ನು ಕೇಳಿರಿ :

**ವಿಪ್ರೌಘದರ್ಶನಾತ್ ಸದ್ಯಃ ಕ್ಷೀಯಂತೇ ಪಾಪರಾಶಯಃ ।**
**ವಂದನಾನ್ಮಂಗಳಾವಾಪ್ತಿರರ್ಚನಾದಚ್ಯುತಂ ಪದಮ್ ॥**

'ಬ್ರಾಹ್ಮಣರ ಗುಂಪನ್ನು ಕಂಡ ಮಾತ್ರದಿಂದ ಪಾಪರಾಶಿಗಳೆಲ್ಲವೂ ಕ್ಷಯಿಸಿ ಹೋಗಿಬಿಡುವವು. ನಮಸ್ಕರಿಸಿದ್ದೇ ಆದರೆ ಮಂಗಳಪ್ರಾಪ್ತಿಯಾಗುವದು. ಇನ್ನು ಪೂಜೆಮಾಡಿದರಂತೂ ಶಾಶ್ವತವಾದ ಸ್ವರ್ಗಪದವಿಯೇ ದೊರಕಿಬಿಡುವದು' ಎಂದು ಶ್ಲೋಕದ ಅಭಿಪ್ರಾಯವು. ತಪಸ್ಸಿದ್ಧರೂ ಮಹಾಶ್ರೋತ್ರಿಯರೂ ಬ್ರಹ್ಮಶ್ರೀವಿರಾಜಮಾನರೂ ಆದ ಮಹರ್ಷಿಗಳನ್ನು ಆಚಾರ್ಯರು ಸ್ವಾಗತಿಸಿ ನಮಸ್ಕರಿಸಿ ಅರ್ಘ್ಯಪಾದ್ಯಾದಿಗಳನ್ನರ್ಪಿಸಿ ಕುಳ್ಳಿರಿಸಿದರು. ಆಚಾರ್ಯರೊಡನೆ ಆ ಮಹರ್ಷಿಗಳು ಕೆಲವು ಸಮಯವನ್ನು ತತ್ತ್ವವಿಚಾರದಲ್ಲಿ ತತ್ಪರರಾಗಿ ಕಳೆದರು. ಅನಂತರ

ಆರ್ಯಾಂಬೆಯು ಅವರುಗಳನ್ನು ಸಂದರ್ಶಿಸಿ 'ಪೂಜ್ಯರೆ, ಇಂಥ ಕಲಿಯುಗದಲ್ಲಿ ಸಜ್ಜನರ ದರ್ಶನವೇ ದುರ್ಲಭವು. ತಮ್ಮಂಥ ತಪಸ್ವಿಗಳ ದರ್ಶನವಾದದ್ದು ನನ್ನ ಪುಣ್ಯವೇ ಸರಿ. ಈ ನನ್ನ ಮಗುವು ತೀರ ಚಿಕ್ಕವಯಸ್ಸಿನಲ್ಲಿಯೇ ಸಮಸ್ತವಿದ್ಯೆಗಳಲ್ಲಿಯೂ ಪಾರಂಗತನಾಗಿರುವನು. ಈತನ ಮಹಿಮೆಯು ಅದ್ಭುತವಾಗಿದೆ. ಹಿಂದಿನ ಜನ್ಮಗಳಲ್ಲಿ ಇವನು ಯಾವ ತಪಸ್ಸು ಮಾಡಿದ್ದನೋ ನಾನರಿಯೆ. ತಾವು ತಿಳಿಸಬಹುದಾದರೆ ಕೇಳುವೆನು' ಎಂದಳು. ಆಗ ಅಲ್ಲಿದ್ದ ಋಷಿಗಳಲ್ಲೆಲ್ಲ ಹಿರಿಯರಾದ ಅಗಸ್ತ್ಯರು ಹೀಗೆಂದರು : 'ತಾಯೆ, ಹಿಂದೆಯೇ ನೀನು ಪುತ್ರಪ್ರಾಪ್ತಿಗಾಗಿ ಪತಿಯೊಡನೆ ಪರಮೇಶ್ವರನನ್ನು ಆರಾಧಿಸಿ ವರವನ್ನು ಪಡೆದುಕೊಂಡೆಯಲ್ಲವೆ? ನಿನ್ನ ಭಾಗ್ಯವಶದಿಂದ ಶಿವನೇ, ನಿನ್ನ ಮಗನಾಗಿ ಅವತರಿಸಿರುವನು. ನೀನೇ ಧನ್ಯಳು' ಎಂದರು. ಆರ್ಯಾಂಬೆಯು ಅಷ್ಟಕ್ಕೇ ಸುಮ್ಮನಾಗದೆ 'ಮಹಾತ್ಮರೆ, ಈ ಮಗುವಿನ ಆಯುಸ್ಸೆಷ್ಟು? ಹೇಳಿರಿ' ಎಂದು ಕೇಳಿಬಿಟ್ಟಳು. ಅಗಸ್ತ್ಯರಿಗೆ ಇದರಿಂದ ನಿಜವನ್ನೇ ಆದರೂ ಅಪ್ರಿಯವನ್ನು ಹೇಳಬೇಕಾದ ಸಂದರ್ಭವೊದಗಿತು. ಸನಾತನಧರ್ಮದಂತೆ ಸತ್ಯವನ್ನೇ ಆದರೂ ಅಪ್ರಿಯವಾದದ್ದಾದರೆ ನುಡಿಯಲೇಬೇಕೆಂದು ನಿರ್ಬಂಧವೇನೂ ಇಲ್ಲ. ಆದರೆ ಆರ್ಯಾಂಬೆಯು ಕೇಳಿಕೊಂಡದ್ದರಿಂದ ಹೇಳಲೇಬೇಕಾಗಿ ಬಂದಿತು. ಆಗ ಅವರು "ಈ ಮಗುವಿಗೆ ವಿಧಿದತ್ತವಾದ ಆಯುಸ್ಸು ಎಂಟು ವರ್ಷಗಳು. ಅನಂತರ ತನ್ನ ಅನುಷ್ಠಾನಗಳ ಹಾಗೂ ಆಶ್ರಮಬದಲಾವಣೆಯ ನಿಮಿತ್ತವಾಗಿ ಇನ್ನೂ ಎಂಟು ವರ್ಷಗಳು ವೃದ್ಧಿಯಾಗುವವು. ಮುಂದೆ ಲೋಕೋಪಕಾರಕಾರ್ಯಕ್ಕಾಗಿ ಮತ್ತೆ ಹದಿನಾರುವರ್ಷಗಳು ಲಭಿಸುವವು' ಎಂದರು. ಇದನ್ನು ಕೇಳಿ ಆರ್ಯಾಂಬೆಯು ಬಹಳ ದುಃಖಿತಳಾದಳು. ಆಚಾರ್ಯರಿಗೇನೂ ಭಯವಾಗಲಿಲ್ಲ. ಅದಕ್ಕೆ ಬದಲಾಗಿ ಉಳಿದಿರುವ ಆಯುಷ್ಯದ ಕೆಲವೇ ದಿನಗಳೊಳಗಾಗಿ ಸಂನ್ಯಾಸಿಯಾಗಿ ಹೊಸ ಬದುಕನ್ನು ಪೊಂದಲು ಸಂಕಲ್ಪಿಸಿದರು. ಋಷಿಗಳೆಲ್ಲರೂ ಸ್ವಸ್ಥಾನಗಳಿಗೆ ದಯಮಾಡಿಸಿದರು.

---

# ೩. ಆಚಾರ್ಯರ ಸಂನ್ಯಾಸಸ್ವೀಕಾರ

## ತಾಯಿಯನ್ನು ಸಮಾಧಾನಗೊಳಿಸಿದುದು :

ಆರ್ಯಾಂಬೆಯು ತನ್ನ ಪುತ್ರನಿಗೆ ವಿವಾಹವನ್ನು ಮಾಡಿ ಮುಂದಿನ ದಿನಗಳಲ್ಲಿ ಮಗನು ಎಲ್ಲರಂತೆ ಸಂಸಾರಿಯಾಗಿ ಬಾಳಿ ಪುತ್ರರನ್ನು ಪಡೆದುದನ್ನು ಕಾಣಬೇಕೆಂಬ ಆಶೆಯುಳ್ಳವಳಾಗಿದ್ದಳು. ಆದರೆ ಮಗನ ಅಲ್ಪಾಯುಸ್ಸಿನ ಸುದ್ದಿಯು ಅವಳಿಗೆ ಹೆಚ್ಚಿನ ಆಘಾತವನ್ನುಂಟುಮಾಡಿತು. ಇದರಿಂದ ಶೋಕಾವಿಷ್ಟಳಾದಳು. ಆಗ ಶಂಕರರು ಸಮಾಧಾನಮಾಡಲಾರಂಭಿಸಿ ಕೆಲವು ಹಿತೋಪದೇಶಗಳನ್ನಿತ್ತರು. 'ಅಂಬ, ಕೇಳು; ನೀನು ತಾಯಿಯೆಂದೂ, ನಾನು ಮಗನೆಂದೂ ತಿಳಿದಿರುವೆಯಷ್ಟೆ, ಇದು ಎಷ್ಟರ ಮಟ್ಟಿಗೆ ಸರಿ? ಎಂಬುದನ್ನು ವಿಚಾರಮಾಡುವವಳಾಗು. ಏಕೆಂದರೆ ನನಗೂ ನಿನಗೂ ಈ ಹಿಂದೆಯೇ ಎಷ್ಟೋ ಜನ್ಮಗಳು ಬಂದು ಹೋಗಿವೆ. ಸಂಸಾರದಲ್ಲಿ ಜೀವರುಗಳು ಹುಟ್ಟುವದು, ಸಾಯುವದು ನಿತ್ಯಸಂಗತಿಯಾಗಿದೆ. ಹಿಂದಿನ ಜನ್ಮಗಳಲ್ಲಿ ನೀನು ಎಷ್ಟೊಂದು ಮಕ್ಕಳನ್ನು ಹಡೆದು ಸಾಕಿದ್ದೀಯೋ, ತಿಳಿಯದು. ಅವರಾರೂ ಈಗ ನಿನಗೆ ಇಲ್ಲ. ನೀನು ಅವರ ಪಾಲಿಗೆ ಇಲ್ಲವಾಗಿರುವೆ. ಆದ್ದರಿಂದ ಈ ದೇಹಸಂಬಂಧವೂ ದೇಹನಿಮಿತ್ತವಾದ ಮಗ, ತಂದೆ, ತಾಯಿ, ಗಂಡ, ಹೆಂಡತಿ- ಮುಂತಾದವರೂ ದಾರಿಹೋಕರು ಒಮ್ಮೆ ಒಟ್ಟುಗೂಡಿ ಅಗಲುವಂತೆಯೇ ಸರಿ. ಶಾಶ್ವತವಲ್ಲ. ಸಂಯೋಗವು ವಿಪ್ರಯೋಗದಲ್ಲಿಯೇ ಕೊನೆಗಾಣಲಿದೆ. ಆದ್ದರಿಂದ ಚಿಂತಿಸಬೇಡ. ನಾನಾದರೊ, ಈ ಭ್ರಾಂತಿಮಯವಾದ ಸಂಸಾರದಿಂದ ಬಿಡುಗಡೆಯನ್ನು ಹೊಂದಿ ಮುಕ್ತನಾಗಲು ಸರ್ವಸಂಗಪರಿತ್ಯಾಗವನ್ನು ಕೈಗೊಂಡು ಸಂನ್ಯಾಸಿಯಾಗುವೆನು. ಏಕೆಂದರೆ ಸಂಸಾರದಲ್ಲಿ ಸುಖವೇನೂ ಕಂಡುಬರುತ್ತಿಲ್ಲ. ನೀನು ನನಗೆ ಅನುಮತಿಯನ್ನು ಕೊಡು' ಎಂದು ಕೇಳಿದರು. ಈ ಮಾತುಗಳಲ್ಲಿ- ಅದರಲ್ಲಿಯೂ ಏಕಮಾತ್ರ ಪುತ್ರನಾದ ಶಂಕರನು ತನ್ನನ್ನು ಇಳಿಯ ವಯಸ್ಸಿನಲ್ಲಿ ತಬ್ಬಲಿಯಾಗಿ ಮಾಡಿ ಮತ್ತೊಮ್ಮೆ ಮುಖವನ್ನೂ ತೋರಿಸದಂತೆ ತ್ಯಾಗಮಾಡಿ ಹೊರಡುವಂಥ ಸಂನ್ಯಾಸದ ಮಾತು- ಆರ್ಯಾಂಬೆಗೆ ಇನ್ನೂ ಕಠೋರವಾದ ದುಃಖಕ್ಕೆ ಕಾರಣವಾಗಿಬಿಟ್ಟಿತು. ಆಕೆಯು ''ಪುತ್ರನೆ, ಎಲ್ಲ ಧರ್ಮಸೂಕ್ಷ್ಮಗಳನ್ನೂ ಬಲ್ಲ ಹಾಗೂ ಕರ್ತವ್ಯಗಳನ್ನು ಬಲ್ಲ ಮಾತೃಭಕ್ತನಾದ ನೀನು ಹೀಗೆ ಹೇಳಬಹುದೆ? ನೀನು ಸಂನ್ಯಾಸಿಯಾದರೆ ನನ್ನ ಗತಿಯೇನು? ನಿನ್ನನ್ನು ನಾನು ಪಡೆದು ಫಲವೇನಾಯಿತು? ನಿನ್ನ ವರ್ತನೆಯು ಸರಿಯೆ? ಇನ್ನೊಮ್ಮೆ ಯೋಚಿಸು''

ಎಂದು ನುಡಿದಳು. ಆಚಾರ್ಯರು ಇತ್ತ ತಾಯಿಯನ್ನೂ ಬಿಡಲಾರದೆ, ಅತ್ತ ಸವೆದುಹೋಗುತ್ತಿರುವ ಆಯುಷ್ಯದೊಳಗಾಗಿ ಬ್ರಹ್ಮಸಂಸಿದ್ಧಿಯನ್ನು ಹೊಂದಿಬಿಡಬೇಕೆಂಬ ಸಂಕಲ್ಪವನ್ನೂ ಬಿಡಲಾರದೆ ಸ್ವಲ್ಪ ಕಾಲ ಚಿಂತೆಗೊಳಗಾದರು. ಇಂಥ ದ್ವಂದ್ವಗಳು ಒದಗಿದಾಗ ವಿವೇಕಿಯು ಹೇಗೆ ನಿಭಾಯಿಸುತ್ತಾನೆಂಬುದು ಮುಂದಿನ ಕಥೆಯಿಂದ ತಿಳಿಯಲಿದೆ.

## ಮನಸ್ಸಿದ್ದಲ್ಲಿ ಮಾರ್ಗ:

'ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್' ಎಂಬ ಅಭಿಯುಕ್ತರ ವಾಕ್ಯವೊಂದುಂಟು. ಯಾವ ದಿನ ಯಾವ ಘಳಿಗೆಯಲ್ಲಿ ವಿರಕ್ತಿಯುಂಟಾದರೂ ಸರಿ, ಕೂಡಲೆ ಸಂನ್ಯಾಸಮಾಡಬೇಕು ಎಂದು ಅದರ ಅರ್ಥ. ಆದರೆ ಕೆಲವರಿಗೆ ಹೇಗೆ ಆಚಾರ್ಯರಿಗೆ ಮಾತೃಸೇವೆಯು ಕರ್ತವ್ಯವಾಗಿತ್ತೋ- ಹಾಗೆ ಏನಾದರೂ ಅಡ್ಡಿಗಳಿದ್ದಲ್ಲಿ ಸ್ವಲ್ಪ ವಿಳಂಬವಾಗಿ ಪ್ರವ್ರಜನಮಾಡಬೇಕಾಗುತ್ತದೆ. ಆದರೆ ಸಂನ್ಯಾಸಕ್ಕೆ ತಕ್ಕ ಸಿದ್ಧತೆಯನ್ನಂತೂ ಮಾಡಿಕೊಂಡೇ ಇರಬೇಕು. ವೈರಾಗ್ಯವನ್ನು ದೃಢವಾಗಿ ಕಾಪಾಡಿಕೊಳ್ಳಬೇಕು. ಸಮಯವು ಒದಗಿದ ಕೂಡಲೆ ಸಂನ್ಯಾಸ ಮಾಡಬೇಕು. ಆಚಾರ್ಯರು ಸಹ ತಮ್ಮ ವೈರಾಗ್ಯದ ಒಲವನ್ನು ತಾಯಿಗೂ ಆಗಾಗ್ಗೆ ತಿಳಿಸುತ್ತಾ ಆಕೆಯ ಅನುಮತಿಯನ್ನು ನಿರೀಕ್ಷಿಸುತ್ತಿದ್ದರು. ಒಮ್ಮೆ ಸ್ನಾನಕ್ಕಾಗಿ ನದಿಗೆ ಹೋದಾಗ ಅನಿರೀಕ್ಷಿತವಾಗಿ ಒಂದು ಮೊಸಳೆಯು ಅವರ ಕಾಲನ್ನು ಹಿಡಿದುಕೊಂಡಿತು. ಕೂಡಲೆ ತಾಯಿಯನ್ನು ಕೂಗಿ ಕರೆದರು. ಆಕೆಯು ಓಡಿ ಬಂದು ದಿಕ್ಕುತೋಚದೆ ನಿಂತಳು. ಆಗ ಆಚಾರ್ಯರು 'ಅಂಬ, ನಾನು ಸಂನ್ಯಾಸಿಯಾದರೆ ಈ ಮೊಸಳೆ ಬಿಟ್ಟು ಹೋಗಲಿದೆ; ಕೂಡಲೆ ಸಂನ್ಯಾಸಕ್ಕೆ ಅಪ್ಪಣೆಯನ್ನು ಕೊಡು' ಎಂದರು. ಆಕೆಯು 'ಆಹಾ ! ಸಂನ್ಯಾಸಿಯಾಗಿಯಾದರೂ ಮಗನು ಬದುಕಿರಲಿ, ಮೊಸಳೆಗೆ ತುತ್ತಾಗುವದು ಬೇಡ' - ಎಂದುಕೊಂಡು ಅನುಮತಿಯನ್ನು ಕೊಟ್ಟಳು. ಮೊಸಳೆಯು ಕಾಲನ್ನು ಬಿಟ್ಟಿತು. ಆಚಾರ್ಯರು ಮೇಲಕ್ಕೆ ಬಂದು ತಾಯಿಯನ್ನು ನಮಸ್ಕರಿಸಿದರು. ಇದೊಂದು ಅದ್ಭುತ ಘಟನೆಯೆಂದೇ ಜನರೆಲ್ಲರೂ ಮಾತನಾಡಿಕೊಂಡರು. ಆಚಾರ್ಯರಿಗೆ ಮಾತ್ರ ತಾನು ಸಂಸಾರವೆಂಬ ಮೊಸಳೆಯ ಬಾಯಿಯಿಂದ ಬಿಡುಗಡೆಯನ್ನು ಹೊಂದಿದ ಬಗ್ಗೆ ತೃಪ್ತಿಯೂ, ಸಂತೋಷವೂ ಆಯಿತು.

ಸಂನ್ಯಾಸಧರ್ಮದ ತಿರುಳೆಂದರೆ 'ಅಭಯದಕ್ಷಿಣೆ'. ತಾನು ಯಾರಿಗೂ ಎಂದೆಂದಿಗೂ ಭಯವುಂಟುಮಾಡುವದಿಲ್ಲ; ಯಾರನ್ನೂ ಯಾವ ಕಾರಣಕ್ಕಾಗಿಯೂ ಹಿಂಸಿಸುವದಿಲ್ಲ- ಎಂಬಿದೇ ಅಭಯಪ್ರದಾನವು. ಇದು ಹೃತ್ಪೂರ್ವಕವಾಗಿ ಯಾವನಿಗೆ ಅಳವಟ್ಟಿರುವದೋ ಅಂಥವನ ವಿಷಯದಲ್ಲಿ ಲೋಕವೂ ಹಾಗೆಯೇ ನಿರಾತಂಕವಾಗಿರುವದು. ಯಾರಿಂದ ಲೋಕಕ್ಕೆ ಉದ್ವೇಗವಿಲ್ಲವೋ ಲೋಕದ ವ್ಯವಹಾರದಿಂದಲೂ ಯಾವನು

ಉದ್ವೇಗಗೊಳ್ಳುವದಿಲ್ಲವೋ, ಅಂಥವನು ಭಗವಂತನಿಗೆ ಪ್ರಿಯನೂ ಸರ್ವಕರ್ಮಸಂನ್ಯಾಸಿಯೂ ಆಗಿರುವನು. ಇಂಥವನು ದೃಷ್ಟಿಯಲ್ಲಿ ಎಲ್ಲವೂ ಆತ್ಮನಾಗಿಯೇ ಕಂಡುಬರುವದು. 'ಮೊಸಳೆಯು ದುಷ್ಟಪ್ರಾಣಿಯು; ಅದು ಮಾನವನು ಶತ್ರು' ಎಂಬ ಭಾವನೆಯಿರುವವನಿಗೆ ಅದು ಹಿಡಿದುಕೊಂಡು ಹಿಂಸಿಸುವದು ನಿಜ. ಆದರೆ ಮೊಸಳೆಯಲ್ಲಿರುವ ಆತ್ಮ ಚೈತನ್ಯವೇ ತನ್ನಲ್ಲೂ ಇದ್ದುಕೊಂಡಿದೆ- ಎಂಬ ಭಾವವುಳ್ಳವನಿಗೆ ಮೊಸಳೆಯು ಹೇಗೆ ಶತ್ರುವಾದೀತು? ಏನೂ ಅರಿಯದ ತೊಟ್ಟಿಲಲ್ಲಿರುವ ಚಿಕ್ಕ ಮಗುವು ಹರಿಯುತ್ತಿರುವ ಹಾವನ್ನು ಮುಟ್ಟಿದರೆ ಪ್ರಾಯಶಃ ಅದು ಕಚ್ಚಲಾರದು. ಹಾವು ಸಹ ತನ್ನ ಹೆಡೆಯನ್ನು ಬಿಚ್ಚಿ ನಲಿಯುತ್ತಾ ಮಗುವಿನೊಡನೆ ಆನಂದಪಡಬಹುದು. ಆದರೆ ಅದು ಕಚ್ಚೀತೆಂಬ ಭಯವು 'ಅದು ನಮಗೆ ವೈರಿ' - ಎಂದು ಭಾವಿಸುವವರಿಗೆ ಅನ್ವಯಿಸಲಿದೆ. ಆದ್ದರಿಂದ ಮೊಸಳೆಯ ವಿಷಯಕ್ಕೆ ಆಚಾರ್ಯರಿಗೆ ಆತ್ಮಭಾವನೆಯೂ ತಾನು ಸಂನ್ಯಾಸಿಯಾಗಿಬಿಟ್ಟಿದ್ದರಿಂದ ಎಲ್ಲವೂ ನನಗೆ ಸ್ನೇಹಪಾತ್ರವೇ ಹೊರತು ವೈರಿಯಲ್ಲವೆಂದೂ ಮನಸ್ಸಿನಲ್ಲಿ ಬಂದದ್ದರಿಂದ ಅದನ್ನು ಅಭಯಪ್ರದಾನದಿಂದ ಕಂಡುಕೊಂಡದ್ದೂ ಹಾಗೆ ಬಿಟ್ಟುಹೋಗಲು ಕಾರಣವಾಗಿರಬಹುದು. ಅಂತೂ ಆಚಾರ್ಯರು ತಾಯಿಯ ಅನುಮತಿಯು ದೊರಕಿದಕೂಡಲೆ ಜಲದಲ್ಲಿಯೇ ನಿಂತು 'ಸಂನ್ಯಸ್ತಂ ಮಯಾ' ಎಂದು ಪ್ರೈಷೋಚ್ಚಾರಣೆ ಮಾಡಿಬಿಟ್ಟಿದ್ದರು. ಅವರ ಇಷ್ಟಾರ್ಥವು ಕೈಗೂಡಿತು.

## ಮಾತೃವಿಗೆ ವಚನಪ್ರದಾನ :

ಅನಂತರ ಆಚಾರ್ಯರು ತಾಯಿಯನ್ನು ಅಗಲಿ ಹೋಗುವ ಸಂದರ್ಭವು ಒದಗಿದ್ದರಿಂದ ಮುಂದೇನು ಮಾಡಬೇಕೆಂದು ಯೋಚಿಸಲಾರಂಭಿಸಿದರು. ತಾಯಿಯು ಹೀಗೆಂದಳು: 'ಮಗು, ನೀನು ಮೊಸಳೆಯಿಂದ ಬಿಡುಗಡೆಯಾಗಲೆಂದು ನಾನು ಸಂನ್ಯಾಸಕ್ಕೆ ಅನುಮತಿಯನ್ನಿತ್ತೆನು. ಆದರೆ ಈಗಲೇ ನೀನು ನನ್ನನ್ನು ಬಿಟ್ಟು ಹೋಗಬೇಡ. ನಾನು ಈ ದೇಹತ್ಯಾಗಮಾಡಿದ ಅನಂತರ ಸಂಸ್ಕಾರ ಮಾಡಿ ಮುಂದೆ ಕ್ರಮಸಂನ್ಯಾಸವನ್ನು ಸ್ವೀಕರಿಸುವೆಯಂತೆ. ಅಲ್ಲಿಯವರೆಗೂ ನನ್ನೊಡನೆಯೇ ಇರು; ಇಲ್ಲವಾದರೆ ನಾನು ನಿನ್ನನ್ನು ಪಡೆದುಕೊಂಡದ್ದಕ್ಕೆ ಫಲವೇನು?' ಎಂದಳು. ಆಗ ಆಚಾರ್ಯರು 'ತಾಯೆ, ಚಿಂತಿಸಬೇಡ; ನಾನು ಎಲ್ಲಿಯೇ ಇದ್ದುಕೊಂಡಿದ್ದರೂ ನೀನು ಹಗಲಾಗಲಿ, ರಾತ್ರಿಯಾಗಲಿ ನೆನೆಸಿಕೊಂಡ ಮಾತ್ರದಿಂದ ನಾನು ನಿನ್ನ ಬಳಿಗೆ ಬರುವೆನು. ಈ ಮಾತನ್ನು ನಂಬುವಳಾಗು. ನಮ್ಮ ತಂದೆಯ ಧನವನ್ನು ಸ್ವೀಕರಿಸುವ ದಾಯಾದಿಗಳು ಹೇಗೂ ನಿನ್ನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾರೆ. ಇನ್ನು ನಾನು ಇಲ್ಲಿ ಉಳಿಯುವದರ ಅವಶ್ಯಕತೆಯೇನಿದೆ? ನಿನ್ನೊಡನೆ ಇದ್ದುದಕ್ಕಿಂತ ನೂರರಷ್ಟು ಸತ್ಫಲವನ್ನು ನಿನಗೆ ಒದಗಿಸಿಕೊಡುವೆನು. ನಿನ್ನ ಮಾತಿನಂತೆಯೇ ಮರಣಕಾಲಕ್ಕೂ

ನಾನು ಎದುರಿಗೇ ಇದ್ದು ಅನಂತರ-ಸಂನ್ಯಾಸಿಯಾಗಿದ್ದರೂ-ನಿನ್ನ ಸಂಸ್ಕಾರವನ್ನು ನಾನೇ ಮಾಡುವೆನು. ಈ ವಿಷಯದಲ್ಲಿ ನಾನು ಧರ್ಮ ಶಾಸ್ತ್ರವನ್ನಾದರೂ ಸ್ವಲ್ಪಮಟ್ಟಿಗೆ ಬದಿಗಿಡುವೆನು; ಏಕೆಂದರೆ ಮಾತೃಭಕ್ತಿಯ ಆದರ್ಶಕ್ಕಿಂತ ಸಂನ್ಯಾಸಿಯ ಆಚಾರನಿಯಮಗಳು ದೊಡ್ಡವೇನಲ್ಲ. ನನಗೆ ಅಪ್ಪಣೆಯನ್ನು ನೀಡುವವಳಾಗು' ಎಂದು ಹೇಳಿ ಮನೆಯಿಂದ ಹೊರಟೇ ಬಿಟ್ಟರು.

ಆಗ ಆಚಾರ್ಯರಿಗೆ ಮತ್ತೊಂದು ಅಡ್ಡಿಯು ತಾತ್ಕಾಲಿಕವಾಗಿ ಬಂದೊದಗಿತು. '' ಶ್ರೇಯಾಂಸಿ ಬಹು ವಿಘ್ನಾನಿ '' ಎಂದಂತೆ ಈ ಹಿಂದೆ ತಾಯಿಯ ಅನುಕೂಲಕ್ಕಾಗಿ ನದಿಯನ್ನು ಮನೆಯ ಸಮೀಪದಲ್ಲಿಹರಿಯುವಂತೆ ಮಾಡಿದ್ದರಷ್ಟೆ ? ಮಳೆಗಾಲದಲ್ಲಿ ಪ್ರವಾಹವು ರಭಸದಿಂದ ನುಗ್ಗಿ ಹರಿದದ್ದರಿಂದ ಅಲ್ಲಿಯೇ ಇದ್ದ ಕೃಷ್ಣದೇವಾಲಯದಲ್ಲಿನ ವಿಗ್ರಹವು ಸಡಿಲವಾಗಿಬಿಟ್ಟಿತ್ತು. ಆ ದೇವತೆಯು ಅಶರೀರವಾಣಿಯಿಂದ ಆಚಾರ್ಯರನ್ನು ಕುರಿತು'' ಅಯ್ಯ ಸಂನ್ಯಾಸಿಯೆ, ನನ್ನನ್ನು ಸುರಕ್ಷಿತಸ್ಥಳದಲ್ಲಿ ಸ್ಥಾಪಿಸಿ ಮುಂದಕ್ಕೆ ಹೊರಡು'' ಎಂದಿತು. ಆಗ ಆಚಾರ್ಯರು ಆ ಕೃಷ್ಣವಿಗ್ರಹವನ್ನು ಮೇಲಕ್ಕೆತ್ತಿ ಎತ್ತರವಾದ ಸ್ಥಳದಲ್ಲಿ ಸ್ಥಾಪಿಸಿ ಮುಂದಕ್ಕೆ ಹೊರಡಲು ಅನುವಾದರು.

## ಗುರುವಿನ ಸಮೀಪಕ್ಕೆ ಆಗಮನ:

ಆಚಾರ್ಯರು ಸ್ವತಃ ಸಕಲಶಾಸ್ತ್ರನಿಪುಣರೂ, ಬ್ರಹ್ಮವಿದರೂ ಆಗಿದ್ದರೂ ಲೋಕವ್ಯವಹಾರಕ್ಕೆ ತಕ್ಕಂತೆ ತಾವೂ ಗುರೂಪಸತ್ತಿ, ಕ್ರಮಸಂನ್ಯಾಸ, ತತ್ತ್ವೋಪದೇಶಾದಿಗಳನ್ನು ಪಡೆದುಕೊಂಡು ಮುಂದಿನ ಪೀಳಿಗೆಯವರಿಗೆ ಆದರ್ಶವಾದ ಸತ್ಸಂಪ್ರದಾಯವನ್ನು ಮೇಲುಪಂಕ್ತಿಯಾಗಿ ಹಾಕಿಕೊಡಬೇಕೆಂದು ಸಂಕಲ್ಪಿಸಿ ಗುರುವನ್ನು ಹುಡುಕಿಕೊಂಡು ಹೊರಟರು. ತಮ್ಮ ಸ್ವಸ್ಥಳದಿಂದ ಕಾಲುನಡಿಗೆಯಲ್ಲೇ ಸಂಚಾರಮಾಡುತ್ತಾ ವನಗಳು, ನದಿಗಳು, ಬೆಟ್ಟಗಳು, ಜಂಗಮಪ್ರಾಣಿಗಳು, ನಡುನಡುವೆ ಪುರಪಟ್ಟಣಗಳು, ನಾಗರಿಕರು, ಪ್ರಾಕೃತಜನರೇ ಮುಂತಾದ ರೂಪದಿಂದ ವಿಚಿತ್ರವಾಗಿ ಹರಡಿಕೊಂಡಿರುವ ಭಗವಂತನ ವಿಶ್ವರೂಪದಂತಿರುವ ಪ್ರಪಂಚವನ್ನೆಲ್ಲ ಕಂಡು ಎಲ್ಲವೂ ಬ್ರಹ್ಮದ ವಿಭೂತಿಗಳೇ ಎಂದು ಅನುಸಂಧಾನಮಾಡುತ್ತಾ ಇಂದುಭವಾ ಎಂಬ-ನದೀತೀರಕ್ಕೆ ಬಂದು ಅಲ್ಲಿ ಒಂದು ಗುಹೆಯನ್ನು ಕಂಡರು. ಆ ಗುಹೆಯ ದ್ವಾರವು ಕಿರಿದಾಗಿತ್ತು. ಅದರಲ್ಲಿ ಯಾರೋ ಮಹಾತ್ಮರು ತಪಸ್ಸುಮಾಡುತ್ತಾ ಕುಳಿತಿರಬೇಕೆಂದು ಭಾವಿಸಿ ಪ್ರದಕ್ಷಿಣೆಮಾಡಿ ನಮಸ್ಕರಿಸಿದರು. ಅವರ ಊಹೆಯು ನಿಜವಾಗಿತ್ತು. ಶ್ರೀ **ಗೋವಿಂದಭಗವತ್ಪಾದರೆಂಬ** ಯತಿಗಳು ಆ ಗುಹೆಯಲ್ಲಿ ಧ್ಯಾನಾರೂಢರಾಗಿ ಕುಳಿತಿದ್ದರು. ಅವರು ಎಷ್ಟುಕಾಲದಿಂದ ಹಾಗೆ ಕುಳಿತಿದ್ದರೋ ಯಾರಿಗೂ ತಿಳಿಯದು. ಅಲ್ಲಿದ್ದ ಕೆಲವು ಸಾಧಕರಿಂದ ಗುಹೆಯೊಳಗಿರುವ ಯತಿಗಳ ಹೆಸರು ಆಚಾರ್ಯರಿಗೆ ಗೊತ್ತಾಯಿತು. ಅವರು ಆದಿಶೇಷನ ಅವತಾರವೇ ಎಂದು ತಿಳಿದು

ಸ್ತೋತ್ರಮಾಡಲಾರಂಭಿಸಿದರು. ಆದಿಶೇಷನು ತನ್ನ ಪತಂಜಲ್ಯವತಾರದಲ್ಲಿ ಸಹಸ್ರ ಮುಖಗಳಿಂದಲೇ ಶಾಸ್ತ್ರೋಪದೇಶವನ್ನು ಮಾಡಲಾರಂಭಿಸಿದಾಗ ಶಿಷ್ಯರು ಹೆದರಿದ್ದನ್ನು ಕಂಡು ಒಂದು ಮುಖವನ್ನು ಮಾತ್ರ ಉಳಿಸಿಕೊಂಡು ಪತಂಜಲಿಮುನಿಯಾಗಿ ವ್ಯಾಕರಣಮಹಾಭಾಷ್ಯಶಾಸ್ತ್ರವನ್ನು ಅನುಗ್ರಹಿಸಿದನು. ಆ ಮುನಿಯೇ ಈಗ ಗೋವಿಂದಭಗವತ್ಪಾದರೆನಿಸಿ ಗುಹೆಯಲ್ಲಿ ಧ್ಯಾನಾರೂಢರಾಗಿರುತ್ತಾರೆಂಬ ಸ್ತುತಿಯನ್ನು ಆಚಾರ್ಯರು ಸಮರ್ಪಿಸಿದರು. ಆ ಮಹನೀಯರು ಗೌಡಪಾದಾಚಾರ್ಯರ ಸಾಕ್ಷಾತ್ ಶಿಷ್ಯರಾಗಿದ್ದು ವೇದಾಂತಾರ್ಥ ತತ್ತ್ವಜ್ಞರಾಗಿದ್ದರು. ಶಂಕರಾಚಾರ್ಯರಿಗೆ ಗುರುಗಳಾಗಲು ಸಕಲ ರೀತಿಯಿಂದಲೂ ಸಮರ್ಥರಾಗಿದ್ದರು.

## ಗುರೂಪದೇಶ, ಅನುಗ್ರಹ :

ಆಚಾರ್ಯರ ಅಪೂರ್ವವಾದ ಸ್ತೋತ್ರವನ್ನು ಕೇಳಿ ಧ್ಯಾನದಿಂದೆಚ್ಚತ್ತ ಗುರುವರ್ಯರು ಗುಹೆಯಿಂದ ಹೊರಬಂದು ಶ್ರೀಶಂಕರಾಚಾರ್ಯರಿಗೆ ದರ್ಶನವನ್ನು ನೀಡಿದರು. ನೀನು ಯಾರು? ಎಂದು ಗುರುಗಳು ಕೇಳಲಾಗಿ ಆಚಾರ್ಯರು ಹೀಗೆಂದರು :

**ಸ್ವಾಮಿನ್ನಹಂ ನ ಪೃಥಿವೀ ನ ಜಲಂ ನ ತೇಜೋ**
**ನ ಸ್ಪರ್ಶನೋ ನ ಗಗನಂ ನ ಚ ತದ್ಗುಣಾ ವಾ ।**
**ನಾಪೀಂದ್ರಿಯಾಣ್ಯಪಿ ತು ವಿದ್ಧಿ ತತೋಽವಶಿಷ್ಟೋ**
**ಯಃ ಕೇವಲೋಽಸ್ತಿ ಪರಮಃ ಸ ಶಿವೋಽಹಮಸ್ಮಿ ॥**

'ಪೂಜ್ಯರೆ, ನಾನು ಭೂಮಿ, ಜಲ, ತೇಜಸ್ಸು, ವಾಯು, ಆಕಾಶ ಹಾಗೂ ಪಂಚಭೂತಗಳ ಗುಣಗಳಾದ (ಶಬ್ದಸ್ಪರ್ಶರೂಪರಸಗಂಧ) ಗಳಾವುವೂ ಅಲ್ಲ. ಹಾಗೆಯೇ ಇಂದ್ರಿಯಗಳೂ ನಾನಲ್ಲ. ಇವುಗಳೆಲ್ಲಕ್ಕೂ ಮೀರಿದ ತಾನೇ ತಾನಾದ ಪರಮನಾದ ಮಂಗಳರೂಪನಾದ ಶಿವನೇ ಆಗಿರುವೆನು' - ಎಂದು ನುಡಿದರು. ಆಗ ಗುರುಗಳು 'ಅಯ್ಯ, ನೀನು ಕೈಲಾಸವಾಸಿಯಾದ ಶಂಕರನೇ ಆಗಿದ್ದು ಮಾನುಷವೇಷದಿಂದಲೂ ಶಂಕರನೆನಿಸಿ ಇಲ್ಲಿಗೆ ಬಂದಿರುವೆ. ಧ್ಯಾನದೃಷ್ಟಿಯಲ್ಲಿ ನಮಗೆ ಈ ವಿಚಾರವು ಗೋಚರವಾಯಿತು. ನಿನಗೆ ಸ್ವಾಗತವು' ಎಂದರು. ಹೀಗೆ ಗುರುಶಿಷ್ಯರ ಸಮಾಗಮದ ಅನಂತರ ಶಿಷ್ಯನು ಗುರುವನ್ನು ಪೂಜೆಮಾಡಿದನು. ಗುರುಗಳು ಕ್ರಮಬದ್ಧವಾದ ಸಂನ್ಯಾಸದೀಕ್ಷೆಯನ್ನು ಶಿಷ್ಯನಿಗೆ ಅನುಗ್ರಹಿಸಿದರು. ವೇದಾಂತಾರ್ಥವಿಚಾರಕ್ಕೂ ಜ್ಞಾನನಿಷ್ಠೆಯು ಪೂರ್ಣವಾಗಿ ದಕ್ಕುವದಕ್ಕೂ ಮುಂದೆ ಮೋಕ್ಷವನ್ನು ಹೊಂದುವದಕ್ಕೂ ಸಂನ್ಯಾಸವು ಬಹು ಮುಖ್ಯವಾದ ದ್ವಾರವಾಗಿರುತ್ತದೆ. ಅಲ್ಲದೆ ಜ್ಞಾನಕ್ಕೆ ಭೂಷಣವೂ ಆಗಿದೆ. ಆದ್ದರಿಂದ ಪರಮಹಂಸಪಾರಿವ್ರಾಜ್ಯವನ್ನು ಶಿಷ್ಯನಿಗೆ ದಯಪಾಲಿಸಿದ ಗುರುಗಳು ಅನಂತರ

ಬ್ರಹ್ಮೋಪದೇಶವನ್ನೂ ಮಾಡಿದರು. 'ಶ್ರೀ ಶಂಕರಭಗವತ್ಪಾದಯತಿ' ಯೆಂದೇ ಯೋಗಪಟ್ಟವನ್ನೂ ಅನುಗ್ರಹಿಸಿದರು. ಯೋಗಪಟ್ಟವೆಂದರೆ ಸಂನ್ಯಾಸದ ಅನಂತರವೂ ಲೋಕವ್ಯವಹಾರನಿರ್ವಹಣೆಗಾಗಿ ಗುರುಗಳು ಮಾಡುವ ನಾಮಕರಣವು. ಆಚಾರ್ಯರಿಗೆ ಪೂರ್ವಾಶ್ರಮದಲ್ಲಿಯೂ ಸಂನ್ಯಾಸಾಶ್ರಮ ದಲ್ಲಿಯೂ 'ಶಂಕರ'ನೆಂಬ ಹೆಸರೇ ಲಭ್ಯವಾಯಿತು. ಹೀಗೆ ಗುರುಕೃಪಾಪಾತ್ರರಾದ ಶ್ರೀಶಂಕರಭಗವತ್ಪಾದರವರು ಯತಿಶ್ರೇಷ್ಠರಾಗಿ ವಿರಾಜಮಾನರಾದರು. ಗುರುಸನ್ನಿಧಿಯಲ್ಲೇ ಕೆಲವು ಕಾಲ ಸೇವೆ ಮಾಡಿ ಕೊಂಡಿದ್ದರು. ಶಿಷ್ಯನು ಗುರುವಿನಿಂದ ಕಲಿಯಬೇಕಾದದ್ದೆಲ್ಲವನ್ನೂ ಉಪದೇಶ, ನಡೆ, ನುಡಿ, ಅನುಷ್ಠಾನಗಳ ಮೂಲಕ ಪೂರ್ಣಗೊಳಿಸಿಕೊಳ್ಳಬೇಕಾಗುವದು. ಗುರುಭಕ್ತಿ ಸಂಪನ್ನರಾದ ಆಚಾರ್ಯರು ಎಲ್ಲಾ ಆಚಾರವಿಚಾರಗಳನ್ನೂ ಸಾನ್ನಿಧ್ಯದಲ್ಲಿದ್ದು ತಿಳಿದು ತಾವೂ ಅನುಸರಿಸುವವರಾದರು.

## ಆಚಾರ್ಯರ ಯೋಗಸಿದ್ಧಿ :

ಇಂದುಭವಾನದೀತೀರದಲ್ಲಿ ಗುರುಸೇವಾಪರಾಯಣರಾಗಿ ಆಚಾರ್ಯರು ಇದ್ದುಕೊಂಡಿದ್ದರು. ಹಿಂದೊಮ್ಮೆ ಅವರು ಮಹಾಲಕ್ಷ್ಮಿಯನ್ನು ಪ್ರಾರ್ಥಿಸಿ ಚಿನ್ನದ ನೆಲ್ಲಿಕಾಯಿಯ ಮಳೆಯನ್ನು ಕರೆಯಿಸಿದ್ದರಷ್ಟೆ? ಹಾಗೆಯೇ ಅವರು ತಮ್ಮ ಯೋಗಶಕ್ತಿಯನ್ನು ಪ್ರಕಟಮಾಡಬೇಕಾದ ಇನ್ನೊಂದು ಸಂದರ್ಭವು ಬಂದಿತು. ಆಚಾರ್ಯರಿಗೇನೂ ತಮ್ಮ ಸಿದ್ಧಿಗಳನ್ನು ಪ್ರಕಟಮಾಡಿ ಖ್ಯಾತಿಗಳಿಸಬೇಕೆಂಬ ಇಚ್ಛೆಯಿರಲಿಲ್ಲ. ಆದರೆ ಸಂದರ್ಭಗಳು ಹಾಗೆ ಒದಗಿದ್ದರಿಂದ ಅವರು ಪ್ರದರ್ಶಿಸಬೇಕಾಯಿತು. ಗುರುಸನ್ನಿಧಿಯಲ್ಲಿದ್ದಾಗ ಒಮ್ಮೆ ಗುರುಗಳು ತಮ್ಮ ಗುಹೆಯಲ್ಲಿ ಧ್ಯಾನಾರೂಢರಾಗಿ ಕುಳಿತುಬಿಟ್ಟರು. ಆಗ ಮಳೆಗಾಲವಾಗಿತ್ತು. ಬಿರುಸಾದ ಮಳೆಯ ದೆಸೆಯಿಂದ ನದಿಯಲ್ಲಿ ಪ್ರವಾಹವು ಉಕ್ಕಿಬಂದಿತು. ಅದು ಆಚಾರ್ಯರ ಗುರುಗಳು ಕುಳಿತಿದ್ದ ಗುಹೆಯನ್ನೂ ಕೊಚ್ಚಿಕೊಂಡು ಹೋಗುವಷ್ಟು ಏರಿಹೋಯಿತು. ಆಗ ಕೂಡಲೆ ಗುಹೆಯ ಬಾಗಿಲಿಗೆ ಆಚಾರ್ಯರು ತಮ್ಮ ಕಮಂಡಲುವನ್ನೊಡ್ಡಿ ಮಂತ್ರಪ್ರಭಾವದಿಂದ ಪ್ರವಾಹವನ್ನೆಲ್ಲ ತಡೆಗಟ್ಟಿದರು. ಹೇಗೆ ಅಗಸ್ತ್ಯರು ಸಮುದ್ರವನ್ನೇ ಆಪೋಶನವಾಗಿ ಕುಡಿದುಬಿಟ್ಟರೋ ಹಾಗೆ ಆಚಾರ್ಯರು ನದಿಯನ್ನೇ ಕಮಂಡಲುವಿನಲ್ಲಿ ಅಡಗಿಸಿಟ್ಟರು. ಇದು ಕೆಲವು ಸಮಯದ ಅನಂತರ ಧ್ಯಾನದಿಂದ ಬಹಿರ್ಮುಖರಾದ ಗುರುಗಳಿಗೆ ತಿಳಿಯಿತು. ಅವರಿಗೆ ತಮ್ಮ ಶಿಷ್ಯನ ಯೋಗಸಿದ್ಧಿಯ ವಿಚಾರಕ್ಕೆ ಬಹಳ ಆನಂದವೇ ಆಯಿತು.

## ಕಾಶೀಕ್ಷೇತ್ರಕ್ಕೆ ಹೊರಡಲು ಗುರುವು ಸೂಚಿಸಿದ್ದು :

ಅನಂತರ ಶ್ರೀಗೋವಿಂದಭಗವತ್ಪಾದರು ಶಿಷ್ಯನನ್ನು ಸಮೀಪಕ್ಕೆ ಕರೆದು 'ವತ್ಸ, ನಾನು ಹೇಳುವುದನ್ನು ಕೇಳು. ಹಿಂದೆ ಹಿಮಾಚಲದ ಒಂದು ಭಾಗದಲ್ಲಿ

ಅತ್ರಿಮಹಾಮುನಿಗಳು ಒಂದು ಯಾಗವನ್ನು ಕೈಗೊಂಡಿದ್ದರು. ಆ ಯಾಗಕ್ಕೆ ನಾನೂ ಹೋಗಿದ್ದೆನು. ಶ್ರೀ ವೇದವ್ಯಾಸರೂ ದಯಮಾಡಿಸಿದ್ದರು. ಆ ಗೋಷ್ಠಿಯಲ್ಲಿ ಒಮ್ಮೆ ನಾನು ವ್ಯಾಸರನ್ನು ಕುರಿತು 'ಪೂಜ್ಯರೆ, ತಾವು ವೇದಗಳನ್ನೆಲ್ಲ ವಿಂಗಡಿಸಿದ್ದೀರಿ. ವೇದಾಧಿಕಾರವಿಲ್ಲದವರ ಉದ್ಧಾರಕ್ಕಾಗಿ ಮಹಾಭಾರತವನ್ನೂ ಬರೆದಿದ್ದೀರಿ. ಹಾಗೆಯೇ ವೇದಾಂತಾರ್ಥನಿರ್ಣಯಕ್ಕಾಗಿ ಬ್ರಹ್ಮಸೂತ್ರಗಳನ್ನೂ ರಚಿಸಿದ್ದೀರಿ. ಆದರೆ ಆ ಸೂತ್ರಗಳ ಅರ್ಥವು ಮಾತ್ರ ಗಹನವಾಗಿದೆ. ಅಂತರಂಗಾರ್ಥವನ್ನರಿಯಲಾರದೆ ಕೆಲಕೆಲವರು ತಮ ತಮಗೆ ತೋಚಿದಂತೆ ವ್ಯಾಖ್ಯಾನಮಾಡಿದ್ದಾರೆ. ಆದ್ದರಿಂದ ತಪ್ಪರ್ಥವನ್ನು ಹೋಗಲಾಡಿಸಿ ನಿಜವಾದ ಅರ್ಥವೇನೆಂಬುದನ್ನು ತಿಳಿಸುವ ಭಾಷ್ಯವನ್ನೂ ನೀವು ಬರೆಯಬೇಕು' ಎಂದು ಕೇಳಿಕೊಂಡೆನು. ಅದಕ್ಕೆ ಅವರು 'ಮಗು, ಚಿಂತಿಸಬೇಡ. ಈ ವಿಚಾರದಲ್ಲಿ ದೇವತೆಗಳೇ ಪರಮೇಶ್ವರನಲ್ಲಿ ವಿಜ್ಞಾಪಿಸಿರುತ್ತಾರೆ. ಅವನು ತನ್ನ ಅಂಶದಿಂದ ಅವತಾರಮಾಡಿ ಈ ಕೆಲಸವನ್ನು ನಿರ್ವಹಿಸಲಿದ್ದಾನೆ. ಹಾಗೆ ಅವತರಿಸಿ ಬರಲಿರುವ ಪರಮೇಶ್ವರನು ನಿನ್ನ ಶಿಷ್ಯನೇ ಆಗಿರುತ್ತಾನೆ. ನಿನಗೆ ಇನ್ನು ಮುಂದೆ ಅನೇಕ ಜನರು ಶಿಷ್ಯರಾಗಬಹುದು. ಆದರೂ ಅವರುಗಳಲ್ಲಿ ಯಾವನು ತನ್ನ ಕಮಂಡಲುವಿನಲ್ಲಿ ನದೀಜಲವನ್ನೆಲ್ಲ ತುಂಬಿಸಿ ಬಂಧಿಸುವನೋ ಅವನೇ ಶಂಕರನ ಅವತಾರನಾಗಿರುವನು.' ಆತನು ನನಗೆ ಸರಿಸಮಾನನೇ ಎಂದು ತಿಳಿ. ಅವನು ದುರ್ಮತಗಳನ್ನು ನಿರಾಸಮಾಡಿ ಜನರಿಗೆಲ್ಲ ಹಿತವುಂಟುಮಾಡುವ ವೇದಾಂತಸೂತ್ರಭಾಷ್ಯವನ್ನು ರಚಿಸುವನು. ಅದು ಆಚಂದ್ರಾರ್ಕವಾಗಿ ವಿರಾಜಮಾನವಾಗಿರುವದು. ಆ ಶಿಷ್ಯನ ಮೂಲಕ ನಿನ್ನ ಕೀರ್ತಿಯೂ ಚಿರಕಾಲಸ್ಥಾಯಿಯಾಗಿರವದು, ಹೀಗೆಂದು ನುಡಿದು ವೇದವ್ಯಾಸರು ಹೊರಟುಹೋದರು. ಆ ಕಾಲದಿಂದಲೂ ನಾನು ಶಿಷ್ಯನಿಗಾಗಿ ನಿರೀಕ್ಷಿಸಿಕೊಂಡಿದ್ದೆನು. ಈಗ ನೀನು ನದಿಯನ್ನು ಆಕರ್ಷಣೆಮಾಡಿದ್ದರಿಂದ ವ್ಯಾಸರ ವಾಕ್ಯವು ನೆನಪಿಗೆ ಬರುತ್ತಿದೆ. ವೇದಾಂತಸೂತ್ರಭಾಷ್ಯವನ್ನು ರಚಿಸಲು ನಿನಗೆ ಅನುಜ್ಞೆಯನ್ನು ನೀಡಿರುತ್ತೇನೆ. ಇನ್ನು ನೀನು ಕಾಶೀಕ್ಷೇತ್ರಕ್ಕೆ ಹೋಗಿ ವಿಶ್ವೇಶ್ವರನ ದರ್ಶನವನ್ನು ಪಡೆದು ಅನಂತರ ಭಾಷ್ಯರಚನೆಯನ್ನು ಮಾಡು; ನಿನಗೆ ಮಂಗಳವಾಗಲಿ' ಎಂದು ಅಪ್ಪಣೆಕೊಡಿಸಿದರು. ಶಂಕರಾಚಾರ್ಯರಿಗೆ ಪರಮಾಶ್ಚರ್ಯವಾಗಿಬಿಟ್ಟಿತು. ಗುರುಸನ್ನಿಧಿಯನ್ನು ಬಿಟ್ಟು ಹೊರಡಬೇಕಾಯಿತಲ್ಲ! ಎಂದು ಸಂತಾಪವುಂಟಾದರೂ ಗುರ್ವಾಜ್ಞೆಯನ್ನು ಸಾಧಿಸುವ ಸಲುವಾಗಿ ಕಾಶೀಕ್ಷೇತ್ರಕ್ಕೆ ಅಭಿಮುಖರಾಗಿ ಅವರು ಪ್ರಯಾಣವನ್ನು ಬೆಳೆಸಿದರು.

## ಆಚಾರ್ಯರು ಕಾಶಿಗೆ ಬಂದದ್ದು:

ಕಾಶೀಕ್ಷೇತ್ರವು ಸುಪ್ರಸಿದ್ಧ ಪುರಾತನ ವಿದ್ಯಾಸ್ಥಾನವು. ವರಣಾ- ಅಸಿ ಎಂಬ ಎರಡು ನದಿಗಳ ನಡುವೆ ಇರುವ ಕಾರಣ ಇದಕ್ಕೆ 'ವಾರಣಾಸಿ' ಎಂಬ ಹೆಸರು

ಬಂದಿದೆ. 'ಕಾಶತೇ- ಪ್ರಕಾಶತೇ ಇತಿ ಕಾಶೀ' ಎಂಬ ವ್ಯುತ್ಪತ್ತಿಯಂತೆ ವಿಶ್ವೇಶ್ವರನ ಸಾಂನಿಧ್ಯದಿಂದ ವಿರಾಜಮಾನವಾಗಿರುವದರಿಂದ ಕಾಶೀ ಎಂಬ ಹೆಸರೂ ಇದ್ದುಕೊಂಡಿದೆ. ದೇವತೆಗಳೆಲ್ಲರೂ ಈ ಕ್ಷೇತ್ರದಲ್ಲಿಯೇ ತಪಸ್ಸು ಮಾಡಿ ಒಂದೊಂದು ಲಿಂಗವನ್ನು ಸ್ಥಾಪಿಸಿ ವಿಶ್ವನಾಥನ ವರಪ್ರದಾನದಿಂದಲೇ ತಮ್ಮ ತಮ್ಮ ಸ್ಥಾನಮಾನಗಳನ್ನು ಸಂಪಾದಿಸಿಕೊಂಡಿರುತ್ತಾರೆ- ಎಂದು ಸ್ಕಾಂದ ಮಹಾಪುರಾಣದಲ್ಲಿ ಕಾಶೀಖಂಡದಲ್ಲಿ ತಿಳಿಸಿದೆ. ಕಾಶಿಯ ಮಹಿಮೆಯನ್ನು ಅರಿಯಬೇಕಾದರೆ ಒಂದುನೂರು ಅಧ್ಯಾಯಗಳುಳ್ಳ ಆ ಖಂಡವನ್ನೇ ಪೂರ್ಣವಾಗಿ ಓದಬೇಕು. ಅದರಲ್ಲಿಯೇ ಸುಪ್ರಸಿದ್ಧವಾದ 'ಗಂಗಾಸಹಸ್ರನಾಮಸ್ತೋತ್ರ'ವೂ ಇದೆ. ಕಾಶಿಯಲ್ಲಿ ಮರಣಹೊಂದುವವರಿಗೆ ಶಿವನೇ ತಾರಕೋಪದೇಶವನ್ನು ಮಾಡುವನೆಂದೂ ಪ್ರಲಯಕಾಲದಲ್ಲಿಯೂ ರುದ್ರನು ತ್ರಿಶೂಲದ ಮೇಲೆ ಈ ನಗರವನ್ನು ಎತ್ತಿ ನಿಲ್ಲಿಸಿ ಕಾಪಾಡುವನೆಂದೂ ಸ್ಥಲಮಾಹಾತ್ಮ್ಯವಿದೆ. ದಕ್ಷಿಣದೇಶದವರು ಮಿಕ್ಕ ನದಿಗಳನ್ನು ಹೊಗಳುವಾಗ ಗಂಗೆಗೆ ಹೋಲಿಸುವದೂ ಪವಿತ್ರಕ್ಷೇತ್ರಗಳನ್ನು ದಕ್ಷಿಣಕಾಶಿ ಎಂದು ಸ್ತುತಿಸುವದೂ ಈ ಕ್ಷೇತ್ರದ ಮಹಿಮೆಗೆ ಒಂದು ಹೆಚ್ಚಿನ ಸಂಮತಿಯಾಗಿದೆ. ಹಿಂದೆ ಈ ಕ್ಷೇತ್ರವು ಆ ದೇಶದ ರಾಜನಿಗೆ ರಾಜಧಾನಿಯಾಗಿದ್ದು ವಿದ್ವಾಂಸರುಗಳಿಗೆ ಆಶ್ರಯವನ್ನಿತ್ತಿತ್ತು. ಕಾಶಿಯಲ್ಲಿ ವಿದ್ವತ್ತನ್ನು ಪ್ರಕಟಿಸುವವರೇ ವಿದ್ವದ್ವರ್ಯರೆಂದು ಪರಿಗಣಿತರಾದರು. ಹೀಗೆ ಕಾಶೀಕ್ಷೇತ್ರವು ವಿದ್ವಾಂಸರ ಕ್ಷೇತ್ರವಾಗಿದ್ದುದರಿಂದಲೇ ಶ್ರೀಗೋವಿಂದಭಗವತ್ಪಾದರು ತಮ್ಮ ಶಿಷ್ಯನಿಗೆ ಕಾಶಿಗೆ ಹೋಗುವಂತೆ ಹೇಳಿದರು.

ಆಚಾರ್ಯರು ಕಾಶೀಕ್ಷೇತ್ರಕ್ಕೆ ಬಂದು ಮೊದಲು ಗಂಗಾಸ್ನಾನವನ್ನು ಮಾಡಿದರು. ಗಂಗೆಯು ಪರಮೇಶ್ವರನ ಜಟೆಯಿಂದಲೇ ಭೂಮಿಗೆ ಜಾರಿದವಳಾಗಿಯೂ ವಿಷ್ಣುವಿನ ಪಾದದಿಂದ ಹುಟ್ಟಿದವಳಾಗಿಯೂ ಇರುವದರಿಂದ ಶೈವ ವೈಷ್ಣವ ಸಂಪ್ರದಾಯದವರಿಬ್ಬರಿಗೂ ಪಾವನಳಾಗಿರುತ್ತಾಳೆ. ಇಂಥ ಗಂಗಾಮಾತೆಯ ಜಲದಿಂದ ಪೂತರಾಗಿ ಅನಂತರ ವಿಶ್ವೇಶ್ವರನ ದರ್ಶನವನ್ನು ಮಾಡಿ ಭಕ್ತಿಯಿಂದ ನಮಿಸಿದರು. ಅವರಿಗೆ ಈ ಕ್ಷೇತ್ರವು ಬಹಳ ಪ್ರಿಯವಾಗಿ ಕಂಡಿತು. ಕೆಲವು ಕಾಲದವರೆಗೆ ಅಲ್ಲಿಯೇ ವಾಸಮಾಡಿಕೊಂಡಿದ್ದರು.

## ಪ್ರಥಮಶಿಷ್ಯನ ಸ್ವೀಕಾರ :

ಒಂದು ದಿನ ಆಚಾರ್ಯರ ಬಳಿಗೆ ಒಬ್ಬ ಬ್ರಾಹ್ಮಣವಟುವು ಬಂದು ನಮಸ್ಕರಿಸಿದನು. ನೀನು ಯಾರು? ಸ್ಥಳವು ಯಾವದು? ಎಂದು ಕೇಳಲು ಆತನು 'ಪೂಜ್ಯರೆ, ನಾನು ಬ್ರಹ್ಮಚಾರಿಯು; ವೈರಾಗ್ಯದಿಂದ ಕೂಡಿ ತಮ್ಮಲ್ಲಿಗೆ ಬಂದಿರುವೆನು. ನನ್ನದು ದಕ್ಷಿಣದೇಶವು. ಕಾವೇರಿತೀರದಲ್ಲಿ ನಮ್ಮ ಊರಿದೆ. ಹೀಗೆಯೇ ಯಾತ್ರಾರ್ಥಿಯಾಗಿ ಸಂಚರಿಸುತ್ತಾ ಬಂದವನು ಈ ನಗರದಲ್ಲಿ

ಗುರುವನ್ನು ಹುಡುಕುತ್ತಿದ್ದೆನು. ಭಗವದನುಗ್ರಹದಿಂದ ತಮ್ಮ ದರ್ಶನವಾಯಿತು. ತಾವು ನನ್ನನ್ನು ಶಿಷ್ಯನಾಗಿ ಸ್ವೀಕರಿಸಿ ಉದ್ಧರಿಸಬೇಕು' ಎಂದು ಕೇಳಿಕೊಂಡನು. ಚಿಕ್ಕ ವಯಸ್ಸಿನಲ್ಲೇ ಹೀಗೆ ವೈರಾಗ್ಯಯುಕ್ತನಾಗಿ ಶರಣಾಗತನಾದ ಅವನನ್ನು ಕಂಡು ಆಚಾರ್ಯರು ತಮ್ಮ ಪ್ರಥಮಶಿಷ್ಯನನ್ನಾಗಿ ಮಾಡಿಕೊಂಡು ಆತನಿಗೆ ಸಂನ್ಯಾಸದೀಕ್ಷೆಯನ್ನು ದಯಪಾಲಿಸಿ 'ಸನಂದನ'ನೆಂದು ಕರೆದರು' ಆಚಾರ್ಯರಿಗೆ ಶಿಷ್ಯರಾಗುತ್ತಿದ್ದವರೆಲ್ಲರೂ ದೇವಾಂಶಸಂಭೂತರೇ ಆಗಿದ್ದು ಕಾಲಕ್ರಮದಲ್ಲಿ ಒಬ್ಬೊಬ್ಬರಾಗಿ ಬಂದು ಸೇರಿದರು. ಕೆಲವು ಶಿಷ್ಯರೊಡಗೂಡಿ ಕಾಶಿಯಲ್ಲಿ ಆಚಾರ್ಯರು ವೇದಾಂತಕಾಲಕ್ಷೇಪವನ್ನು ಮಾಡುತ್ತಾ ಇದ್ದುಕೊಂಡಿದ್ದರು. ಗುರುಗಳು ಹಿಂದೆ ಅಪ್ಪಣೆಕೊಡಸಿದ್ದಂತೆ ವಿಶ್ವೇಶ್ವರನ ಸಾಕ್ಷಾದ್ ದರ್ಶನಾನಂತರ ಭಾಷ್ಯಗ್ರಂಥಗಳನ್ನು ರಚಿಸುವ ಸಂಕಲ್ಪವುಳ್ಳವರಾಗಿದ್ದರು. ಅದು ಕೂಡ ಬೇಗನೆ ಅವರಿಗೆ ಒದಗಿಬಂದಿತು.

## ವಿಶ್ವೇಶ್ವರನ ದರ್ಶನ :

ಒಂದು ದಿನ ಆಚಾರ್ಯರು ಕೆಲವು ಶಿಷ್ಯರೊಡಗೂಡಿ ಮಧ್ಯಾಹ್ನ ಸ್ನಾನಕ್ಕಾಗಿ ಗಂಗಾನದಿಗೆ ಹೋಗುತ್ತಿದ್ದರು. ಬಿಸಿಲು ಬಹಳವಾಗಿತ್ತು. ದೂರದಿಂದಲೇ ಒಬ್ಬ ಪ್ರಾಕೃತಮನುಷ್ಯನನ್ನು ದಾರಿಯಲ್ಲಿ ಕಂಡರು. ಅವನೊಡನೆ ನಾಲ್ಕು ನಾಯಿಗಳೂ ಇದ್ದವು. ಬಾಲ್ಯದಿಂದಲೂ ಆಚಾರ, ಶೌಚ, ಸ್ಪೃಶ್ಯಾಸ್ಪೃಶ್ಯವಿವೇಕಗಳ ಅಭ್ಯಾಸವಿದ್ದ ಆಚಾರ್ಯರಿಗೆ ಅವನನ್ನು ಕಂಡಾಗ 'ಸ್ವಲ್ಪ ದೂರ ನಡೆ' ಎಂದು ಹೇಳಬೇಕೆನಿಸಿತು. ಇದೇನೂ ಆಶ್ಚರ್ಯವಲ್ಲ. ಈಗಲೂ ದಕ್ಷಿಣದೇಶದಲ್ಲಿ ಆಚಾರನಿಯಮಗಳು ಉತ್ತರಕ್ಕಿಂತ ಹೆಚ್ಚು ಜಾರಿಯಲ್ಲಿವೆ. ದಕ್ಷಿಣದ ದೇವಾಲಯಗಳಲ್ಲಿ ಎಲ್ಲರನ್ನೂ ಗರ್ಭಗುಡಿಗೆ ಬಿಡುವದಿಲ್ಲ. ಶರಟುಗಳನ್ನು ಕಳಚಿಯೇ ದೇವರ ದರ್ಶನಮಾಡಬೇಕು. ಈಗಲೂ ಇದನ್ನು ಯಾರೂ ಆಕ್ಷೇಪಿಸಿಲ್ಲ. ಆದ್ದರಿಂದ ಆಚಾರ್ಯರಿಗೆ ಪ್ರಾಕೃತನನ್ನು ಕುರಿತು ಹಾಗೆ ಹೇಳುವಂಥ ಭಾವನೆಯು ದಕ್ಷಿಣದ ಶಿಷ್ಟಾಚಾರದ ಕೊಡುಗೆಯಾಗಿ ಬಂದಿರಬೇಕು. ಅಷ್ಟರಲ್ಲೇ ಆತನು ಹತ್ತಿರವೇ ಬಂದುಬಿಟ್ಟನು. ಮತ್ತು ಇವರ ಮನೋಗತವನ್ನರಿತವನಾಗಿ 'ದ್ವಿಜಶ್ರೇಷ್ಠನೆ, ನೀನು ಸಂನ್ಯಾಸಿ; ಸರ್ವರಲ್ಲಿಯೂ ಒಬ್ಬನೇ ಆತ್ಮನನ್ನು ಕಾಣುವದು ನಿನ್ನ ಧರ್ಮವು. ನೀನು ಸಮದೃಷ್ಟಿಯವನಾಗಿರಬೇಕಲ್ಲವೆ? ನನ್ನನ್ನೇಕೆ ದೂರ ಹೋಗಲು ಹೇಳುವಂತೆ ನಿನ್ನ ಮನಸ್ಸಿನಲ್ಲಿ ವಿಕಲ್ಪವು ಉಂಟಾಯಿತು? ಅನ್ನಮಯಶರೀರವಾದರೊ, ಇಬ್ಬರಿಗೂ ಸಮಾನವಾಗಿದೆ. ಅದು ಯಾವಾಗಲೂ ಅಶುಚಿಯೆಂಬುದು ನಿನಗೂ ಗೊತ್ತು. ಇನ್ನು ಶಾರೀರನಾದ ಆತ್ಮನು ಸ್ವತಃ ಚೈತನ್ಯಸ್ವರೂಪನು; ಎಲ್ಲಾ ಶರೀರಗಳಲ್ಲಿಯೂ ಒಬ್ಬನೇ ಆಗಿರುವನು. ಆತ್ಮಜ್ಯೋತಿಗೆ ಮಡಿಮೈಲಿಗೆಗಳು ಉಂಟೆ ? ಸೂರ್ಯನಿಗೆ ಎಲ್ಲವನ್ನೂ ಬೆಳಗಿದ್ದರಿಂದ ದೋಷವುಂಟಾಯಿತೆ? ವಿವೇಕಿಯಾದ ನೀನು ಇದನ್ನು

ಯೋಚಿಸಿದ್ದೀಯೊ?' ಎಂದುಬಿಟ್ಟನು. ಕೂಡಲೆ ಆಚಾರ್ಯರಿಗೆ ಆತನು ಪ್ರಾಕೃತ ಮನುಷ್ಯನಲ್ಲವೆಂದೂ ಯಾವನೋ ಮಹಾತ್ಮನಿರಬಹುದೆಂದೂ ಅನಿಸಿತು. ಅವನ ಮಾತುಗಳಿಂದ ಎಚ್ಚರಗೊಂಡವರಾಗಿ ಸಂನ್ಯಾಸಿಯು ಸಮಸ್ತಜೀವರುಗಳಲ್ಲಿಯೂ ತನ್ನ ಆತ್ಮನನ್ನೇ ಕಾಣಬೇಕೆಂಬ ತತ್ತ್ವಕ್ಕೆ ಮಣಿದವರಾಗಿ ಅವನಿಗೆ ನಮಸ್ಕರಿಸಿಬಿಟ್ಟರು. ಹಾಗೆ ಅವರು ಬಾಗಿ ನಮಸ್ಕರಿಸಿ ಮೇಲೇಳುವಷ್ಟರಲ್ಲಿ ಧೂರ್ಜಟಿಯೂ ನೀಲಲೋಹಿತನೂ ಆದ ವಿಶ್ವನಾಥನೇ ಎದುರಿಗೆ ನಿಂತಿದ್ದನು. ಆತನೊಡನೆ ನಾಲ್ಕು ವೇದಾಭಿಮಾನಿದೇವತೆಗಳು ಸಹ ಕಾಣಿಸಿಕೊಂಡರು. ಆಚಾರ್ಯರು ವಿಶ್ವೇಶ್ವರನನ್ನು ಹೀಗೆ ಕೊಂಡಾಡಿದರು :

**ದಾಸಸ್ತೇಽಹಂ ದೇಹದೃಷ್ಟ್ಯಾಸ್ಮಿ ಶಂಭೋ**
**ಜಾತಸ್ತೇಽಂಶೋ ಜೀವದೃಷ್ಟ್ಯಾ ತ್ರಿದೃಷ್ಟೇ।**
**ಸರ್ವಸ್ಯಾತ್ಮನ್ ಆತ್ಮದೃಷ್ಟ್ಯಾ ತ್ವಮೇವೇ-**
**ತ್ಯೇವಂ ಮೇ ಧೀರ್ನಿಶ್ಚಿತಾ ಸರ್ವಶಾಸ್ತ್ರೈಃ॥**

'ಶಂಭುವೆ, ದೇಹವುಳ್ಳವನು ನಾನು ಎಂಬ ದೃಷ್ಟಿಯಿಂದ ನಿನ್ನ ಸೇವಕನಾಗಿ ಇರುವೆನು. ಮುಕ್ಕಣ್ಣನೆ, 'ನಾನು ಜೀವನು' ಎಂಬ ದೃಷ್ಟಿಯಿಂದಲಾದರೊ, ನಿನ್ನ ಅಂಶನಾಗಿರುವೆನು; ಸರ್ವಕ್ಕೂ ಆತ್ಮನಾಗಿರುವವನೆ, ಆತ್ಮದೃಷ್ಟಿಯಿಂದ ನಾನು ನೀನೇ ಆಗಿರುವೆನು. ಹೀಗೆಂದು ಎಲ್ಲಾ ಶಾಸ್ತ್ರಗಳ ಬೆಂಬಲದಿಂದ ನಿರ್ಧರಿಸಿರುವೆನು' ಎಂದು ತತ್ತ್ವಪೂರ್ಣವಾಗಿ ಸ್ತೋತ್ರಮಾಡಿದರು. ಆಗ ವಿಶ್ವೇಶ್ವರನು ಸಂತುಷ್ಟನಾಗಿ 'ಅಯ್ಯ ಯತಿಶ್ರೇಷ್ಠನೆ, ನಿನ್ನ ತಪೋನಿಷ್ಠೆಯನ್ನೂ ಸಮದರ್ಶನವನ್ನೂ ಪರೀಕ್ಷಿಸುವ ಸಲುವಾಗಿ ನಾನು ವೇಷಾಂತರದಿಂದ ಬಂದು ನಿನ್ನ ಅಂತರಂಗವನ್ನು ಕಂಡುಕೊಂಡೆನು. ನೀನು ಸತ್ಪುರುಷರ ಪಂಕ್ತಿಯಲ್ಲಿ ವೇದವ್ಯಾಸರಂತೆ ಇದ್ದುಕೊಂಡಿರುವೆ. ಇನ್ನು ಮುಂದೆ ನೀನು ಬಾದರಾಯಣರೆಂಬ ನಾಮಾಂತರವನ್ನು ಹೊಂದಿರುವ ವ್ಯಾಸರು ರಚಿಸಿರುವ ವೇದಾಂತಸೂತ್ರಗಳಿಗೆ ಭಾಷ್ಯವನ್ನು ರಚಿಸುವವನಾಗು. ಕಲಿದೋಷದಿಂದ ಕೆಲವರು ಆ ಸೂತ್ರಗಳಿಗೆ ವೇದವಾಕ್ಯಗಳಲ್ಲಿ ಸಮನ್ವಯವಿಲ್ಲದ ಅಪಾರ್ಥಗಳನ್ನು ಮಾಡಿ ಪರಸ್ಪರ ಖಂಡನಮಂಡನಗಳಲ್ಲಿ ತೊಡಗಿ ಜಿಜ್ಞಾಸುಗಳನ್ನು ಹಾದಿತಪ್ಪಿಸಿರುತ್ತಾರೆ. ನೀನು ಅಂಥ ದುರ್ಮತಗಳನ್ನೆಲ್ಲ ನಿರಾಸಮಾಡಿ ಪ್ರಸನ್ನಗಂಭೀರವೂ ಶ್ರುತಿಯುಕ್ತ್ಯನುಭವಗಳ ಮೇಳನದಿಂದ ಪರಿಪೂರ್ಣವಾದುದೂ ಪದವಾಕ್ಯ ಪ್ರಮಾಣಗಳಿಂದ ಕೂಡಿದ್ದು- ನಿರ್ದುಷ್ಟವಾದ ಯಥಾಶ್ರುತವಾದ ವೇದಾಂತಾರ್ಥವನ್ನು ಪ್ರಕಾಶಗೊಳಿಸುವಂಥದ್ದೂ ಆದ ಭಾಷ್ಯವನ್ನು ಬರೆಯುವವನಾಗು. ಅದು ದೇವತೆಗಳಿಂದಲೂ ಬ್ರಹ್ಮರ್ಷಿಗಳಿಂದಲೂ ಕೊಂಡಾಡಲ್ಪಡುವದು. ಚತುರ್ಮುಖಬ್ರಹ್ಮನ ಸಭೆಯಲ್ಲಿಯೂ ಗೌರವಿಸಲ್ಪಟ್ಟು ಪೂಜೆಗೊಳ್ಳಲಿದೆ'- ಎಂದು ತಿಳಿಸಿ ಭಗವಂತನು ಅಂತರ್ಧಾನನಾಗಿಬಿಟ್ಟನು. ಆಗ

ಆಚಾರ್ಯರು ವಿಸ್ಮಿತರಾಗಿ ನಡೆದುಹೋದ ಘಟನೆಯನ್ನೇ ನೆನೆಯುತ್ತಾ ಆಹ್ನಿಕವನ್ನು ಪೂರೈಸಿಕೊಂಡು ಗುರುಪಾದಾರವಿಂದಗಳನ್ನು ಧ್ಯಾನಿಸುತ್ತಾ ಭಾಷ್ಯರಚನೆಯ ವಿಷಯಕ್ಕೆ ಆಲೋಚಿಸಲಾರಂಭಿಸಿದರು.

## ಬದರೀಪ್ರಯಾಣ : ಭಾಷ್ಯಗಳ ರಚನೆ :

ಕಾಶಿಯಲ್ಲಿ ಕುಳಿತು ಭಾಷ್ಯರಚನೆ ಮಾಡುವದಕ್ಕಿಂತಲೂ ಬ್ರಹ್ಮರ್ಷಿಗಳ ಹಾಗೂ ನರನಾರಾಯಣರ ದಿವ್ಯಸಾಂನಿಧ್ಯವೂ ಸತ್ಸಂಗವೂ ಏಕಾಂತಸ್ಥಳ ಸೌಕರ್ಯವೂ ಉಳ್ಳ ಪವಿತ್ರ ಬದರೀಕ್ಷೇತ್ರದಲ್ಲಿ ಕುಳಿತು ಭಾಷ್ಯರಚನೆಮಾಡುವದೇ ಉತ್ತಮವೆಂದೂ ಅನಂತರ ಆ ಗ್ರಂಥವನ್ನು ತಂದು ಕಾಶಿಯಲ್ಲಿ ಪ್ರಚಾರಮಾಡುವದು ಸಾಧುವೆಂದೂ ಆಚಾರ್ಯರಿಗೆ ಅನ್ನಿಸಿತು. ಇದು ಬಹಳ ಸಮಂಜಸವೇ ಆಗಿದೆ. ಏಕೆಂದರೆ ವ್ಯಾವಹಾರಿಕಚಿಂತೆಗಳು ಅತಿಕಡಿಮೆಯಿದ್ದು ಪ್ರಶಾಂತವಾದ ವಾತಾವರಣವೂ ಇರುವಲ್ಲಿ ಅಂತಃಕರಣಶುದ್ಧಿಯ ಫಲವಾಗಿ ಜ್ಞಾನವು ಸ್ವಚ್ಛವಾಗಿ ಸ್ಫುರಣವಾಗುವದು. ಸಂಶಯಗಳು ದೂರವಾಗುವವು. ಅನುಭವವು ಪರಿಪೂರ್ಣವಾಗಿ ಹೊರಹೊಮ್ಮುವದು. ಇಂಥ ಸಾಮಗ್ರಿಗಳಿಂದ ರಚಿಸಲ್ಪಟ್ಟ ಭಾಷ್ಯವು ಅಪ್ರತಿಮವಾಗುವದು. ಅದಕ್ಕಾಗಿ ಆಚಾರ್ಯರು ಬದರೀಯಾತ್ರೆಯನ್ನು ಕೈಗೊಂಡರು. ಆಗ ಅವರ ವಯಸ್ಸು ಕೇವಲ ಹನ್ನೆರಡು ವರ್ಷಗಳು ಮಾತ್ರವಾಗಿದ್ದವು. ಬದರಿಯಲ್ಲಿ ಶ್ರೀಮನ್ನಾರಾಯಣನ ದರ್ಶನವನ್ನು ಕೈಗೊಂಡರು. ಆದಿಗುರುವಾದ ಆ ಭಗವಂತನಿಗೆ ನಮಿಸಿ ಗ್ರಂಥಾರಂಭಕ್ಕೆ ಮುಂಚೆ ಅಲ್ಲಿದ್ದ ಬ್ರಹ್ಮರ್ಷಿಗಳೊಡನೆ ವಿಚಾರವಿನಿಮಯಮಾಡಿಕೊಂಡರು. 'ತದ್ವಿದ್ಯೈಃ ಸಹ ಸಂಯೋಗಃ' ಎಂಬಂತೆ ತತ್ತ್ವ ವಿಚಾರದಲ್ಲಿ ನಿಷ್ಣಾತರಾದವರೊಡನೆ ಕೂಡಿ ವಿಚಾರಿಸುವದು ಬ್ರಹ್ಮವಿದ್ಯೆಗೆ ಸಾಣೆಹಿಡಿದಂತೆಯೇ ಸರಿ. ವಜ್ರಕ್ಕೆ ಸಾಣೆಹಿಡಿದಂತೆಲ್ಲ ಬೆಳಗುವಂತೆ ಬ್ರಹ್ಮವಿದ್ಯೆಯೂ ಇಂಥ ಗೋಷ್ಠೀ ವಿಚಾರಗಳಿಂದ ಪ್ರಕಾಶಿಸುವದು. ಆಚಾರ್ಯರು ಹೀಗೆ ಸಿದ್ಧತೆಮಾಡಿಕೊಂಡು ಬ್ರಹ್ಮಸೂತ್ರಭಾಷ್ಯವನ್ನು ರಚಿಸಿದರು. ಅನಂತರ ದಶೋಪನಿಷತ್ತುಗಳಿಗೂ ಶ್ರೀಮದ್ಭಗವದ್ಗೀತೆಗೂ ಭಾಷ್ಯಗಳನ್ನು ಬರೆದು ಪ್ರಸ್ಥಾನತ್ರಯಭಾಷ್ಯಗಳ ರಚನೆಯಿಂದ ಅನ್ವರ್ಥವಾಗಿ 'ಆಚಾರ್ಯ'ರೆನಿಸಿಕೊಂಡರು. ಈಗಲೂ ಪ್ರಸ್ಥಾನತ್ರಯಗಳಿಗೆ ಭಾಷ್ಯರಚನೆಮಾಡಿದವರನ್ನು ಭಾಷ್ಯಕಾರರೆಂದೂ ಆಚಾರ್ಯರೆಂದೂ ಸಂಬೋಧಿಸುತ್ತಾರೆ. ಶ್ರೀಶಂಕರರು ಇಲ್ಲಿಂದ ಮುಂದಕ್ಕೆ ಭಾಷ್ಯಕಾರರಾದ ಭಗವತ್ಪಾದಾಚಾರ್ಯರೆನಿಸಿದರು.

ಈ ಸಂದರ್ಭದಲ್ಲಿ ಭಾಷ್ಯವೆಂದರೇನು? ಎಂಬಿದನ್ನು ಸ್ವಲ್ಪ ತಿಳಿಯೋಣ. ಮೂಲಗ್ರಂಥಗಳನ್ನು ಕುರಿತು ಬರೆಯುವ ವಿವರಣೆಗಳಿಗೆ ಸಂಸ್ಕೃತಭಾಷೆಯಲ್ಲಿ ಭಾಷ್ಯ, ವ್ಯಾಖ್ಯಾನ, ವೃತ್ತಿ, ಟೀಕಾ- ಮುಂತಾದ ಹೆಸರುಗಳಿವೆ. ಇವುಗಳಲ್ಲಿ

ಉಪನಿಷತ್ತುಗಳು, ಭಗವದ್ಗೀತೆ, ವೇದಾಂತಸೂತ್ರಗಳೆಂಬ ಮೂರು ಗ್ರಂಥಗಳಿಗೂ ಬರೆಯಬಹುದಾದ ವಿವರಣೆಯನ್ನು ಮಾತ್ರವೇ ಭಾಷ್ಯಗಳೆಂದು ವಿದ್ವಾಂಸರು ಗೌರವಿಸುತ್ತಾರೆ. ಇನ್ನು ಇಡಿಯ ವೇದರಾಶಿಗೇ ವಿವರಣೆಯನ್ನು ಬರೆದಲ್ಲಿ ಅವುಗಳನ್ನೂ ಭಾಷ್ಯವೆಂದೇ ಕರೆಯುತ್ತಾರೆ. ಆದರೆ ಸೂತ್ರಗ್ರಂಥಗಳಲ್ಲಿ ಬಾದರಾಯಣಸೂತ್ರಗಳಿಗೆ ಮಾತ್ರವಲ್ಲದೆ ಜೈಮಿನಿ, ಗೌತಮ, ಪತಂಜಲಿ, ಕಪಿಲ, ಕಣಾದರುಗಳು ರಚಿಸಿರುವ ಸೂತ್ರಗಳಿಗೆ ವಿವರಣೆಯನ್ನು ಬರೆದಿರುವವರನ್ನೂ ಭಾಷ್ಯಕಾರರೆಂದೂ ಅವರ ಗ್ರಂಥಗಳನ್ನೂ ಭಾಷ್ಯಗಳೆಂದೇ ಕರೆಯುತ್ತಾರೆ. ಸುಪ್ರಸಿದ್ಧವಾದ ಅರ್ಥದಲ್ಲಿ ಭಾಷ್ಯಗಳೆಂದರೆ ವೇದಾಂತಸೂತ್ರಗಳು, ಉಪನಿಷತ್ತುಗಳು, ಭಗವದ್ಗೀತೆ- ಇವುಗಳ ವಿವರಣೆಗಳನ್ನು ಭಾಷ್ಯಗಳೆಂದೂ ಆಯಾ ವಿವರಣಕರ್ತರನ್ನು ಭಾಷ್ಯಕಾರರೆಂದೂ ತಿಳಿಯಬೇಕು. ಸದ್ಯಕ್ಕೆ ದಕ್ಷಿಣಭಾರತದಲ್ಲಿ ಶ್ರೀಶಂಕರ, ಶ್ರೀರಾಮಾನುಜ, ಶ್ರೀಮಧ್ವ- ಈ ಆಚಾರ್ಯರುಗಳು ಭಾಷ್ಯಕಾರರುಗಳೆನಿಸಿದರು. ಈ ಮೂರು ಮತಾನುಯಾಯಿಗಳೂ ಇವರ ಭಾಷ್ಯಗ್ರಂಥಗಳೂ ಇವುಗಳಲ್ಲಿ ಅಡಗಿರುವ ಸಿದ್ಧಾಂತವೂ ಈಗ ಪ್ರಚಾರದಲ್ಲಿವೆ. ಇವುಗಳಲ್ಲಿ ಪ್ರಪ್ರಥಮಭಾಷ್ಯಕಾರರಾಗಿ ಕಾಲಗಣನೆಯಿಂದಲೂ ಸಂಪ್ರದಾಯಪರಂಪರೆಯ ದೃಷ್ಟಿಯಿಂದಲೂ ಶ್ರೀಶಂಕರರು ಆದಿಶಂಕರರೆಂದು ಗೌರವಿಸಲ್ಪಟ್ಟಿರುತ್ತಾರೆ.

## ಭಾಷ್ಯಗಳ ಪ್ರವಚನ:

ಆಚಾರ್ಯರು ತಮ್ಮ ಭಾಷ್ಯಗ್ರಂಥಗಳನ್ನು ಶಿಷ್ಯರಿಗೆ ಪಾಠಹೇಳಿ ವೇಧಾಂತಸಿದ್ಧಾಂತವನ್ನು ಸರ್ವತ್ರವೂ ಪ್ರಚಾರಮಾಡುವದಕ್ಕಾಗಿ ಪುನಃ ಕಾಶೀಕ್ಷೇತ್ರಕ್ಕೆ ಹಿಂದಿರುಗಿದರು. ಅಲ್ಲಿ ಕೆಲವರು ಆಚಾರ್ಯರ ಅಪೂರ್ವವಾದ ಭಾಷ್ಯಗ್ರಂಥಗಳನ್ನು ಶ್ರವಣಮಾಡಲು ಬಳಿಸಾರಿದರು. ಆಚಾರ್ಯರು ತಮ್ಮ ಪ್ರಥಮಶಿಷ್ಯನಾಗಿದ್ದ ಸನಂದನನ್ನು ಮುಂದುಮಾಡಿಕೊಂಡು ಭಾಷ್ಯಪಾಠಗಳನ್ನು ಆರಂಭಿಸಿದರು. ಸನಂದನನು ಬಹಳ ಭಕ್ತಿಶ್ರದ್ಧೆಗಳಿಂದ ಶ್ರವಣ ಮಾಡುತ್ತಿದ್ದನು. ಆತನ ಗ್ರಹಣಶಕ್ತಿ, ಶುಶ್ರೂಷೆ, ಗುರುಸೇವಾದಿಗಳು ಉಳಿದ ಶಿಷ್ಯರುಗಳಿಗಿಂತ ಮಿಗಿಲಾಗಿತ್ತು. ಆದ್ದರಿಂದ ಆಚಾರ್ಯರು ಮೂರು ಬಾರಿ ಅವನಿಗೆ ಭಾಷ್ಯಪಾಠಗಳನ್ನು ಅಧ್ಯಯನಮಾಡಿಸಿದರು. ಇದರಿಂದ ಉಳಿದ ಶಿಷ್ಯರುಗಳಿಗೆ ಸ್ವಲ್ಪ ಅಸಮಾಧಾನವಾಯಿತು.

## ಸನಂದನನು ಪದ್ಮಪಾದನೆನಿಸಿದ್ದು :

ಒಮ್ಮೆ ಸನಂದನನು ಗಂಗಾನದಿಯ ಆಚೆಯ ದಡದಲ್ಲಿದ್ದನು. ಗುರುಗಳು ಈಚೆಯ ದಡದಲ್ಲಿದ್ದರು. ಅವರು ಏನೋ ಸಂದರ್ಭವಶದಿಂದ ಶಿಷ್ಯನನ್ನು ಜ್ಞಾಪಿಸಿಕೊಂಡು ''ಸನಂದನ, ಇತ್ತ ಬಾ''- ಎಂದು ಕರೆದರು. ಗುರುವಿನ ಕರೆಗೆ

ಒಗೊಟ್ಟು ಶಿಷ್ಯನು ಮನಸ್ಸಿನಲ್ಲೇ ಹೀಗೆ ಚಿಂತಿಸಿದನು. 'ಆಹಾ ! ತ್ವರಿತವಾಗಿ ನಾನು ಗುರುಸನ್ನಿಧಿಗೆ ಹೋಗಬೇಕಾಗಿದೆ. ನದಿಯನ್ನು ದೋಣಿಯ ಸಹಾಯದಿಂದ ದಾಟಿ ಆಚೆಯ ದಡವನ್ನು ತಲುಪುವದು ವಿಳಂಬವಾಗುತ್ತದೆ; ಏನುಮಾಡಲಿ? ಆದರೆ ಗುರುಪಾದಭಕ್ತಿಯು ಎಂಥ ಸಂಸಾರಸಮುದ್ರವನ್ನಾದರೂ ದಾಟಿಸುವದೆಂಬುದು ಅನುಭವಿಗಳ ಮಾತು, ಹೀಗಿರುವಲ್ಲಿ ನನ್ನನ್ನು ಅದು ಗಂಗಾನದಿಯನ್ನು ದಾಟಿಸಲಾರದೆ? ನಿಶ್ಚಯವಾಗಿಯೂ ದಾಟಿಸಿಯೇ ತೀರುವದು. ಇನ್ನು ನಾನು ಗುರುಚರಣಗಳನ್ನೇ ನೆನೆಯುತ್ತಾ ಗಂಗೆಯ ಮೇಲೆಯೇ ನಡೆದುಹೋಗುವೆನು' ಎಂದುಕೊಂಡು ನದಿಯಮೇಲೆ ನಡೆದೇಬಿಟ್ಟನು. ಅವನ ಗುರುಭಕ್ತಿಗೆ ಮೆಚ್ಚಿ ಗಂಗೆಯು ಅವನ ಪಾದಗಳನ್ನು ಇಟ್ಟಲ್ಲೆಲ್ಲ ಒಂದೊಂದು ಕಮಲದ ಹೂವನ್ನು ಆಸರೆಯಾಗಿ ನೀಡಿದಳು. ಸನಂದನನು ಏನೊಂದೂ ಆತಂಕವಿಲ್ಲದೆ ನದಿಯನ್ನು ದಾಟಿ ಸನ್ನಿಧಿಗೆ ಬಂದು ನಮಸ್ಕರಿಸಿದನು. ಆಚಾರ್ಯರು ಈ ಅಪೂರ್ವದೃಶ್ಯವನ್ನು ನೋಡುತ್ತಲೇ ಇದ್ದರು. ಅನಂತರ ಶಿಷ್ಯನನ್ನು ಕುರಿತು 'ಅಯ್ಯ, ನಿನ್ನ ಗುರುಭಕ್ತಿಯು ಅಸಾಧಾರಣವಾದದ್ದು, ಗಂಗಾದೇವಿಯು ಕೂಡ ನಿನ್ನ ಈ ಅಚಲಭಕ್ತಿಗೆ ಮಣಿದಿದ್ದಾಳೆ. ಗುರುಭಕ್ತಿಯು ಎಲ್ಲಾ ದೇವತೆಗಳ ಪ್ರಸಾದಕ್ಕೂ ಕಾರಣವಾಗಿರುವದು. ಅದು ಭೋಗ ಮೋಕ್ಷಗಳೆರಡನ್ನೂ ನೀಡುವದು. ಇನ್ನು ಮುಂದೆ ನೀನು **ಪದ್ಮಪಾದ** ನೆಂಬ ಹೆಸರಿನಿಂದ ಪ್ರಸಿದ್ಧನಾಗು. ಏಕೆಂದರೆ ಗಂಗಾಮಾತೆಯು ನಿನ್ನ ಗುರುಭಕ್ತಿಗೆ ಮೆಚ್ಚಿ ನಡೆಯುವಾಗ ಪಾದಗಳಿಗೆ ಆಸರೆಯಾಗಿ ಕಮಲಗಳನ್ನು ಅರ್ಪಿಸಿರುತ್ತಾಳೆ'- ಎಂದು ಹರಸಿದರು. ಆಗ ಉಳಿದ ಶಿಷ್ಯರೆಲ್ಲರೂ ನಾಚಿಕೊಂಡು ತಮ್ಮ ಅಸೂಯೆಯನ್ನು ಬಿಟ್ಟರು.

---

# ೪. ವ್ಯಾಸಸಮಾಗಮ, ಭಟ್ಟಪಾದಸಂದರ್ಶನ

## ವೇದವ್ಯಾಸರು ದ್ವಿಜವೇಷದಿಂದ ಬಂದು ವಾದಮಾಡಿದ್ದು:

ಒಂದು ದಿನ ಕಾಶೀಕ್ಷೇತ್ರದಲ್ಲಿ ಆಚಾರ್ಯರು ತಮ್ಮ ಶಿಷ್ಯರಿಗೆ ಬ್ರಹ್ಮ ಸೂತ್ರಭಾಷ್ಯವನ್ನು ಪಾಠಹೇಳುತ್ತಾ ಕುಳಿತಿದ್ದರು. ಆ ವೇಳೆಗೆ ಮಧ್ಯಾಹ್ನ ಕಾಲವಾಗುತ್ತಿತ್ತು, ಶಿಷ್ಯರೆಲ್ಲರೂ ಪಾಠವು ಮುಗಿಯುವದನ್ನು ನಿರೀಕ್ಷಿಸುತ್ತಿದ್ದರು. ಗುರುಗಳೂ ಪಾಠವನ್ನು ಮುಗಿಸಿ ಮೇಲಕ್ಕೇಳಲಿದ್ದರು. ಅಷ್ಟರಲ್ಲಿ ಒಬ್ಬ ವೃದ್ಧಬ್ರಾಹ್ಮಣನು ಬಂದನು. ಅವನು ಆಚಾರ್ಯರನ್ನು ಕುರಿತು ''ಶಿಷ್ಯರಿಗೆ ಏನು ಹೇಳಿಕೊಡುತ್ತಿದ್ದೀಯೆ?'' ಎಂದನು. ಆಗ ಶಿಷ್ಯರುಗಳೇ ಉತ್ತರಿಸಿದರು. 'ಅಯ್ಯಾ ವಿಪ್ರೋತ್ತಮನೆ, ಇವರು ನಮ್ಮ ಗುರುಗಳು. ವೇದಾಂತಾರ್ಥವನ್ನು ಬಲ್ಲವರು. ಇವರು ಭೇದವಾದಗಳನ್ನು ಖಂಡಿಸಿ ಐಕ್ಯವಾದವನ್ನು ಪ್ರತಿಪಾದಿಸುವ ಬ್ರಹ್ಮಸೂತ್ರಭಾಷ್ಯವನ್ನು ಬರೆದಿರುತ್ತಾರೆ'- ಎಂದರು. ಆಗ ಬ್ರಾಹ್ಮಣನು 'ಓಹೊ, ಇವನನ್ನು ಭಾಷ್ಯಕಾರನೆಂದೇ ಶಿಷ್ಯರು ಹೇಳುತ್ತಿರುವರಲ್ಲ, ಇದು ಆಶ್ಚರ್ಯವೇ ಸರಿ. ಇರಲಿ' ಎಂದುಕೊಂಡು ಆಚಾರ್ಯರನ್ನೇ ನೇರಾಗಿ ಕುರಿತು 'ಎಲೈ ಸಂನ್ಯಾಸಿಯೆ, ನೀನು ವೇದಾಂತಸೂತ್ರಾರ್ಥಗಳನ್ನು ಬಲ್ಲವನಾದರೆ ಒಂದು ಸೂತ್ರದ ಅರ್ಥವನ್ನಾದರೂ ಹೇಳು, ನೋಡೋಣ' ಎಂದನು. ಆಚಾರ್ಯರು ಕೂಡಲೆ 'ಆಹಾ ! ಸೂತ್ರಾರ್ಥಗಳನ್ನು ಬಲ್ಲ ಮಹಾತ್ಮರಿಗೆ ನಮಸ್ಕಾರವಿರಲಿ. ನನಗೆ 'ಸೂತ್ರಾರ್ಥಗಳನ್ನೆಲ್ಲ ಬಲ್ಲೆನು' ಎಂಬ ಅಹಂಕಾರವೇನೂ ಇಲ್ಲ. ಆದರೂ ನೀವು ಕೇಳಿದ್ದರಿಂದ ಹೇಳಲು ಸಿದ್ಧನಿರುವೆನು. ನೀವೇ ಪ್ರಶ್ನೆ ಮಾಡಿರಿ' ಎಂದರು. ಆಗ ಬ್ರಾಹ್ಮಣನು ವೇದಾಂತಸೂತ್ರಗಳ ಮೂರನೆಯ ಅಧ್ಯಾಯದ ಮೊದಲನೆಯ ಪಾದದ ಮೊದಲನೆಯ ಸೂತ್ರವಾದ 'ತದನ್ತರಪ್ರತಿಪತ್ತೌ....' ಎಂಬ ಸೂತ್ರಾರ್ಥವನ್ನು ಹೇಳುವಂತೆ ಕೇಳಿದನು. ಆಚಾರ್ಯರು ಉತ್ತರಕೊಡುತ್ತಾ 'ಈ ಸೂತ್ರವು ಜೀವಾತ್ಮನ ಪರಲೋಕ - ಜನ್ಮಾಂತರಗಳ ಗತಿಯನ್ನು ಕುರಿತದ್ದಾಗಿದೆ. ಜೀವನು ಈ ದೇಹವನ್ನು ಬಿಟ್ಟು ಹೊರಡುವಾಗ ಮುಂದಿನ ದೇಹಕ್ಕೆ ಬೀಜವಾಗಿರುವ ಕರ್ಮಗಳನ್ನೂ ಜೊತೆಯಲ್ಲಿ ಒಯ್ಯುತ್ತಾನೆ. ಹಾಗೆಂದೇ ಗೌತಮ-ಜೈಮಿನಿಯರ ಸಂವಾದರೂಪವಾದ ಪ್ರಶ್ನೋತ್ತರಗಳು ಛಾಂದೋಗ್ಯೋಪನಿಷತ್ತಿನ ಪಂಚಾಗ್ನಿವಿದ್ಯೆಯ ಪ್ರಕರಣದಲ್ಲಿವೆ' ಎಂದರು. ಅದನ್ನು ಕೇಳಿದ ಬ್ರಾಹ್ಮಣನು

ಆಚಾರ್ಯರ ಮತವನ್ನು ಸರಿಯಲ್ಲವೆಂದು ನೂರು ಯುಕ್ತಿಗಳಿಂದ ಖಂಡಿಸಿದನು. ಕೂಡಲೆ ಅವನ ಒಂದೊಂದು ಯುಕ್ತಿಗೂ ನೂರು ನೂರು ಯುಕ್ತಿಗಳನ್ನು ನೀಡಿ ಆಚಾರ್ಯರು ಆ ಬ್ರಾಹ್ಮಣನು ಹೇಳಿದ್ದ ಅರ್ಥಗಳನ್ನು ನಿರಾಕರಿಸಿಬಿಟ್ಟರು. ಕಡೆಗೆ ಇಬ್ಬರೂ ಸೋಲದೆ ವಾಗ್ಯುದ್ಧವೇ ಆರಂಭವಾಗಿಬಿಟ್ಟಿತು. ಶಿಷ್ಯರುಗಳಿಗೂ ಏನೂ ತೋಚಲಿಲ್ಲ.

**ವ್ಯಾಸಸಾಕ್ಷಾತ್ಕಾರ :**

ಆಗ ಪ್ರಥಮಶಿಷ್ಯನಾದ ಪದ್ಮಪಾದನು ಬಂದಿರುವ ಬ್ರಾಹ್ಮಣನೂ ಗಟ್ಟಿಗನೆಂದೂ ಅವನು ವ್ಯಾಸರೇ ಇರಬೇಕೆಂದೂ ದ್ವಿಜವೇಷದಿಂದ ಸೂತ್ರಕಾರರೇ ಬಂದು ವಾದಮಾಡುತ್ತಿರುವದನ್ನು ಖಂಡನಾವ್ಯಸನದಿಂದ ತನ್ನ ಗುರುವು ಗಮನಿಸದೆ ಇರುವದನ್ನೂ ತಿಳಿದುಕೊಂಡು ಇಬ್ಬರನ್ನೂ ಶಾಂತಗೊಳಿಸಲು ಹೀಗೆಂದನು;

**ತ್ವಂ ಶಂಕರಶ್ಶಂಕರ ಏವ ಸಾಕ್ಷಾದ್**
**ವ್ಯಾಸಸ್ತು ನಾರಾಯಣ ಏವ ನೂನಮ್ ।**
**ತಯೋರ್ವಿವಾದೇ ಸತತಂ ಪ್ರಸಕ್ತೇ**
**ಕಿಂ ಕಿಂಕರೋಽಹಂ ಕರವಾಣಿ ಸದ್ಯಃ॥**

'ಪೂಜ್ಯರೆ, ನೀವು ಕೈಲಾಸವಾಸಿಯಾದ ಪರಮೇಶ್ವರನೇ ಆಗಿರುವಿರಿ. ವ್ಯಾಸರಾದರೊ, ವೈಕುಂಠವಾಸಿಯಾದ ಮಹಾವಿಷ್ಣುವೇ ಆಗಿರುವರು. ಹೀಗೆ ಶಿವ-ನಾರಾಯಣರಿಗೆ ಪರಸ್ಪರವಾಗಿ ವಿವಾದವು ಎದ್ದುಕೊಂಡಲ್ಲಿ ಸೇವಕನಾದ ನಾನು ಏನು ಮಾಡಲಿ?' ಎಂದು ಸ್ತುತಿಸಲಾಗಿ ಆಚಾರ್ಯರು ಎಚ್ಚತ್ತುಕೊಂಡರು. ದೀರ್ಘದಂಡನಮಸ್ಕಾರವನ್ನು ಮಾಡಿ ಮೇಲೆದ್ದು ನೋಡಲು ಭಗವಾನ್ ವೇದವ್ಯಾಸರು ಮೂರ್ತಿಮತ್ತಾಗಿ ನಿಂತಿದ್ದರು. ಆಗ ಆಚಾರ್ಯರು ಹೀಗೆ ಸ್ತೋತ್ರಮಾಡಿದರು :

**ಭವಾಂಸ್ತಟಿಚ್ಚಾರುಜಟಾಕಿರೀಟಃ**
**ಪ್ರವರ್ಷಕಾಂಭೋಧರಕಾಂತಿಕಾಂತಃ ।**
**ಶುಭ್ರೋಪವೀತೀ ಧೃತಕೃಷ್ಣಚರ್ಮಾ**
**ಕೃಷ್ಣೋ ಹಿ ಸಾಕ್ಷಾತ್ ಕಲಿದೋಷಹಂತಾ ॥೧॥**

**ದ್ವೈಪಾಯನ ಸ್ವಾಗತಮಸ್ತು ತುಭ್ಯಂ**
**ದೃಷ್ಟ್ವಾ ಭವಂತಂ ಚರಿತಾ ಮಯಾರ್ಥಾಃ ॥**
**ಯುಕ್ತಂ ತದೇತತ್ ತ್ವಯಿ ಸರ್ವಕಾಲಂ**
**ಪರೋಪಕಾರವ್ರತದೀಕ್ಷಿತತ್ವಾತ್ ॥೨॥**

ಮುನೇ ಪುರಾಣಾನಿ ದಶಾಷ್ಟ ಸಾಕ್ಷಾತ್
ಶ್ರುತ್ಯರ್ಥಗರ್ಭಾಣಿ ಸುದುಷ್ಕರಾಣಿ ।
ಕೃತಾನಿ ಪದ್ಯದ್ವಯಮದ್ಯ ಕರ್ತುಂ
ಕೋ ನಾಮ ಶಕ್ನೋತಿ ಸುಸಂಗತಾರ್ಥಮ್ ॥೩॥

ಯಮಾಮನನ್ತಿ ಶ್ರುತಯಃ ಪದಾರ್ಥಂ
ಸ ಸನ್ನ ಚಾಸನ್ ನ ಬಹಿರ್ನ ಚಾಂತಃ ।
ಸ ಸಚ್ಚಿದಾನಂದಘನಃ ಪರಾತ್ಮಾ
ನಾರಾಯಣಸ್ತ್ವಂ ಪುರುಷಃ ಪುರಾಣಃ ॥೪॥

'ನೀನಾದರೊ, ಮಿಂಚಿನ ಬಳ್ಳಿಯಂತೆ ಹೊಳೆಯುವ ಸುಂದರವಾದ ಜಟೆಗಳೆಂಬ ಕಿರೀಟಧಾರಿಯೂ ಮಳೆಗರೆಯಲಿರುವ ನೀಲಮೇಘದಂತೆ ಕಾಂತಿಯುಕ್ತನೂ ಶುಭ್ರವಾದ ಯಜ್ಞೋಪವೀತದಿಂದ ಅಲಂಕೃತನೂ ಜಿಂಕೆಯ ಚರ್ಮವನ್ನು ಉಟ್ಟಿರುವವನೂ ಸಕಲಕಲಿದೋಷನಿವಾರಕನೂ ಆದ ಮತ್ತೊಬ್ಬ ಕೃಷ್ಣನೇ ಆಗಿರುವೆ. ಎಲೌ ಕೃಷ್ಣದ್ವೈಪಾಯನಮುನಿಯೆ, ನಿನಗೆ ಸುಸ್ವಾಗತವು. ನಿನ್ನ ದರ್ಶನದಿಂದ ನಾನು ಮಾಡಬೇಕಾಗಿದ್ದ ಕರ್ತವ್ಯಗಳೆಲ್ಲವನ್ನೂ ಪೂರೈಸಿದಂತಾಯಿತು. ನೀನು ಪರೋಪಕಾರಕ್ಕಾಗಿಯೇ ಸರ್ವಕಾಲದಲ್ಲಿಯೂ ದೀಕ್ಷಾಬದ್ಧನಾಗಿರುವೆ. ಇದು ಯುಕ್ತವೇ ಆಗಿರುವದು. ಎಲೌ ಮುನಿಯೆ, ವೇದಾರ್ಥಗಳ ಅಂತರಂಗವನ್ನು ಧರಿಸಿರುವ ಹದಿನೆಂಟು ಮಹಾಪುರಾಣಗಳನ್ನು ನೀನು ರಚಿಸಿರುವೆ. ಇವುಗಳ ರಚನೆಯೇನೂ ಸುಲಭವಾಗಿರಲಿಲ್ಲ. (ನಾಲ್ಕು ಲಕ್ಷಗ್ರಂಥಗಳ ರಾಶಿಯಾದ ಅವುಗಳು ಅಭೂತಪೂರ್ವವಾಗಿವೆ) ಈಗಿನ ಕಾಲಕ್ಕೆ ಅಂಥ ಸುಸಂಗತವಾದ ಅಭಿಪ್ರಾಯವುಳ್ಳ ಎರಡೇ ಪದ್ಯಗಳನ್ನಾದರೂ ಯಾವನು ಹೆಣೆದಾನು? ವೇದಗಳೆಲ್ಲವೂ ಯಾವ ನಾರಾಯಣನನ್ನು ಸತ್ತಲ್ಲ, ಅಸತ್ತಲ್ಲ, ಒಳಗಿಲ್ಲ, ಹೊರಗಿಲ್ಲ- ಎಂದು ಸ್ತುತಿಸುತ್ತಿರುವವೋ ಅಂಥ ಸಚ್ಚಿದಾನಂದದ ಗಟ್ಟಿಯಾದ, ಪರಮಾತ್ಮನಾದ ಪುರಾಣಪುರುಷನಾದ ನಾರಾಯಣನೇ ನೀನು' ಎಂದು ಹೊಗಳಿದರು.

## ವ್ಯಾಸಾನುಗ್ರಹ:

ಹೀಗೆ ಸ್ತುತಿಸಿದ ಆಚಾರ್ಯರನ್ನು ಕುರಿತು ವ್ಯಾಸರಿಂತೆಂದರು : ''ಎಲೌ ಪ್ರಿಯಶಿಷ್ಯನೆ, ನೀನು ನನ್ನ ಪುತ್ರನಾದ ಶುಕನಂತೆ ಪ್ರೀತಿಪಾತ್ರನಾಗಿರುವೆ; ಚಂದ್ರಮೌಳಿಯ ವರಪ್ರಸಾದದಿಂದ ನೀನು ನನ್ನ ಸೂತ್ರಗಳಿಗೆ ಭಾಷ್ಯವನ್ನು ರಚಿಸಿರುವೆಯೆಂದು ಸಿದ್ಧದೇವತೆಗಳಿಂದ ನನಗೆ ತಿಳಿಯಿತು, ಆಗ ಬಹಳ ಆನಂದವನ್ನು ಹೊಂದಿದ ನಾನು ನಿನ್ನನ್ನೂ ನಿನ್ನ ಭಾಷ್ಯಗ್ರಂಥವನ್ನೂ ನೋಡಲಿಚ್ಛೆಯುಳ್ಳವನಾಗಿ ಬಂದೆನು'' ಎಂದರು. ಆಗ ಆಚಾರ್ಯರು. 'ಸ್ವಾಮಿನ್, ಶುಕಮಹಾಮುನಿಯೆಲ್ಲಿ?

ನಾನೆಲ್ಲಿ? ಸುಮಂತು- ಜೈಮಿನಿ, ವೈಶಾಂಪಾಯನ, ಪೈಲ-ರೆಂಬ ಉತ್ತಮೋತ್ತಮ ಶಿಷ್ಯರುಗಳ ಪರಂಪರೆಯಲ್ಲಿ ನನ್ನನ್ನೂ ತಾವು ಕಂಡುಕೊಂಡದ್ದು ನನ್ನ ಪುಣ್ಯವೇ ಸರಿ. ಕರುಣಾಳುಗಳಾದ ತಾವು ದರ್ಶನಕೊಟ್ಟಿರುವದನ್ನು ಏನೆಂದು ಬಣ್ಣಿಸಲಿ? ತಾವು ಈ ಭಾಷ್ಯಗ್ರಂಥರಚನೆಗೆ ದುಸ್ಸಾಹಸವನ್ನು ಮಾಡಿರುವ ನನ್ನನ್ನು ಕ್ಷಮಿಸಿ ಈ ಗ್ರಂಥವನ್ನು ಒಮ್ಮೆ ತಾವು ಪರಿಶೀಲಿಸಿ ದುರುಕ್ತಿಗಳಿದ್ದಲ್ಲಿ ಸರಿಪಡಿಸಬೇಕು' ಎಂದು ಪ್ರಾರ್ಥಿಸಿ ಭಾಷ್ಯಗ್ರಂಥವನ್ನು ವೇದವ್ಯಾಸರ ಕರಕಮಲಗಳಲ್ಲಿ ಸಮರ್ಪಿಸಿದರು.

ಆಗ ವೇದವ್ಯಾಸರು ಸೂತ್ರಭಾಷ್ಯಗ್ರಂಥವನ್ನು ಅವಲೋಕಿಸುತ್ತಾ ಬಂದರು. ತಮ್ಮ ಅಂತರಂಗಾಭಿಪ್ರಾಯಗಳನ್ನೆಲ್ಲ ಅರಿತು ಸಮನ್ವಯಮಾಡಿಕೊಂಡು ಸೂತ್ರಾನುಸಾರಿಯಾದ ಮೃದುವಾಕ್ಯಗಳಿಂದ ಅರ್ಥವಿವರಣೆಯನ್ನು ನೀಡಿರುವದು, ಸಿದ್ಧಾಂತವನ್ನು ಯುಕ್ತ್ಯನುಭವಗಳ ಮೇಲನದಿಂದಲೂ ಶ್ರುತಿವಾಕ್ಯಗಳಿಂದಲೂ ಅಲಂಕರಿಸಿ ಜೋಡಿಸಿರುವದು - ಈ ರೀತಿಯಾದ ಪ್ರಸನ್ನಗಂಭೀರವೂ ಮಧುರವೂ ನಿಷ್ಕೃಷ್ಟವೂ ಹಿತಮಿತವಾದ ಪ್ರಮಾಣದ್ದೂ ಆಗಿ ಪುನರುಕ್ತಿ, ಅನುಕ್ತಿ, ದುರುಕ್ತಿರಹಿತವಾಗಿರುವ ಭಾಷ್ಯವನ್ನು ಓದಿ ಓದಿ ಆನಂದಿಸಿದರು. ಅನಂತರ ಹೀಗೆಂದರು : 'ಮಗು, ನೀನು ದುಡುಕಿರುವದಿಲ್ಲ; ಅಪಾರ್ಥಗಳನ್ನಂತೂ ಮಾಡುವ ಸಂಭವವೇ ಇಲ್ಲ. ಗುರೂಪದಿಷ್ಟವಾದ ಆಗಮಾರ್ಥವನ್ನೂ ಮೀರಿರುವದಿಲ್ಲ. ಮೀಮಾಂಸಾ, ವ್ಯಾಕರಣ, ತರ್ಕಶಾಸ್ತ್ರಬದ್ಧವಾದ ಪದಾರ್ಥ, ವಾಕ್ಯಾರ್ಥ, ಪ್ರಮಾಣಗಳನ್ನು ಅಚ್ಚುಕಟ್ಟಾಗಿ ಹೆಣೆದಿರುತ್ತೀಯೆ.

ವೇದಾಂತವಾಕ್ಯಗಳ ಸಕಲಾರ್ಥವನ್ನೂ ಕ್ರೋಡೀಕರಿಸಿರುವೆ. ಬ್ರಹ್ಮಚರ್ಯಾಶ್ರಮದಿಂದಲೇ ಪರಮಹಂಸಪದವಿಗೇರಿರುವ ನೀನು ನಿನ್ನ ಈ ಗ್ರಂಥದಲ್ಲಿ ಸಂನ್ಯಾಸದ ತಿರುಳನ್ನು ಎತ್ತಿಹಿಡಿದಿರುವೆ. ಸೂತ್ರಗಳನ್ನು ಹೀಗೆ ವೇದಾಂತವಾಕ್ಯಕುಸುಮಗಳ ಗ್ರಥನಕ್ಕೆ ಬಳಸಿ ಭಾಷ್ಯಪುಷ್ಪಮಾಲೆಯನ್ನು ರಚಿಸಿರುವ ನೀನು ಪರಶಿವಾಂಶನೇ ಸರಿ; ಇಲ್ಲವಾದರೆ ಇಂಥ ಗ್ರಂಥರಚನೆಯು ಹೇಗೆ ಸಾಧ್ಯವಾದೀತು? ಇನ್ನು ಈ ಗ್ರಂಥವನ್ನು ಎಲ್ಲೆಲ್ಲಿಯೂ ಪ್ರಚಾರಮಾಡುವವನಾಗು. ನಾನು ಇನ್ನು ಹೊರಡುವೆನು' ಎಂದರು.

ಆಗ ಆಚಾರ್ಯರು ''ಭಗವಾನರೆ, ಈಗಾಗಲೆ ತಮ್ಮ ಅನುಗ್ರಹ ಪಾತ್ರನಾಗಿದ್ದೇನೆ. ಭಾಷ್ಯಪಾಠವನ್ನೂ ಕೆಲವರಿಗೆ ಮಾಡಿರುತ್ತೇನೆ. ಕುಮತಗಳನ್ನು ನಿರಾಸಮಾಡಿಯೂ ಇರುತ್ತೇನೆ. ಇನ್ನು ಮಾಡತಕ್ಕದ್ದಾದರೂ ಏನಿದೆ ? ತಾವು ಒಂದು ಮುಹೂರ್ತಕಾಲ ವಿಳಂಬಮಾಡಿರಿ. ಇದೊ, ಮಣಿಕರ್ಣಿಕೆಯಲ್ಲಿ ಮುಳುಗಿ ತಾವು ಎದುರಿಗೇ ಇರುವಾಗಲೇ ಈ ಭೌತಿಕದೇಹವನ್ನು ಬಿಟ್ಟುಬಿಡುವೆನು'' ಎಂದು ಬೇಡಿಕೊಂಡರು. ವ್ಯಾಸರು ಚಿಂತಾಕ್ರಾಂತರಾಗಿ ಕಡೆಗೆ 'ವತ್ಸ, ಈಗಲೇ ನೀನು ದೇಹತ್ಯಾಗಮಾಡದಿರು. ಇನ್ನೂ ಗೆಲ್ಲಬೇಕಾದ ವಾದಿಗಳು ಅನೇಕರಿದ್ದಾರೆ. ಅದಕ್ಕಾಗಿ

ನೀನು ಇನ್ನೂ ಕೆಲವು ವರ್ಷಗಳು ಭೂಮಿಯನ್ನು ಬಿಡಬಾರದು. ಮಗು, ಬ್ರಹ್ಮದೇವನು ನಿನಗೆ ದಯಪಾಲಿಸಿದ್ದ ಆಯುಸ್ಸು ಎಂಟು ವರ್ಷಗಳು. ಅನಂತರ ನೀನು ಸಂನ್ಯಾಸಮಾಡಿದ್ದರಿಂದ ಅದು ಹದಿನಾರಾಯಿತು. ಇದು ನಿನ್ನ ವಿಜ್ಞಾನದ ಫಲವು. ಈಗ ನಾನು ಲೋಕಕಲ್ಯಾಣದೃಷ್ಟಿಯಿಂದ ನಿನಗೆ ಇನ್ನೂ ಹದಿನಾರು ವರ್ಷಗಳ ಆಯುಷ್ಯವನ್ನು ದಯಪಾಲಿಸಿದ್ದೇನೆ. ಇದು ಸತ್ಯವು. ಈ ಆಯುಷ್ಯವನ್ನೆಲ್ಲ ವಿನಿಯೋಗಿಸಿ ನೀನು ಭಾಷ್ಯಪ್ರಚಾರವನ್ನು ಮಾಡುವವನಾಗು. ನಿನ್ನ ಭಾಷ್ಯವು ಸೂರ್ಯಚಂದ್ರರಿರುವ ಕಾಲದವರೆಗೂ ವಿಜೃಂಭಿಸುತ್ತಿರಲಿ' ಎಂದು ಆಶೀರ್ವದಿಸಿ ಅಂತರ್ಧಾನರಾದರು.

## ಕುಮಾರಿಲಭಟ್ಟರ ಸಮಾಗಮ :

ಶ್ರೀವೇದವ್ಯಾಸರ ಅಪ್ಪಣೆಯಂತೆ ಆಚಾರ್ಯರು ಭಾಷ್ಯಪ್ರಚಾರಕ್ಕಾಗಿಯೇ ತಮ್ಮ ಆಯುಷ್ಯವನ್ನು ಮುಡುಪಾಗಿರಿಸಿ ಭಾರತದೇಶಾದ್ಯಂತ ಸಂಚರಿಸಿ ಪಂಡಿತರುಗಳನ್ನು ಸಂಧಿಸಿ ವಿಚಾರವಿನಿಮಯಮಾಡಿ ಅದ್ವೈತಸಿದ್ಧಾಂತವನ್ನು ಹರಡುವ ಉದ್ದೇಶದಿಂದ ಮೊಟ್ಟಮೊದಲು ಕಾಶಿಯಿಂದ ಪ್ರಯಾಗಕ್ಕೆ ಪ್ರಯಾಣಮಾಡಿದರು. ಅಲ್ಲಿ ಕುಮಾರಿಲಭಟ್ಟರು ಇರುವರೆಂಬ ಸುದ್ದಿಯು ತಿಳಿದಿತ್ತು. ತ್ರಿವೇಣೀ ಸ್ನಾನಮಾಡಿ ಪುಣ್ಯಸ್ಥಳಗಳನ್ನು ಸಂದರ್ಶಿಸಿ ಕುಮಾರಿಲಭಟ್ಟರನ್ನು ಹುಡುಕಿಕೊಂಡು ಬಂದರು. ಕುಮಾರಿಲರಿಗೆ ಭಟ್ಟಪಾದರೆಂದೂ ಹೆಸರಿತ್ತು. ಅವರು ಆಚಾರ್ಯರಿಗಿಂತ ವಯಸ್ಸಿನಲ್ಲಿ ದೊಡ್ಡವರು. ಆದರೆ ಆಶ್ರಮದಿಂದ ಕಿರಿಯರು-ಎಂದರೆ ಗೃಹಸ್ಥರು. ಆ ಮಹನೀಯರ ಹೆಸರು ಪಂಡಿತಮಂಡಲದಲ್ಲಿ ಸುಪ್ರಸಿದ್ಧವಾಗಿದ್ದುದರಿಂದ ಮೊದಲು ಅವರನ್ನು ಜಯಿಸಿ ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡಲ್ಲಿ ಮುಂದಿನ ವಿದ್ಯಾಪ್ರಚಾರಕಾರ್ಯಕ್ಕೆ ಅನುಕೂಲವಾದೀತೆಂದು ಆಚಾರ್ಯರು ಭಾವಿಸಿದ್ದರು. ಆದರೆ ಅವರನ್ನು ಆಚಾರ್ಯರು ಭೇಟಿಮಾಡುವ ವೇಳೆಗೆ ಅವರು ಒಂದು ಪ್ರಾಯಶ್ಚಿತ್ತವ್ರತವನ್ನು ಸ್ವೀಕರಿಸಿಬಿಟ್ಟಿದ್ದರು. ಹಿಂದೆ ಅವರು ಒಬ್ಬ ಬೌದ್ಧಗುರುವಿನಿಂದಲೇ ಸ್ವಲ್ಪ ವಿದ್ಯೆಯನ್ನು ಕಲಿತಿದ್ದು ಅನಂತರ ಬೌದ್ಧರನ್ನು ವಾದದಲ್ಲಿ ಜಯಿಸಿದಾಗ ಗುರುವಿಗೆ ತಿರಸ್ಕಾರವನ್ನು ಮಾಡಿದಂತಾಯಿತಲ್ಲ- ಎಂಬ ಪಶ್ಚಾತ್ತಾಪವುಂಟಾಗಿ ತುಷಾಗ್ನಿಪ್ರಾಯಶ್ಚಿತ್ತವನ್ನು ತಮಗೆ ತಾವೇ ವಿಧಿಸಿಕೊಂಡಿದ್ದರು. ತುಷಾಗ್ನಿಪ್ರಾಯಶ್ಚಿತ್ತವೆಂದರೆ ಬತ್ತದ ಹೊಟ್ಟಿನ ರಾಶಿಯ ಮಧ್ಯದಲ್ಲಿ ಕುಳಿತು ಬೆಂಕಿಯನ್ನು ಹಾಕಿಸಿಕೊಂಡು ಯಜ್ಞೇಶ್ವರನಿಗೆ ಆತ್ಮಾರ್ಪಣೆಮಾಡಿಕೊಳ್ಳುವದು. ಆಚಾರ್ಯರು ಭಟ್ಟಪಾದರನ್ನು ಕಂಡಾಗ ಅವರು ಈ ಸ್ಥಿತಿಯಲ್ಲಿದ್ದರು. ಆದರೂ ಜೀವಂತರಾಗಿದ್ದುದರಿಂದ ಆಚಾರ್ಯರನ್ನು ಶಿಷ್ಯರ ಮೂಲಕ ಸತ್ಕರಿಸಿದರು. ಆಚಾರ್ಯರು ತಮ್ಮ ಕಮಂಡಲೂದಕದಿಂದ ಅಗ್ನಿಯನ್ನು ಶಾಂತಗೊಳಿಸುವ ದಾಗಿಯೂ ವೇದಪ್ರಾಮಾಣ್ಯವನ್ನು ಸ್ಥಾಪಿಸುವ ಸಲುವಾಗಿ ಬೌದ್ಧಮತಖಂಡನೆ

ಮಾಡಿದ್ದರಲ್ಲಿ ಏನೂ ದೋಷವಿಲ್ಲವೆಂದೂ ಹೇಳಿದರೂ ಭಟ್ಟಪಾದರು ಒಪ್ಪಲಿಲ್ಲ. ಹಾಗೆಯೇ ಸ್ವಲ್ಪ ಮಟ್ಟಿಗೆ ಭಾಷ್ಯಗ್ರಂಥವನ್ನು ಅವಲೋಕಿಸಿದರು. 'ವಿದ್ವಾನೇವ ವಿಜಾನಾತಿ ವಿದ್ವಜ್ಜನಪರಿಶ್ರಮಮ್ (ವಿದ್ವಾಂಸನ ಕೃತಿಯ ರಚನೆಯ ಸ್ವಾರಸ್ಯವನ್ನೂ ಅದಕ್ಕಾಗಿ ಆಗಿರಬಹುದಾದ ಶ್ರಮವನ್ನೂ ಮತ್ತೊಬ್ಬ ವಿದ್ವಾಂಸನೇ ಬಲ್ಲನು) ಎಂಬಂತೆ ಸ್ವತಃ ಪಂಡಿತರೂ ಗ್ರಂಥಕರ್ತರೂ ಆಗಿದ್ದ ಕುಮಾರಿಲರಿಗೆ ಆಚಾರ್ಯರ ಭಾಷ್ಯದ ರುಚಿಯು ಚೆನ್ನಾಗಿ ತಿಳಿಯಿತು. ಭಟ್ಟಪಾದರಿಂದಲೇ ತಮ್ಮ ಭಾಷ್ಯಕ್ಕೆ ವಾರ್ತಿಕವನ್ನು ಬರೆಯಿಸಬೇಕೆಂದು ಆಚಾರ್ಯರು ಇಚ್ಛಿಸಿದ್ದರು. ಆದರೆ ಸಂದರ್ಭವು ಬೇರೆಯಾಗಿಬಿಟ್ಟಿತು. ಕಡೆಗೆ ಭಟ್ಟಪಾದರು 'ಪೂಜ್ಯರೆ, ನಿಮ್ಮ ಭಾಷ್ಯದ ಪ್ರಾಥಮಿಕವಿಭಾಗಕ್ಕೇ ಎಂಟುಸಾವಿರ ಪದ್ಯಗಳ ವಾರ್ತಿಕರಚನೆಯು ಆದೀತೆಂದು ನನಗೆ ಅನಿಸಿದೆ. ನಾನು ಜೀವಂತನಾಗಿದ್ದುಕೊಂಡಿದ್ದರೆ ಅತ್ಯವಶ್ಯವಾಗಿ ವಾರ್ತಿಕರಚನೆಯನ್ನು ಮಾಡಿಬಿಡುತ್ತಿದ್ದೆನು. ಈಗ ಅವಕಾಶವಿಲ್ಲವಾಗಿದೆ. ನನ್ನ ಪೂರ್ವಪುಣ್ಯದಿಂದ ತಾವು ದರ್ಶನವನ್ನು ನೀಡಿರುವಿರಿ. ಸಂಸಾರಿಗಳಿಗೆ ಸತ್ಸಂಗವು ದುರ್ಲಭ. ತಮ್ಮ ಕಾರ್ಯಸಿದ್ಧಿಯಾಗಬೇಕಾದರೆ ಒಂದು ಸಲಹೆಯನ್ನು ನೀಡುವೆನು. ನನ್ನ ಆಪ್ತಶಿಷ್ಯನೂ ಕರ್ಮಠನೂ ಅಸಾಧಾರಣವಿದ್ವಾಂಸನೂ ಆಗಿರುವ ಮಂಡನ ಮಿಶ್ರನೆಂಬುವನಿರುವನು. ಅವನ ವಾಸಸ್ಥಾನವು ಮಾಹಿಷ್ಮತೀನಗರವು. ತಾವು ಅಲ್ಲಿಗೆ ದಯಮಾಡಿಸಿ ವಾದದಲ್ಲಿ ಅವನನ್ನು ಗೆಲ್ಲಬೇಕು. ಅವನಿಗೆ ಸರಸ್ವತಿಯ ಅಪರಾವತಾರಳಾದ ಉಭಯಭಾರತಿಯೆಂಬ ಪತ್ನಿಯಿರುತ್ತಾಳೆ. ಆಕೆಯು ಸಕಲ ಶಾಸ್ತ್ರಪ್ರವೀಣಳೆಂಬುದನ್ನು ಹೇಳಬೇಕಾಗಿಯೇ ಇಲ್ಲ. ಆಕೆಯನ್ನೇ ಮಧ್ಯಸ್ಥಳನ್ನಾಗಿ ಮಾಡಿಕೊಂಡು ತಾವು ಆ ಪಂಡಿತನೊಡನೆ ವಾದಮಾಡಿ ಗೆದ್ದು ಅವನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳಿರಿ. ಅವನನ್ನು ಜಯಿಸಿಬಿಟ್ಟರೆ ಪಂಡಿತಮಂಡಲವನ್ನೇ ಗೆದ್ದಂತೆ ಎಂದು ತಿಳಿಯಿರಿ. ನಾನಿನ್ನು ವಿರಮಿಸುತ್ತೇನೆ. ಯತಿವರ್ಯರಾದ ತಮಗೆ ಅನಂತವಂದನೆಗಳು' ಎಂದು ಹೇಳಿ ಸುಮ್ಮನಾದರು. ಆಚಾರ್ಯರು ಭಟ್ಟಪಾದರಿಗೆ ಸಚ್ಚಿದಾನಂದಬ್ರಹ್ಮಸ್ವರೂಪವನ್ನು ಉಪದೇಶಮಾಡಿದರು. ಅದನ್ನು ಕೇಳಿ ಹೃದಯದಲ್ಲಿ ಧರಿಸಿಕೊಂಡ ಆ ಮಹಾತ್ಮರು ತಮ್ಮ ಪಾರ್ಥಿವಶರೀರವನ್ನು ಅಗ್ನಿದೇವನಿಗೆ ಅರ್ಪಿಸಿ ವಿಷ್ಣುಪದವನ್ನು ಸೇರಿ ಮುಕ್ತರಾದರು.

---

ಸಂನ್ಯಾಸಿಯನ್ನು ಕಂಡದ್ದರಿಂದ ಆಶ್ಚರ್ಯವಾದರೂ ಕರ್ಮಾನುಷ್ಠಾನದ ನಡುವೆ ಅಕಸ್ಮಾತ್ತಾಗಿ ಈತನೇಕೆ ಬಂದನೆಂದು ಮನಸ್ಸಿನಲ್ಲಿ ಕಸಿವಿಸಿಯಾಯಿತು.

## ಮಂಡನಸಮಾಗಮ :

ಆಚಾರ್ಯರು ಬರುವ ವೇಳೆಗೆ ಮಂಡನನು ಸಂಕಲ್ಪಮಾಡಿ ಶ್ರಾದ್ಧಾರಂಭವನ್ನು ಮಾಡಿದ್ದನು. ಶ್ರೀ ವೇದವ್ಯಾಸರು, ಶ್ರೀ ಜೈಮಿನಿಗಳೇ ಬ್ರಾಹ್ಮಣರಾಗಿ ನಿಮಂತ್ರಿಸಲ್ಪಟ್ಟಿದ್ದರು. ಕರ್ಮಾರಂಭದಲ್ಲಿ ಪಠಿಸಿದ್ದ ಶ್ಲೋಕವನ್ನು ಬ್ರಾಹ್ಮಣರು ಅವನಿಗೆ ನೆನಪು ಮಾಡಿಕೊಟ್ಟರು. ಅದು ಹೀಗಿದೆ:

**ಅಕ್ರೋಧನೈಃ ಶೌಚಪರೈಃ ಸತತಂ ಸತ್ಯವಾದಿಭಿಃ ।**
**ಭವಿತವ್ಯಂ ಭವದ್ಭಿಶ್ಚ ಮಯಾ ಚ ಶ್ರಾದ್ಧಕರ್ಮಣಿ॥**

'ಈ ಶ್ರಾದ್ಧಕರ್ಮದಲ್ಲಿ- ಇದು ಪೂರೈಸುವವರೆಗೂ ನಾನು- ಮತ್ತು ನೀವುಗಳೆಲ್ಲರೂ ಕೋಪತಾಪಗಳಿಲ್ಲದೆ, ಶುಚಿಭೂತರಾಗಿ, ನಿಜವನ್ನು ನುಡಿಯುವವರಾಗಿರತಕ್ಕದ್ದು' ಎಂದು ಮೇಲಿನ ಪದ್ಯದ ಅಭಿಪ್ರಾಯವು. ಪಿತೃಕರ್ಮಕಾಲಕ್ಕೆ ಕೋಪಾದಿಗಳನ್ನಾಗಲಿ, ಆಯಾಸವನ್ನಾಗಲಿ, ಅಶ್ರದ್ಧೆಯನ್ನಾಗಲಿ ಪ್ರಕಟಿಸಿದರೆ ಪಿತೃಗಳು ನಿರಾಶರಾಗಿ ಹೋಗಿಬಿಡುವರೆಂದೂ ಶ್ರಾದ್ಧವು ವ್ಯರ್ಥವಾಗಿಬಿಡುವದೆಂದೂ ಶಾಸ್ತ್ರಗಳು ತಿಳಿಸುತ್ತವೆ. ಆದ್ದರಿಂದ ಮಂಡನನು ವಿವೇಕದಿಂದ ಕೋಪವನ್ನು ನಿಗ್ರಹಿಸಿ ಬಂದಿದ್ದ ಅತಿಥಿಯನ್ನು ಕುರಿತು ''ತಾವು ಯಾರು? ಎಲ್ಲಿಂದ ಬಂದಿರಿ? ನನ್ನಿಂದೇನಾಗಬೇಕು? ಸಂನ್ಯಾಸಿಗಳಾಗಿ ಕಂಡುಬರುತ್ತಿರುವಿರಿ. ಬ್ರಾಹ್ಮಣರೊಡನೆಯೇ ಮಹಾವಿಷ್ಣುರೂಪರಾದ ತಮಗೂ ಭಿಕ್ಷೆಯನ್ನು ನೀಡುವೆನು. ಸ್ವೀಕರಿಸಬೇಕು'' ಎಂದನು. ಆಚಾರ್ಯರಿಗೆ ಮಂಡನನ ಈ ವರ್ತನೆಯಿಂದ ಬಹು ಸಂತೋಷವಾಯಿತು. ಕೂಡಲೆ ಅವರು ''ಪಂಡಿತೋತ್ತಮರೆ, ನಾನೊಬ್ಬ ಸಂನ್ಯಾಸಿ; ನನ್ನ ಪರಿಚಯವೂ ಇನ್ನು ಮುಂದೆ ನಿಮಗೆ ಗೊತ್ತಾಗಲಿದೆ; ನಾನು ಅನ್ನಭಿಕ್ಷೆಗಾಗಿ ಬಂದಿಲ್ಲ. ವಾದಭಿಕ್ಷೆಗಾಗಿ ಬಂದಿರುವೆನು. ನಿಮ್ಮ ಅನುಷ್ಠಾನವು ಮುಂದುವರೆಯಲಿ; ಅಲ್ಲಿಯವರೆಗೆ ನಾನು ಇಲ್ಲಿಯೇ ಉಳಿಯುವೆನು'' ಎಂದರು. 'ವಾದಭಿಕ್ಷೆ' ಎಂದಕೂಡಲೆ ಆ ಪಂಡಿತೋತ್ತಮನಿಗೆ ಮತ್ತೂ ಆನಂದವಾಯಿತು. ''ಅವಶ್ಯವಾಗಿ ವಾದಭಿಕ್ಷೆಯನ್ನು ನೀಡುತ್ತೇನೆ; ಆದರೆ ತಾವು ಅನ್ನಭಿಕ್ಷೆಯನ್ನೂ ದಯವಿಟ್ಟು ಸ್ವೀಕರಿಸಬೇಕು'' ಎಂದು ಕೇಳಿಕೊಂಡನು. ಯದೃಚ್ಛಾಲಾಭಸಂತುಷ್ಟರೆಂಬ ಗೌರವಕ್ಕೆ ಪಾತ್ರರಾದ ಸಂನ್ಯಾಸಿಗಳಿಗೆ ಆಯಾ ಸಮಯಕ್ಕೆ ಭಗವದನುಗ್ರಹದಿಂದ ದೊರೆತ ಅನ್ನವು 'ಭಿಕ್ಷೌಷಧಂ ಭುಜ್ಯತಾಂ' ಎಂದಂತೆ ಸ್ವೀಕಾರ್ಯವೆಂದೇ ಶಾಸ್ತ್ರಗಳು ತಿಳಿಸುವದರಿಂದ ಆಚಾರ್ಯರು ಭಿಕ್ಷೆಗೆ ಒಪ್ಪಿದರು. ಆಹ್ವಾನಿಸಲ್ಪಟ್ಟಿದ್ದ ವ್ಯಾಸ ಜೈಮಿನಿಗಳು ಸಹ ಶ್ರಾದ್ಧಕಾಲಕ್ಕೆ ಒದಗಿದ ಸಂನ್ಯಾಸಿಯನ್ನು ಮಹಾವಿಷ್ಣು

# ದ್ವಿತೀಯಪುಷ್ಪ

## ೧. ಮಂಡನಮಿಶ್ರನೊಡನೆ ಸಂವಾದ

**ಆಚಾರ್ಯರು ಮಾಹಿಷ್ಮತಿಗೆ ಬಂದುದು:**

ಶ್ರೀಭಟ್ಟಪಾದರು ಪರಂಧಾಮವನ್ನೈದಿದ ಅನಂತರ ಆಚಾರ್ಯರು ಮಾಹಿಷ್ಮತೀನಗರದ ಕಡೆಗೆ ಹೊರಟು ಬಂದರು. ಆ ಪಟ್ಟಣವು ಸಕಲಸಂಪತ್ ಸಮೃದ್ಧವಾಗಿದ್ದು ಎಲ್ಲಾ ಸೌಕರ್ಯಗಳಿಂದ ಕೂಡಿತ್ತು. ಉಪವನಗಳು, ನೀರಿನ ಕೊಳಗಳು, ರಸ್ತೆಗಳು, ಸೌಧಗಳು- ಮುಂತಾದವುಗಳಿಂದ ಕಂಗೊಳಿಸುತ್ತಿತ್ತು. ಅಲ್ಲಿದ್ದ ಪ್ರಜೆಗಳಲ್ಲಿ ಬಹುಜನರು ವೇದಶಾಸ್ತ್ರಾರ್ಥಸಂಪನ್ನರೂ ಆಚಾರನಿಷ್ಠರೂ ಅಗ್ನಿ ಹೋತ್ರಾದಿಕರ್ಮನಿಷ್ಠರೂ ಆಗಿದ್ದರು. ಅಲ್ಲಲ್ಲಿ ವೇದಾಧ್ಯಯನಧ್ವನಿಯೂ ಹೋಮಧೂಮವೂ ಗುಂಪುಗುಂಪಾಗಿ ಸಂಚರಿಸುತ್ತಿದ್ದ ಬ್ರಹ್ಮಚಾರಿಗಳ ಶಿಷ್ಯವೃಂದವೂ ಕಂಡುಬರುತ್ತಿತ್ತು. ಆಚಾರ್ಯರು ಮೊದಲು ಊರಿನ ಹತ್ತಿರವಿದ್ದ ಕೊಳದಲ್ಲಿ ಸ್ನಾನಮಾಡಿ ಉಪವನದಲ್ಲಿ ವಿಶ್ರಮಿಸಿಕೊಂಡು ಪುರವನ್ನು ಪ್ರವೇಶಿಸಿದರು. ಅಲ್ಲಿ ಮಂಡನಮಿಶ್ರನ ಮನೆಯನ್ನು ಗುರುತಿಸುವ ಸಲುವಾಗಿ ನೀರು ತರಲು ಹೋಗುತ್ತಿದ್ದ ಹೆಂಗಸರನ್ನು ಕೇಳಿದರು. ಅವರಲ್ಲಿ ಒಬ್ಬಳು 'ಯತಿವರ್ಯರೆ, ಮಂಡನಪಂಡಿತರ ಮನೆಯನ್ನು ಗುರುತಿಸುವ ಉಪಾಯವನ್ನು ಕೇಳಿರಿ. ಯಾರ ಮನೆಯ ಮುಂದಿನ ಪಂಜರಗಳಲ್ಲಿ ಕುಳಿತಿರುವ ಗಿಳಿಗಳು ಕರ್ಮದಿಂದ ಮುಕ್ತಿಯೊ, ಜ್ಞಾನದಿಂದ ಮುಕ್ತಿಯೊ? ಎಂದು ಪರಸ್ಪರವಾಗಿ ಮಾತನಾಡುತ್ತಿರುವವೋ ಅದೇ ಆ ಪಂಡಿತನ ಗೃಹವು' ಎಂದಳು. ಆಚಾರ್ಯರಿಗೆ ಆಶ್ಚರ್ಯವಾದರೂ ಮಂಡನನ ಮನೆಯನ್ನು ಗುರುತಿಸಿದಾಗ ಮುಂದುಗಡೆ ಬಾಗಿಲು ಮುಚ್ಚಲ್ಪಟ್ಟಿತ್ತು. ವಿಚಾರಮಾಡಿದ್ದರಲ್ಲಿ ಆದಿನ ಅವರ ಮನೆಯಲ್ಲಿ ಪಿತೃಶ್ರಾದ್ಧವೆಂದೂ ಮಂಡನಪಂಡಿತರು ನೇಮನಿಷ್ಠೆಯಲ್ಲಿರುವರೆಂದೂ ತಿಳಿಯಿತು. ಆದರೂ ಆತನನ್ನು ಭೇಟಿಮಾಡಬೇಕೆಂದು ಆಚಾರ್ಯರು ಸಂಕಲ್ಪಿಸಿ ಆತನ ಮನೆಯ ರಚನೆಯನ್ನು ವೀಕ್ಷಿಸಿದರು. ನಡುವೆ ಅಂಗಳವುಳ್ಳ ಮನೆಯಾಗಿದ್ದುದರಿಂದ ಆಚಾರ್ಯರು ತಮ್ಮ ಯೋಗಶಕ್ತಿಯಿಂದ ಆಕಾಶಮಾರ್ಗದಿಂದಲೇ ಮನೆಯ ಒಳ ಅಂಗಳದಲ್ಲಿ ಇಳಿದು ನಾರಾಯಣ! ಎಂದು ನಾಮೋಚ್ಚಾರಣೆ ಮಾಡಿದರು. ವಿದ್ವಾಂಸನಾದ ಮಂಡನನಿಗೆ

ವೆಂದಾರಾಧಿಸಿ ಭಿಕ್ಷೆಯನ್ನು ನೀಡಿದಲ್ಲಿ ಕರ್ಮವು ಅನಂತವಾಗುವದೆಂದು ತಿಳಿಸಿದರು. ಮಂಡನನು ಭಗವತ್ಪಾದರ ಪಾದಪ್ರಕ್ಷಾಲನ ಮಾಡಿ ಪೀಠದಲ್ಲಿ ಕುಳ್ಳಿರಿಸಿದನು.

## ಮಂಡನನ ಸತ್ಕಾರ:

ಶಾಸ್ತ್ರಜ್ಞನಾದ ಮಂಡನನಿಗೆ ಈ ಪದ್ಯವು ನೆನಪಾಯಿತು. ''ಯತಿಹಸ್ತೇ ಜಲಂ ದದ್ಯಾದನ್ನಂ ದದ್ಯಾತ್ ಪುನರ್ಜಲಮ್। ತದನ್ನಂ ಮೇರುಣಾ ತುಲ್ಯಂ ತಜ್ಜಲಂ ಸಾಗರೋಪಮಮ್'' (ಯತಿಯ ಕೈಗೆ ನೀರನ್ನು ಕೊಡಬೇಕು. ಅನಂತರ ಅನ್ನವನ್ನಿಡಬೇಕು. ಮತ್ತೆ ನೀರನ್ನು ಕೊಡಬೇಕು. ಆ ಅನ್ನವು ಮೇರುಪರ್ವತಕ್ಕೂ ನೀರು ಸಮುದ್ರಕ್ಕೂ ಸಮಾನವಾಗುವದು)- ಎಂದಂತೆ ಸೂಕ್ತರೀತಿಯಿಂದ ಸಂನ್ಯಾಸಿಗಳ ಸತ್ಕಾರಕ್ಕಾಗಲಿ, ಶ್ರಾದ್ಧಕರ್ಮಕ್ಕಾಗಲಿ ಲೋಪವು ಬರದಂತೆ ವಿಧ್ಯುಕ್ತವಾಗಿಯೇ ಎರಡನ್ನೂ ನೆರವೇರಿಸಿದನು. ಅಭ್ಯಾಗತನಾಗಿ ಬಂದ ಸಂನ್ಯಾಸಿಯು ಶ್ರಾದ್ಧಸಂರಕ್ಷಕನಾದ ಶ್ರೀಮಹಾವಿಷ್ಣುವೆಂದೇ ಅರಿತು ಪೂಜಿಸಿದನು. ಗದಾಧರನೆಂಬ ಹೆಸರಿನ ಶ್ರೀಮಹಾವಿಷ್ಣುವಿಗೆ ಶ್ರಾದ್ಧಕರ್ಮವನ್ನು ಅರ್ಪಿಸುತ್ತಾರೆ. ನಾರಾಯಣ- ಎಂಬ ನಾಮವನ್ನು ಪೈತೃಕಕರ್ಮದಲ್ಲಿ ಮತ್ತೆ ಮತ್ತೆ ಬಳಸುತ್ತಾರೆ. ಬ್ರಹ್ಮಾರ್ಪಣವನ್ನು ಬಿಡುವದು, ಅಚ್ಯುತಾನಂತಗೋವಿಂದ- ಎಂದು ನಾಮೋಚ್ಚಾರಣೆ ಮಾಡುವದು-'ಮುಂತಾದದ್ದೆಲ್ಲವೂ ಕರ್ಮವು ಅಕ್ಷಯವಾಗಲೆಂದೇ ವಿಧಿಸಲ್ಪಟ್ಟಿವೆ. ಹೀಗಿರುವಲ್ಲಿ ಆಚಾರ್ಯರಂಥ ಪರಮಹಂಸಪರಿವ್ರಾಜಕರು ದೊರೆತದ್ದು ಮಂಡನಪಂಡಿತನ ಪಿತೃಕರ್ಮಕ್ಕೆ ಸಾದ್ಗುಣ್ಯವನ್ನೇ ಉಂಟುಮಾಡಿತು.

## ವಾದದ ಪ್ರಸ್ತಾಪ :

ಕರ್ಮವೆಲ್ಲವೂ ಪೂರೈಸಿದ ಅನಂತರ ಆ ದಿನ ದೀಕ್ಷಾಬದ್ಧನಾಗಿದ್ದ ಮಂಡನನು ಮಾರನೆಯ ದಿನ ವಾದವನ್ನು ಮಾಡಲು ಒಪ್ಪಿಕೊಂಡನು. ಆಚಾರ್ಯರು ಅಲ್ಲಿಯೇ ತಂಗಬೇಕಾಯಿತು. ಮಾರನೆಯ ದಿನ ಪ್ರಾತಃಕಾಲದ ಸ್ನಾನಾಹ್ನಿಕಗಳ ಅನಂತರ ಇಬ್ಬರೂ ಸೇರಿದರು. ಆ ಸಮಯಕ್ಕೆ ವ್ಯಾಸಜೈಮಿನಿಗಳೂ ಇದ್ದರು. ಆಗ ಮಂಡನನು ''ಯತಿವರ್ಯರೆ, ನಾವಿಬ್ಬರೂ ವಾದಮಾಡುವಾಗ ಜಯ- ಪರಾಜಯಗಳನ್ನು ಗೊತ್ತುಪಡಿಸಲು ಮಧ್ಯಸ್ಥರು ಬೇಕಾಗುವದು. ಹಾಗಿಲ್ಲವಾದರೆ ವಾದವು ವ್ಯರ್ಥ ವಾಗುವದು. ಆದ್ದರಿಂದ ಈ ವ್ಯಾಸಜೈಮಿನಿಗಳನ್ನೇ ಮಧ್ಯಸ್ಥರನ್ನಾಗಿ ಮಾಡಿ ಕೊಳ್ಳೋಣವೆ?'' ಎಂದನು. ಆಚಾರ್ಯರೇನೋ ಒಪ್ಪಿದರು. ಆದರೆ ವ್ಯಾಸಜೈಮಿನಿಗಳಿಗೆ ಮಂಡನಪಂಡಿತನ ಪತ್ನಿಯಾದ ಉಭಯಭಾರತಿಯು ಸರಸ್ವತಿಯ ಅವತಾರವೆಂದೂ ಆಕೆಯು ಸಕಲ ವಿದ್ಯಾಪ್ರವೀಣಳೆಂದೂ ಅವಳೇ ಮಧ್ಯಸ್ಥಳಾಗಿರುವದು ಸೂಕ್ತವೆಂದೂ ತಿಳಿದಿತ್ತು. ಆದ್ದರಿಂದ ಅವರಿಬ್ಬರೂ ಉಭಯಭಾರತಿಯನ್ನೇ ಮಧ್ಯಸ್ಥಳನ್ನಾಗಿ ಸೂಚಿಸಿದರು. ಮಂಡನಮಿಶ್ರನಿಗೂ

ಒಪ್ಪಾಯಿತು. ಆಚಾರ್ಯರು ಸಹ ಈ ತೀರ್ಮಾನವನ್ನಂಗೀಕರಿಸಿ ವಾದಕ್ಕೆ ಸಿದ್ಧರಾದರು.

ಆದರೆ ಉಭಯಭಾರತಿಗೆ ತಾನು ಮಧ್ಯಸ್ಥಳಾಗಿರುವದು ಇಷ್ಟವಾಗಿದ್ದರೂ ಆಹ್ನಿಕಕಾಲವನ್ನು ಹೊರತುಪಡಿಸಿ ಉಳಿದ ಎಲ್ಲಾ ಕಾಲದಲ್ಲಿಯೂ ವಾದವು ನಡೆಯುತ್ತಿರಲಾಗಿ ತಾನು ಕುಳಿತೇ ಇದ್ದರೆ ಯಜಮಾನರ ಭೋಜನಕ್ಕೂ ಯತಿಯ ಭಿಕ್ಷೆಗೂ ಅಡಿಗೆಯನ್ನು ಮಾಡುವವರಾರು? ಗೃಹಕರ್ಮಗಳಿಗೆ ಅವಕಾಶವು ಹೇಗೆ? ಎಂಬ ಆಲೋಚನೆಯುಂಟಾಯಿತು. ಅಲ್ಲದೆ ವಾದವು ದಿನಗಟ್ಟಲೆ ನಡೆಯುವ ಸಂಭವವೇ ಹೆಚ್ಚಾಗಿದೆಯೆಂದೂ ಅವಳಿಗೆ ತೋರಿತು. ಆಗ ಅವಳು ಇಬ್ಬರೂ ವಾದಕ್ಕೆ ಆರಂಭಿಸುವದನ್ನು ಕಾದಿದ್ದು ಸ್ವಲ್ಪ ಕಾಲ ಮಧ್ಯಸ್ಥಳಾಗಿ ಕುಳಿತು ಅನಂತರ ಎರಡು ಹೂಮಾಲೆಗಳನ್ನು ತರಿಸಿ ಇಬ್ಬರಿಗೂ ಒಂದೊಂದನ್ನು ಸಮರ್ಪಿಸಿ ಧರಿಸಿಕೊಳ್ಳುವಂತೆ ವಿಜ್ಞಾಪಿಸಿಕೊಂಡು 'ನಿಮ್ಮಲ್ಲಿ ಯಾರ ಹೂಮಾಲೆಯು ಬಾಡಿಹೋಗುವದೋ ಅವರು ಸೋತಂತೆ'- ಎಂದು ತಿಳಿಸಿ ತನ್ನ ಮನೆಗೆಲಸಗಳಿಗೆ ಹಿಂದಿರುಗಿಬಿಟ್ಟಳು.

ಈ ನಡುವೆ ಮಂಡನನು ಆಚಾರ್ಯರ ಮುಂದೆ ಮತ್ತೊಂದು ಸಮಸ್ಯೆಯನ್ನು ತಂದೊಡ್ಡಿದನು. ಏನೆಂದರೆ : ವಾದದಲ್ಲಿ ಏನೂ ಪಣವಿಲ್ಲವಾದರೆ ಅದು ಶೋಭಿಸುವದಿಲ್ಲವೆಂದೂ ಸೋತವರು ಗೆದ್ದವರೊಡನೆ ಹೇಗೆ ವರ್ತಿಸಬೇಕೆಂಬುದೂ ಈಗಲೇ ನಿಶ್ಚಯವಾಗಿಬಿಡಬೇಕೆಂದೂ ಕೇಳಿದನು. ಮಂಡನನೇನೋ ಗೃಹ- ಧನಾದಿ ಸಂಪತ್ತುಳ್ಳವನು. ಪಣವನ್ನೂ ಕಟ್ಟಬಲ್ಲನು. ಆದರೆ ಸರ್ವಸಂಗಪರಿತ್ಯಾಗಿಗಳಾದ ಆಚಾರ್ಯರೇನು ಮಾಡಬೇಕು? ಕೂಡಲೆ ಅವರು ''ಅಯ್ಯ ವಿದ್ವಾಂಸನೆ, ನೀನು ಗೃಹಸ್ಥನು. ನಾನು ಸಂನ್ಯಾಸಿ. ಆದ್ದರಿಂದ ಮತ್ತೇನೂ ಧನವು ನನ್ನಲ್ಲಿಲ್ಲ. ಸಂನ್ಯಾಸಾಶ್ರಮವೇ ನನ್ನ ಸರ್ವಸ್ವವಾಗಿದೆ. ನಾನು ವಾದದಲ್ಲಿ ಸೋತರೆ ಈ ಸಂನ್ಯಾಸವನ್ನೇ ಬಿಟ್ಟುಕೊಟ್ಟು ನಿನಗೆ ಶಿಷ್ಯನಾಗುವೆನು. ಹಾಗೆಯೇ ನೀನು ಸೋತರೆ ನಿನ್ನ ಗೃಹಸ್ಥಧರ್ಮವನ್ನು ಬಿಟ್ಟು ಸಂನ್ಯಾಸಿಯಾಗಿ ನನಗೆ ಶಿಷ್ಯನಾಗಬೇಕು. ಒಪ್ಪಿಗೆಯೊ?'' ಎಂದು ಕೇಳಿದರು. ಮಂಡನನಿಗೆ ಆಶ್ಚರ್ಯವೂ ಭಯವೂ ಉಂಟಾಯಿತು. ''ಆಹಾ ! ಈ ಸಂನ್ಯಾಸಿಯ ಆತ್ಮ ವಿಶ್ವಾಸವು ಎಷ್ಟು ಮಟ್ಟಿನದಿರಬೇಕು? ಗೃಹಸ್ಥನಾದ ನಾನು ಸೋತು ಸಂನ್ಯಾಸಿಯಾದರೆ ತುರೀಯಾಶ್ರಮಿ- ಎಂದು ಜನರು ಇನ್ನೂ ಹೆಚ್ಚಾಗಿ ನನ್ನನ್ನು ಗೌರವಿಸುವರು. ಆದರೆ ಸಂನ್ಯಾಸಿಯೇನಾದರೂ ಸೋತರೆ, ಅವನು ಹಿಂದಿನ ಆಶ್ರಮಕ್ಕೆ ಬಂದರೆ ಪತಿತನೆನಿಸಿ ನಿಂದೆಗೆ ಗುರಿಯಾಗವನು. ಏನಿದು? ಆದರೂ ಈ ಪಣದಲ್ಲಿ ಲಾಭವು ಎಂದಿಗೂ ನನ್ನದೇ ಅಲ್ಲವೆ ? ನೋಡೋಣ'' ಎಂದುಕೊಂಡು ಆಚಾರ್ಯರನ್ನು ಕುರಿತು 'ಯತಿಗಳೆ, ನೀವು ಹೇಳಿದ ಪಣವು ನನಗೆ ಒಪ್ಪಿಗೆ' ಎಂದೇಬಿಟ್ಟನು. ಹೀಗೆ ಸಕಲವಿದ್ಯಾಧಿದೇವತೆಯಾದ ಸರಸ್ವತಿಯನ್ನೇ ನ್ಯಾಯಾಧೀಶಳನ್ನಾಗಿ ಒಪ್ಪಿ ಸಂನ್ಯಾಸವನ್ನೇ ಪಣವಾಗಿಟ್ಟು ವಾದಮಾಡಲಾರಂಭಿಸಿದ ಆಚಾರ್ಯರ ಎದೆಗಾರಿಕೆಯನ್ನು ಸಾಮಾನ್ಯರು ಊಹಿಸಲೂ ಸಾಧ್ಯವಾಗಲಾರದು.

## ವಾದದಲ್ಲಿ ವಿಷಯಮಂಡನೆ :

ಮಂಡನಪಂಡಿತನು ವಾದದಲ್ಲಿ ತನ್ನ ಸಿದ್ಧಾಂತವನ್ನು ಈ ರೀತಿಯಾಗಿ ಮುಂದಿಟ್ಟನು. (೧) ವೇದಾಂತವಾಕ್ಯಗಳು ಬ್ರಹ್ಮವಸ್ತುವಿನ ವಿಷಯದಲ್ಲಿ ಪ್ರಮಾಣಗಳಲ್ಲ; ಏಕೆಂದರೆ ನಿರ್ವಿಶೇಷಬ್ರಹ್ಮದಲ್ಲಿ ಶಬ್ದವ್ಯಾಪಾರವಿಲ್ಲ. (೨) ವೇದದ ಪೂರ್ವಭಾಗವಾದ ಕರ್ಮಕಾಂಡವೇ ಪ್ರಮಾಣವು; ಏಕೆಂದರೆ ಅದು ಶಾಸನಮಾಡುತ್ತದೆ. ಶಾಸ್ತ್ರವು ಏನನ್ನಾದರೂ ಮಾಡು ಎಂದು ಹೇಳಲಿಲ್ಲವಾದರೆ ಅಪ್ರಮಾಣವಾಗುವದು. (೩) ಕರ್ಮಗಳಿಂದಲೇ ಮುಕ್ತಿಯು ಪ್ರಾಪ್ತಿಯಾಗುವದು. (೪) ಬದುಕಿರುವವರೆಗೂ ಕರ್ಮಗಳನ್ನು ಮಾಡುತ್ತಿರಬೇಕು. ಕರ್ಮಸಂನ್ಯಾಸ ಮಾಡಬಾರದು. (೫) ಶಾಸ್ತ್ರದಲ್ಲಿ ಸಂನ್ಯಾಸವನ್ನು ಹೇಳಿದ್ದರೆ ಅದು ಕರ್ಮವನ್ನು ಮಾಡಲು ಅಶಕ್ತರಾದವರಿಗೆ ಹೇಳಿದ್ದು. (೬) ಉಪನಿಷತ್ತುಗಳಿಗೆ ಸ್ವತಂತ್ರವಾಗಿ ತಾತ್ಪರ್ಯವಿಲ್ಲ; ಅವು ಜಪಾರ್ಥವಾಗಿ ಹೇಳಲ್ಪಟ್ಟಿವೆ ಹೀಗೆ ಮಿಮಾಂಸಾಶಾಸ್ತ್ರಜ್ಞನಾದ ಪಂಡಿತನು ಇನ್ನೂ ಕೆಲವು ಶಾಸ್ತ್ರೀಯವಿಚಾರಗಳೊಡನೆ ತನ್ನ ವಾದವನ್ನು ಮಂಡಿಸಿದನು.

ಆಚಾರ್ಯರು ಮಂಡಿಸಿದ ವಾದವು ಹೀಗಿತ್ತು : (೧) ಬ್ರಹ್ಮವೊಂದೇ ಪರಮಾರ್ಥಸತ್ಯವು. ಅಜ್ಞಾನಿಗಳ ದೃಷ್ಟಿಯಿಂದ ಅದೇ ಜಗತ್ತಾಗಿ ತೋರುತ್ತಿದೆ. ಹಗ್ಗವನ್ನು ಹಾವೆಂದು ತಪ್ಪಾಗಿ ತಿಳಿಯುವವರಂತೆಯೇ ಇದು. (೨) ಜ್ಞಾನದಿಂದ ಮಾತ್ರವೇ ಅಜ್ಞಾನವು ಹೋಗುತ್ತದೆ. ಆಗ ಪ್ರಪಂಚವೂ ಇಲ್ಲವಾಗಿ ತಾನೊಂದೇ ಸತ್ಯವೆಂಬ ತಿಳಿವಳಿಕೆಯುಂಟಾಗುವದು; ಇದೇ ಮುಕ್ತಿಯು. (೩) ಕರ್ಮೋಪಾಸನೆಗಳು ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವದು ನಿಜ. ಆದರೆ ಅವು ಜ್ಞಾನವುಂಟಾಗುವ ಮುಂಚೆ ಮಾಡತಕ್ಕವುಗಳು. (೪) ಜ್ಞಾನಕ್ಕೆ ಸಂನ್ಯಾಸವೇ ಭೂಷಣವು; ಸರ್ವಕರ್ಮಸಂನ್ಯಾಸವು ಶಾಸ್ತ್ರಸಂಮತವೇ. (೫) ವೇದವು ಕರ್ಮವನ್ನು ಹೇಳುವಂತೆ ಸ್ವತಂತ್ರವಾಗಿಯೇ ಬ್ರಹ್ಮತತ್ತ್ವವನ್ನೂ ಹೇಳುತ್ತದೆ. ವಸ್ತುಬೋಧಕವಾಕ್ಯವೂ ವಿಧಿವಾಕ್ಯದಂತೆಯೇ ಪ್ರಮಾಣವು. (೬) ಜ್ಞಾನವು ಸ್ವತಂತ್ರವಾಗಿ ಯಾವದರ ಅಪೇಕ್ಷೆಯೂ ಇಲ್ಲದೆ ತಾನೇ ಮುಕ್ತಿಯನ್ನು ಕೊಡುತ್ತದೆ- ಹೀಗೆಂಬುದು ವೇದಾಂತವಿಜ್ಞಾನಸುನಿಶ್ಚಿತಾರ್ಥರಾದ ಆಚಾರ್ಯರ ವಾದವಾಗಿತ್ತು.

## ಉಭಯವಾದಗಳ ಚರ್ಚೆ : ವಿಮರ್ಶೆ :

**ಮಂಡನಪಂಡಿತ** : ಯತಿಗಳೆ, ವೇದಾಂತವಾಕ್ಯಗಳು ನಿರ್ವಿಶೇಷ ವಸ್ತುವಿನಲ್ಲಿ ಪ್ರಮಾಣವಲ್ಲ ಎಂಬುದಕ್ಕೆ ತಮ್ಮ ಉತ್ತರವೇನು?

**ಆಚಾರ್ಯರು :** ವಿದ್ವಾಂಸರೆ, ಅದು ಸರಿಯಲ್ಲ. ವಾಕ್ಯವು ಬೋಧೆಯನ್ನುಂಟುಮಾಡಿದರೆ ಪ್ರಮಾಣವೇ ಆಗುವದು. ಕರ್ಮಕಾಂಡ ವಾಕ್ಯಗಳಂತೆಯೇ ಉಪನಿಷದ್ವಾಕ್ಯಗಳಿಂದಲೂ ತಿಳಿವಳಿಕೆಯುಂಟಾಗುತ್ತಿದೆಯಲ್ಲ?

**ಮಂಡನ :** ಅದೇನೋ ಸರಿ ; ಆದರೆ ನಿರ್ವಿಶೇಷವಸ್ತುವಿನ ವಿಷಯಕ್ಕೆ ಬೋಧೆಯಾದರೂ ಏನಿದ್ದೀತು? ಶಬ್ದಕ್ಕೆ ವಸ್ತುವಿನೊಡನೆ ಸಂಬಂಧವಿರಬೇಕಲ್ಲವೆ? ವಸ್ತುವು ವಿಶೇಷಗಳಿಲ್ಲದ್ದಾದರೆ ಶಬ್ದವು ಏನನ್ನು ಬೋಧನೆ ಮಾಡೀತು?

**ಆಚಾರ್ಯರು :** ವಿಶೇಷಗಳಿವೆ- ಎಂದು ಬೋಧೆಮಾಡುವಂತೆಯೇ ವಿಶೇಷಗಳಿಲ್ಲ- ಎಂದೂ ಬೋಧನೆ ಮಾಡಬಹುದಲ್ಲವೆ? ಕರ್ಮ ಕಾಂಡದಲ್ಲಿಯೂ ಯೂಪ, ಆಹವನೀಯ- ಎಂಬ ವಸ್ತುಗಳನ್ನು ಬೋಧಿಸುವ ವಾಕ್ಯಗಳಂತೆಯೇ 'ಬ್ರಾಹ್ಮಣೋ ನ ಹಂತವ್ಯಃ' (ಬ್ರಾಹ್ಮಣನನ್ನು ಕೊಲ್ಲಬಾರದು) ಎಂಬ ನಿಷೇಧವಾಕ್ಯವೂ ಪ್ರಮಾಣವೇ ಅಲ್ಲವೆ?

**ಮಂಡನ :** ಯೂಪಾಹವನೀಯಾದಿ ವಸ್ತುಗಳಿಗೆ ಕರ್ಮಾಂಗವಾದ ವಿನಿಯೋಗವಿದೆ; ನಿರ್ವಿಶೇಷಬ್ರಹ್ಮವನ್ನು ತಿಳಿದು ಮಾಡುವದಾದರೂ ಏನಿದೆ?

**ಆಚಾರ್ಯರು :** ವಾಕ್ಯಜ್ಞಾನವಾದಮೇಲೆ ಮಾಡತಕ್ಕದ್ದಿದ್ದರೆ ಮಾಡಬಹುದು. ಇಲ್ಲವಾದರೆ ತಿಳಿವಳಿಕೆಯಷ್ಟರಿಂದಲೇ ಸುಮ್ಮನಾಗಬಹುದು. ಇದರಿಂದ ಅಪ್ರಾಮಾಣ್ಯವಾಗಲಿ ಅಬೋಧಕತ್ವವಾಗಲಿ ವಾಕ್ಯಕ್ಕೆ ಏಕೆ ಉಂಟಾಗಬೇಕು? 'ಮೇರುವೆಂಬ ಪರ್ವತವಿದೆ' ಎಂಬ ವಾಕ್ಯವನ್ನು ಹೇಳಿದರೆ ಮಾಡತಕ್ಕದ್ದೇನೂ ಇಲ್ಲವಾದ್ದರಿಂದ ಆ ವಾಕ್ಯವು ಅಬೋಧಕವೆನ್ನಬಹುದೆ?

**ಮಂಡನ :** ವೇದವು ಏನನ್ನಾದರೂ ಮಾಡು ಎಂದು ಹೇಳುವದರಿಂದಲೇ ಪ್ರಾಮಾಣ್ಯವನ್ನು ಹೊಂದಿದೆ. ವೇದವು ಹೀಗೆ ಕ್ರಿಯಾಪರವಾಗಿರುವದರಿಂದ ಕ್ರಿಯೆಯನ್ನು ಹೇಳದ ವೇದಭಾಗವಿದ್ದರೆ ಅದು ಅರ್ಥವಾದವೆಂದೊ, ಅಥವಾ ನೆಲದಲ್ಲಿ ಬಂಜರುಭೂಮಿಯಿದ್ದಂತೆ ಅನರ್ಥಕವೆಂದೊ- ತಿಳಿಯಬೇಕು. ಜೈಮಿನಿಗಳೇ ಹೀಗೆಂದಿರುತ್ತಾರೆ. ಉಪನಿಷತ್ತುಗಳು ಕ್ರಿಯಾವಿಧಿಪರವಾಗಿರವದಿಲ್ಲ. ಆದ್ದರಿಂದ ಅಪ್ರಮಾಣವೆನ್ನಬೇಕಲ್ಲವೆ?

**ಆಚಾರ್ಯರು :** ಕೂಡದು. ಉಪನಿಷತ್ತುಗಳೂ ವೇದದ ಕಡೆಯ ಭಾಗಗಳೇ ಆಗಿರವದರಿಂದ ವೇದದಲ್ಲಿಯೇ ಕೆಲವು ಭಾಗವು ಪ್ರಮಾಣ, ಕೆಲವು ಅಪ್ರಮಾಣ ಎಂದರೆ ಅರ್ಧಜರತೀಯನ್ಯಾಯವಾಗುವದು. ಒಂದು ಕೋಳಿಯನ್ನು ಕೊಯ್ದು ಅರ್ಧಭಾಗವನ್ನು ಮೊಟ್ಟೆಯಿಡುವದಕ್ಕೂ ಅರ್ಧಭಾಗವನ್ನು ಅಡಿಗೆಗೂ

ಉಪಯೋಗಿಸಬಹುದೆಂದು ಹೇಳಿದರೆ ಹೇಗೆ ದಡ್ಡತನವಾದೀತೋ ಇದೂ ಹಾಗೆಯೇ ಆದೀತು. ಅದ್ದರಿಂದ ವೇದವು ಸಂಪೂರ್ಣವಾಗಿ ಪ್ರಮಾಣವೆಂದೇ ಒಪ್ಪಬೇಕು. ಆಗ ಉಪನಿಷತ್ತುಗಳೂ ತಮ್ಮ ಕ್ಷೇತ್ರದಲ್ಲಿ ಪ್ರಮಾಣವೇ ಆಗಿಬಿಡುವವು. ಇನ್ನು ವೇದವೆಲ್ಲವೂ ಕ್ರಿಯೆಯನ್ನೇ ಹೇಳಬೇಕೆಂದೇನೂ ಇಲ್ಲ. ಜೈಮಿನಿಗಳ ಹೇಳಿಕೆಯು ಕರ್ಮಕಾಂಡದ ವಿಷಯಕ್ಕೆ ಮಾತ್ರ ಅನ್ವಯಿಸತಕ್ಕದ್ದಾಗಿದೆ. ಇಲ್ಲವಾಗಿದ್ದರೆ ಪ್ರತ್ಯೇಕವಾಗಿ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಶಾಸ್ತ್ರಾರಂಭಮಾಡ ಬೇಕಾಗಿರಲಿಲ್ಲ.

**ಮಂಡನ :** ಬದುಕಿರುವವರೆಗೂ ಕರ್ಮಗಳನ್ನೇ ಮಾಡಿಕೊಂಡಿರಬೇಕೆಂದು ಶಾಸ್ತ್ರವೇ ತಿಳಿಸಿದೆ. ಆದ್ದರಿಂದ ಕರ್ಮದಿಂದಲೇ ಮುಕ್ತಿಯೆಂದಾಗುವದಿಲ್ಲವೆ?

**ಆಚಾರ್ಯರು :** ಹಾಗಿಲ್ಲ. ಕರ್ಮಗಳಿಗೆ ಪ್ರತಿಯೊಂದಕ್ಕೂ ಅದಕ್ಕ ತಕ್ಕ ಫಲವುಂಟು. ಆಯಾ ಕರ್ಮಗಳು ಆಯಾ ಫಲವನ್ನುಂಟುಮಾಡುವದಾದರೆ ಮುಕ್ತಿಗಾಗಿ- ಎಂದು ಹೇಳಲ್ಪಟ್ಟಿರುವ ವಿಶಿಷ್ಟಕರ್ಮವಾದರೂ ನಿಮ್ಮ ಕರ್ಮಕಾಂಡದಲ್ಲಿ ಎಲ್ಲಿದೆ ?

**ಮಂಡನ :** ನಿಜ. ಆದರೆ ಕಾಮ್ಯಪ್ರತಿಷಿದ್ಧಕರ್ಮಗಳನ್ನು ಆರಂಭ ಮಾಡದೆ, ಈಗ ಫಲವನ್ನು ಕೊಡುತ್ತಿರುವದನ್ನು ಅನುಭವಿಸಿ ಪೂರೈಸುವದರಿಂದ, ಇನ್ನು ನಿತ್ಯಕರ್ಮಗಳನ್ನು ಮಾಡುವದರಿಂದ ಪ್ರತ್ಯವಾಯದೋಷವೂ ಬರಲಿಲ್ಲವಾಗಿ- ಮುಕ್ತಿಯು ಏನೂ ಪ್ರಯತ್ನವಿಲ್ಲದೆ ಆಗಲೇಬೇಕಲ್ಲವೆ? ಆಗ ಜ್ಞಾನವೇಕೆ?

**ಆಚಾರ್ಯರು :** ಹೀಗೆ ಹೇಳುವದೇನೋ ರಮಣೀಯವಾಗಿದೆ. ಆದರೆ ಅನೇಕ ವಿಧವಾದ ಕರ್ಮಗಳು ಪರಸ್ಪರವಿರುದ್ಧಫಲವುಳ್ಳವುಗಳು, ಹಾಗೂ ಹಿಂದಿನ ಜನ್ಮಗಳಲ್ಲಿ ಮಾಡಿರಬಹುದಾದವುಗಳು ಎಷ್ಟೋ ಇರುವವು. ಅವೆಲ್ಲವೂ ಫಲವನ್ನು ನೀಡಲು ಕಾದುಕೊಂಡಿರುವವು. ಅಂಥವುಗಳನ್ನೆಲ್ಲ ಒಂದೇ ಜನ್ಮದಲ್ಲಿ ಕಳೆದುಕೊಳ್ಳಲಾದೀತೆ? ಒಂದೇ ಜನ್ಮದಲ್ಲಿ ಅಶ್ವಮೇಧವೂ ಬ್ರಹ್ಮಹತ್ಯೆಯೂ ಒಟ್ಟಿಗೆ ಫಲವನ್ನುಂಟುಮಾಡಲಿ- ಎನ್ನಲಾದೀತೆ? ಇಷ್ಟರಮೇಲೂ ಕರ್ಮಶೇಷಗಳು ಉಳಿಯುತ್ತವೆಯಲ್ಲವೆ? ಅವುಗಳ ಬಾಕಿಯನ್ನು ತೀರಿಸುವದು ಯಾವಾಗ?

**ಮಂಡನ :** ಒಳ್ಳೆಯ ಕರ್ಮಗಳನ್ನೇ ಮತ್ತೆ ಮತ್ತೆ ಮಾಡುತ್ತಲೇ ಇದ್ದು ಬಿಟ್ಟರೆ ಮೇಲಿಂದಮೇಲೆ ಶುಭಫಲಗಳೇ ಬರುವದರಿಂದ ಆನಂದರೂಪವಾದ ಸ್ವರ್ಗವು ಸಿಗಲಿದೆ. ಅದೇ ಮೋಕ್ಷವೆಂದೇಕಾಬಾರದು?

**ಆಚಾರ್ಯರು :** ಹಾಗಾಗಲಾರದು. ಮೇಲಿಂದ ಮೇಲೆ ಕರ್ಮಗಳನ್ನು

ಮಾಡಿಕೊಂಡೇ ಇರುವದೆಂಬುದು ದುಃಖಕರವು. ಯಾವನೊಬ್ಬನೂ ಯಾವಾಗಲೂ ವಿಶ್ರಾಂತಿಯೇ ಇಲ್ಲದೆ ಕರ್ಮವನ್ನು ಮಾಡುತ್ತಾ ಇರಲಾಗುವದಿಲ್ಲ.

**ಮಂಡನ :** ಹಾಗಾದರೆ ಕರ್ಮಗಳನ್ನು ಮಾಡುತ್ತಲೇ ಇರು- ಎಂದು ಉಪನಿಷತ್ತಿನಲ್ಲೇ ಹೇಳಿದೆಯಲ್ಲ?

**ಆಚಾರ್ಯರು :** ಹೇಳಿರುವದು ನಿಜ. ಅದರ ಅರ್ಥವೇನೆಂದರೆ: ಯಾವನು ತಾನು ಮಾಡುವವನು, ಫಲವನ್ನು ಪಡೆಯುವವನು- ಎಂದುಕೊಂಡಿರುವನೋ ಅಂಥವನಿಗೆ ಆ ಬುದ್ಧಿಯೇ ಇದ್ದುಕೊಂಡಿರುವವರೆಗೂ ಕರ್ಮವೇ ಗತಿ- ಎಂದು ಅದರ ಅರ್ಥ. ಆದರೆ ಯಾವನಿಗೆ ಕರ್ಮಗಳನ್ನು ಮಾಡಿ ಮಾಡಿ ಬೇಸತ್ತು ಕರ್ಮಬಂಧದಿಂದ ಬಿಡಿಸಿಕೊಳ್ಳಬೇಕೆನಿಸಿರುವದೋ ಯಾವ ಕರ್ಮಫಲವೂ ಬೇಡವೆನಿಸಿರುವದೋ ಅಂಥವನು ಕರ್ಮಸಂನ್ಯಾಸಮಾಡಿ ಆತ್ಮ ಜ್ಞಾನಕ್ಕೆ ಸಿದ್ಧನಾಗಬೇಕಾಗುವದು. ಹಾಗೆಂದೂ ಅಲ್ಲಿಯೇ ಹೇಳಿದೆಯಲ್ಲವೆ?

**ಮಂಡನ :** ಕರ್ಮಗಳನ್ನು ಬಿಟ್ಟರೆ ಪಾತಿತ್ಯವು ಬರುವದಿಲ್ಲವೆ?

**ಆಚಾರ್ಯರು :** ಕರ್ಮಾಧಿಕಾರಿಯಾಗಿದ್ದು ಸೋಮಾರಿತನದಿಂದಲೋ ತಿರಸ್ಕಾರಬುದ್ಧಿಯಿಂದಲೋ ಬಿಟ್ಟರೆ ಪಾತಿತ್ಯವೇ ಸರಿ. ಆದರೆ ಕರ್ಮಗಳಿಂದಾಗಬೇಕಾದ ಪ್ರಯೋಜನವನ್ನು ಪಡೆದುಕೊಂಡು ಅನಂತರ ಬಿಡುವದೇ ಸರಿ ಎನಿಸುವದು. ಏಕೆಂದರೆ ಅಂಥವನಿಗೆ ಆತ್ಮಶ್ರವಣಾದಿಗಳಿಗೆ ಸೌಕರ್ಯವಾಗುವದಲ್ಲದೆ ಮಾನಸಿಕವಾಗಿ ಧ್ಯಾನಾದಿಗಳನ್ನು ಮಾಡುವದಕ್ಕೂ ಅವಕಾಶವಾಗುತ್ತದೆ. ಕರ್ಮವನ್ನು ವಿಧಿಸಿರುವ ಶ್ರುತಿಯೇ ಕರ್ಮಸಂನ್ಯಾಸವನ್ನೂ ವಿಧಿಸಿರುವದರಿಂದ ಎರಡೂ ಪ್ರಮಾಣವಾಗಿರಬೇಕಲ್ಲವೆ?

**ಮಂಡನ:** ಸಂನ್ಯಾಸವನ್ನು ಹೇಳುವ ಶ್ರುತಿಗಳು ಕರ್ಮಗಳನ್ನು ಮಾಡಲು ಅಶಕ್ತರಾದವರ ವಿಷಯದಲ್ಲಿ ತಾತ್ಪರ್ಯವನ್ನು ಹೊಂದಿವೆ- ಎಂದೇಕೆ ಹೇಳಬಾರದು?

**ಆಚಾರ್ಯರು :** ಶಾಸ್ತ್ರಾರ್ಥವು ಹಾಗಿಲ್ಲ. ಏಕೆಂದರೆ ಕರ್ಮಾನಧಿಕಾರಿಗಳಿಗೆ ಸಂನ್ಯಾಸವನ್ನು ಬೇರೆಯಾಗಿಯೇ ಹೇಳಿದೆ. ಅದಕ್ಕಿಂತಲೂ ಮೇಲ್ಮಟ್ಟದಲ್ಲಿ ಕಾಮಗಳಿಲ್ಲದವನು ಕರ್ಮಸಂನ್ಯಾಸವನ್ನು ಮಾಡಿ ಆತ್ಮಶ್ರವಣಮಾಡಬೇಕು, ಆತ್ಮನನ್ನು ಕಂಡುಕೊಳ್ಳಬೇಕು- ಎಂದಿರುವದನ್ನು ಕಡೆಗಣಿಸಲಾಗುವದಿಲ್ಲ.

**ಮಂಡನ :** ಕರ್ಮಕಾಂಡವನ್ನು ಹೇಳುವ ಶ್ರುತಿಭಾಗವೇ ಹೆಚ್ಚಾಗಿರುವದರಿಂದ ಶ್ರುತಿಗೆ ಕರ್ಮದಲ್ಲೇ ತಾತ್ಪರ್ಯವೆಂದೇಕಾಗಬಾರದು?

**ಆಚಾರ್ಯರು :** ಹಾಗಿಲ್ಲ. ಗ್ರಂಥಭಾಗದ ದೃಷ್ಟಿಯಿಂದ ಕರ್ಮಕಾಂಡವು ಹಿಗ್ಗಿರುವದು ನಿಜ. ಇದಕ್ಕೆ ಕಾರಣವೇನೆಂದರೆ : ಜನರ ಆಶೆಗಳು ಬಹಳವಾಗಿರುವವು. ಎಲ್ಲರ ಎಲ್ಲಾ ಆಶೆಗಳನ್ನೂ ಪೂರೈಸಿಕೊಳ್ಳಲು ಅಷ್ಟು ಹೆಚ್ಚಿನ ಉಪಾಯಗಳನ್ನು ಹೇಳಬೇಕಾಗಿ ಬಂದಾಗ ಗ್ರಂಥಭಾಗವು ಹೆಚ್ಚಾಗಬೇಕಾದದ್ದೇ ಸರಿ. ಇಷ್ಟು ಮಾತ್ರದಿಂದ ಶ್ರುತಿಗೆ ಕರ್ಮದಲ್ಲೇ ತಾತ್ಪರ್ಯವೆಂದಾಗಲಾರದು.

**ಮಂಡನ :** ಉಪನಿಷತ್ತುಗಳಲ್ಲಿ ವಿಧಿವಾಕ್ಯಗಳಿಲ್ಲವಾದ್ದರಿಂದ 'ಹುಂ' 'ಫಟ್' ಮುಂತಾದವುಗಳಂತೆ ಅನರ್ಥಕವೆಂದೇಕೆ ಹೇಳಬಾರದು ?

**ಆಚಾರ್ಯರು :** ವಿಧಿಸೂಚಕಶಬ್ದಗಳಿಲ್ಲವಾದರೂ ಅರ್ಥವೇನೂ ಇಲ್ಲವೆಂದು ಹೇಳಲಾಗುವದಿಲ್ಲ. ಏಕೆಂದರೆ ಆತ್ಮನು ಬ್ರಹ್ಮವೇ; ಇದೆಲ್ಲವೂ ಆತ್ಮನೇ-ಎಂದಾಗ ಆಯಾ ವಾಕ್ಯಗಳು ತಾತ್ಪರ್ಯವುಳ್ಳವಾಗಿಯೇ ಇರುತ್ತವೆ. ಹುಂಫಟ್-ಮುಂತಾದವುಗಳಂತೆ ಅರ್ಥರಹಿತವಾದುದೇನೂ ಉಪನಿಷತ್ತುಗಳಲ್ಲಿಲ್ಲ.

**ಮಂಡನ :** ಬ್ರಹ್ಮವೇ ಎಲ್ಲವೂ- ಎಂದು ತಿಳಿದಮೇಲಾದರೂ ಏನೂ ಪ್ರಯೋಜನವು ಕಂಡುಬರುವದಿಲ್ಲವಾಗಿ ಉಪನಿಷತ್ತುಗಳು ವ್ಯರ್ಥವಲ್ಲವೆ?

**ಆಚಾರ್ಯರು :** ಪ್ರಯೋಜನವಿಲ್ಲವೆಂದು ಹೇಗೆ ಹೇಳುವಿರಿ? 'ಬ್ರಹ್ಮಜ್ಞಾನಿಯು ಪರಮಪುರುಷಾರ್ಥವನ್ನು ಪಡೆಯುತ್ತಾನೆ; ಹೃದಯಗ್ರಂಥಿಯು ಭೇದವಾಗುತ್ತದೆ ; ಆತ್ಮಜ್ಞಾನಿಯು ಶೋಕವನ್ನು ದಾಟುತ್ತಾನೆ- ಇವೆಲ್ಲವೂ ಪ್ರಯೋಜನಗಳಲ್ಲವೆ?

**ಮಂಡನ :** ನಿಮ್ಮ ಮತದಲ್ಲಿ ಬ್ರಹ್ಮವೊಂದೇ ಸತ್ಯವೆಂದಿರುವದರಿಂದ ಕರ್ಮವನ್ನು ಮಾಡುವವನಾಗಲಿ, ಫಲವನ್ನು ಪಡೆಯುವವನಾಗಲಿ ಬೇರೆ ಇಲ್ಲವಾಗಿ ಕರ್ಮಕಾಂಡವೇ ವ್ಯರ್ಥವೆಂದಾಗುವದಲ್ಲ?

**ಆಚಾರ್ಯರು :** ಹಾಗೇನಿಲ್ಲ. ಬ್ರಹ್ಮ ಸತ್ಯಮ್- ಎಂಬ ತಿಳಿವಳಿಕೆ ಉಂಟಾದವನಿಗೆ ಕರ್ಮಕಾಂಡವು ವ್ಯರ್ಥವಾದರೂ ಆ ತಿಳಿವಳಿಕೆಯಿಲ್ಲದವರ ವಿಷಯದಲ್ಲಿ ಅದು ಸಾರ್ಥಕವೇ ಆಗಿದೆ. ಪುತ್ರಕಾಮೇಷ್ಟಿಕರ್ಮವು ಬಹಳಜನ ಪುತ್ರರಿರುವವನ ವಿಷಯಕ್ಕೆ ವ್ಯರ್ಥವಾದರೂ ಮಕ್ಕಳಿಲ್ಲದವರಿಗೆ ಉಪಯೋಗವಾಗುವಂತೆಯೇ ಇದು. ಅಲ್ಲದೆ ಬ್ರಹ್ಮವೊಂದೇ ಸತ್ಯವು ಎಂಬ ತಿಳಿವಳಿಕೆ ಉಂಟಾಗಬೇಕಾದರೆ ಅಂತಃಕರಣಶುದ್ಧಿಯೂ ಜ್ಞಾನಕ್ಕೆ ತಕ್ಕ ಅರ್ಹತೆಯೂ ಬೇಕಾಗುವದು. ಜ್ಞಾನವಾಗುವ ಮುಂಚೆ ಇಂಥ ಯೋಗ್ಯತಾಸಿದ್ಧಿಗಾಗಿ ಕರ್ಮಗಳನ್ನು ಮಾಡಬೇಕಾಗುವದು. ಆದ್ದರಿಂದ ಕರ್ಮಕಾಂಡವೇನೂ ವ್ಯರ್ಥವಾಗುವದಿಲ್ಲ.

**ಮಂಡನ** : ಹಾಗಾದರೆ ಕರ್ಮಗಳ ಅನುಷ್ಠಾನದಿಂದ ಜ್ಞಾನಕ್ಕೆ ಸಹಾಯವಾಗುವದಾದರೆ ಕರ್ಮಗಳನ್ನೇ ಮಾಡಬೇಕೆಂದಾಗುವದು. ಅವುಗಳನ್ನು ಬಿಟ್ಟು ಕೇವಲ ವೇದಾಂತಶ್ರವಣಮಾಡುವದು ತಪ್ಪೆಂದೇ ಆಯಿತಲ್ಲ?

**ಆಚಾರ್ಯರು** : ಹಾಗಲ್ಲ. ಕರ್ಮಗಳೆಂದರೆ ಅಗ್ನಿಹೋತ್ರಾದಿಗಳು ಮಾತ್ರವೇ ಎಂದೇಕೆ ಅರ್ಥಮಾಡಬೇಕು? ತಪಸ್ಸು, ಬ್ರಹ್ಮಚರ್ಯ, ನಿಜವನ್ನು ನುಡಿಯುವದೇ- ಮುಂತಾದ ಎಲ್ಲಾ ಆಶ್ರಮಿಗಳೂ ಅನುಷ್ಠಾನ ಮಾಡಬಹುದಾದಂಥ ಚಿತ್ತಶುದ್ಧಿಕಾರಕವಾದ ಕರ್ಮಗಳೂ ಇವೆಯಲ್ಲ? ಇವುಗಳು ವಿದ್ಯಾಪ್ರಾಪ್ತಿಗೆ ಅಗ್ನಿಹೋತ್ರಾದಿಗಳಿಗಿಂತ ಹೆಚ್ಚು ಸಾಧಕವೇ ಆಗಿವೆಯಲ್ಲವೆ? ಅಲ್ಲದೆ ಹಿಂದಿನ ಜನ್ಮಗಳಲ್ಲಿಯೇ ಮಾಡಿರಬಹುದಾದ ಅಗ್ನಿಹೋತ್ರಾದಿ ಕರ್ಮಗಳಿಂದಲೂ ಈ ಜನ್ಮದಲ್ಲಿ ಚಿತ್ತಶುದ್ಧಿಯಾಗಬಹುದು. ಅಂಥವನಿಗೆ ಮತ್ತೆ ಗೃಹಸ್ಥನಾಗಿ ಕರ್ಮಗಳನ್ನು ಮಾಡು- ಎಂದು ಹೇಳುವದು ವ್ಯರ್ಥವಲ್ಲವೆ? ಇನ್ನು ವೇದಾಂತಶ್ರವಣಾದಿಗಳು ಬ್ರಹ್ಮವಿದ್ಯೆಗೆ ಸಾಕ್ಷಾತ್ತಾಗಿಯೇ ಸಾಧನಗಳಾಗಿರುವದರಿಂದ ಮುಮುಕ್ಷುವಿಗೆ ಕರ್ಮಗಳನ್ನು ಬಿಟ್ಟಾದರೂ ವೇದಾಂತಶ್ರವಣ ಮಾಡಬೇಕೆಂದು ಹೇಳಬೇಕಾಗುವದು.

**ಮಂಡನ** : ಹಾಗಾದರೆ ಕರ್ಮಗಳೊಡನೆ ಬ್ರಹ್ಮವಿಚಾರವನ್ನೂ ಕೂಡಿಸಿಕೊಂಡು ಎರಡನ್ನೂ ಒಟ್ಟಿಗೆ ಮಾಡಬಹುದಲ್ಲ?

**ಆಚಾರ್ಯರು** : ಅದು ಆಗಲಾರದು. ನಾನು ಕರ್ತೃ- ಎಂಬ ತಿಳಿವಳಿಕೆಯು ಕರ್ಮಕಾಲಕ್ಕೆ ಅಗತ್ಯವಾಗಿರುವದು. ನಾನು ಕರ್ತೃವಲ್ಲ- ಎಂಬ ತಿಳಿವಳಿಕೆಯು ಬ್ರಹ್ಮಜ್ಞಾನಿಗೆ ಇದ್ದುಕೊಂಡಿರುವದು. ಹೀಗೆ ಕತ್ತಲೆಬೆಳಕುಗಳಂತೆ ಪರಸ್ಪರ ವಿರುದ್ಧವಾಗಿರುವ ಕರ್ಮಜ್ಞಾನಗಳನ್ನು ಕೂಡಿಸಿ ಹೇಗೆ ತಾನೆ ಅನುಷ್ಠಾನ ಮಾಡಲಾದೀತು?

**ಮಂಡನ** : ವೇದದಲ್ಲಿಯೇ ಕರ್ಮಜ್ಞಾನಗಳೆರಡನ್ನೂ ಉಪದೇಶಿಸಿರುವದರಿಂದ ಶ್ರುತಿಪ್ರಮಾಣದಿಂದಲೇ ಎರಡರ ಸಮುಚ್ಚಯವೂ ಸಾಧ್ಯವೆಂದರೊ?

**ಆಚಾರ್ಯರು** : ಕೂಡದು. ನೂರು ಶ್ರುತಿಗಳು ಒಂದೇ ಬಾರಿಗೆ 'ಬೆಂಕಿಯು ತಣ್ಣಗಿದೆ' ಎಂದು ಹೇಳಿದರೂ ಒಪ್ಪಲಾಗುವದಿಲ್ಲ. ಏಕೆಂದರೆ ಅದು ಅನುಭವವಿರುದ್ಧವಾಗಿರುತ್ತದೆ. ಹಾಗೆ ಹೇಳಿದರೆ ಶ್ರುತಿಯ ಪ್ರಾಮಾಣ್ಯವೇ ಹಾರಿಹೋದೀತು. ಅಲ್ಲದೆ ಶ್ರುತಿಯು ಎಂದಿಗೂ ಅನುಭವವಿರುದ್ಧವಾಗಿ ಹೇಳುವದೇ ಇಲ್ಲ. ಅನುಭವಕ್ಕೆ ಸ್ಥಾನವನ್ನು ನೀಡದೆ ಶ್ರುತಿಗೆ ಅರ್ಥಮಾಡಿದರೆ ಅದು ಹಾಗೆ ಅರ್ಥಮಾಡಿದ ಪಂಡಿತರ ತಪ್ಪೇ ಸರಿ.

**ಮಂಡನ :** ಒಂದು ಹಕ್ಕಿಯು ತನ್ನ ಎರಡೂ ರೆಕ್ಕೆಗಳಿಂದ ಹಾರುವಂತೆ ಜ್ಞಾನ- ಕರ್ಮಗಳೆರಡರ ಅನುಷ್ಠಾನದಿಂದಲೂ ಮೋಕ್ಷವೆಂದರೆ ಹೊಂದಲಾರದೆ?

**ಆಚಾರ್ಯರು :** ಉದಾಹರಣೆಯೇನೋ ಸರಿ. ಆದರೆ ಕರ್ಮಗಳೊಡನೆ ಹೊಂದಿಕೊಳ್ಳುವ ಜ್ಞಾನ(ಉಪಾಸನೆ)ವನ್ನು ಮನಸ್ಸಿನಲ್ಲಿಟ್ಟುಕೊಂಡು ಕೆಲವರು ಹಾಗೆಂದಿರಬೇಕು. ನಾವು ತಿಳಿಸುತ್ತಿರುವದು ಆ ರೀತಿಯಾದ ಕರ್ತೃತಂತ್ರವಾದ ಜ್ಞಾನವಲ್ಲ. ಸಮುಚ್ಚಯವು ಕೊಡಬಹುದಾದ ಫಲವು ಪರಮಪುರುಷಾರ್ಥ ರೂಪವಾದ ಮುಕ್ತಿಯೂ ಅಲ್ಲ. ಲೋಕಾಂತರಗಳಿಗೆ ಹೋಗಿ ಪಡೆಯುವ ಈ ವಿದ್ಯಾಫಲವು ಆತ್ಯಂತಿಕಾಮೃತತ್ವವಲ್ಲ. ಮುಕ್ತಿಯೆಂದರೆ ನಮ್ಮ ಅಭಿಪ್ರಾಯದಲ್ಲಿ ಅವಿದ್ಯಾಕಾಮಕರ್ಮಗಳಿಂದ ಬಿಡುಗಡೆ ಎಂದರ್ಥವೇ ಹೊರತು ದೇಹದಿಂದ ಬಿಡುಗಡೆಯಲ್ಲ. ಆದ್ದರಿಂದ ಜ್ಞಾನಕರ್ಮಗಳನ್ನು ಒಟ್ಟುಗೂಡಿಸಲಾಗದು. ಏಕೆಂದರೆ ಜ್ಞಾನವುಂಟಾದಾಗ ಕ್ರಿಯಾಕಾರಕಫಲಗಳೇ ಬಾಧಿತವಾಗಿಬಿಟ್ಟಿರುವವು.

**ಮಂಡನ :** ನಿಮ್ಮ ಮತದಂತೆ ಮುಕ್ತಿಯು ಪ್ರಾಪ್ಯವಲ್ಲವೆಂದರ್ಥವೆ?

**ಆಚಾರ್ಯರು :** ಹೌದು. ಕರ್ಮಫಲದಂತೆ ಪ್ರಾಪ್ಯ, ಸಂಸ್ಕಾರ್ಯ, ಉತ್ಪಾದ್ಯ, ವಿಕಾರ್ಯಗಳೆಂಬ ನಾಲ್ಕು ರೀತಿಯ ವಸ್ತುಗಳಲ್ಲಿ ಮುಕ್ತಿಯೂ ಒಂದು- ಎಂಬುದು ಸರಿಯಲ್ಲ. ಮತ್ತೇನೆಂದರೆ ಉಂಟುಮಾಡತಕ್ಕದ್ದಕ್ಕಿಂತ ವಿಲಕ್ಷಣವಾದ ಕೇವಲ ಅರಿವಿನ ಸ್ವರೂಪವಾದ ಮೋಕ್ಷವು ಸ್ವತಃ ಸಿದ್ಧವಾದದ್ದಾಗಿದೆ.

**ಮಂಡನ :** ಹಾಗಾದರೆ ಅದನ್ನು ಪಡೆಯುವ ಅವಶ್ಯಕತೆಯೇ ಇಲ್ಲವೆಂದಾಯಿತಲ್ಲ?

**ಆಚಾರ್ಯರು :** ನಿಜ ; ಅದು ಹೊಸದಾಗಿ ಪಡೆಯತಕ್ಕದ್ದಲ್ಲವೇ ಅಲ್ಲ. ಮತ್ತೇನೆಂದರೆ ತಾನೇ ಆಗಿರುವ ಬ್ರಹ್ಮಸ್ವರೂಪವು ಅಜ್ಞಾನದಿಂದ ಮರೆಯಾಗಿರಲು ಶ್ರುತಿ ಆಚಾರ್ಯರುಗಳು ಬೋಧಿಸಿದಾಗ ಜ್ಞಾನವುಂಟಾದ್ದರಿಂದ ತಾನೆಂದೇ ಅರಿತು ನೆಲೆನಿಲ್ಲುವದೇ ಮುಕ್ತಿಯು. ಇದು ಪ್ರತ್ಯಕ್ಷಫಲವು. 'ಹತ್ತನೆಯವನೇ ನೀನು' ಎಂದು ಹೇಳಿದಂತೆ. ಈ ಅಭಿಪ್ರಾಯದಲ್ಲಿ ಮುಕ್ತಿಯು ಅಪ್ರಾಪ್ತಪ್ರಾಪ್ತಿಯೆನಿಸದೆ ಪ್ರಾಪ್ತವಾದದ್ದರ ಪ್ರಾಪ್ತಿಯೇ ಆಗಿದೆ. ಆದರೂ ತಿಳಿಯುವವರೆಗೂ ಅದು ತನ್ನ ಸ್ವರೂಪವೇ ಆಗಿದ್ದರೂ ನಿಷ್ಫಲವಾಗಿರುವದು. ತಿಳಿದಾಗ ಮಾತ್ರ ಸಫಲವಾಗುವದು. ಆದ್ದರಿಂದ ಮುಮುಕ್ಷುವು ಸರ್ವಕರ್ಮ ಸಂನ್ಯಾಸಪೂರ್ವಕವಾದ ಆತ್ಮಜ್ಞಾನ ನಿಷ್ಠೆಯಿಂದ ಮೋಕ್ಷವನ್ನು ತಾನೇ ತನ್ನಲ್ಲಿ ಕಂಡುಕೊಂಡು ಕೃತಕೃತ್ಯನಾಗಬೇಕು. ಹೀಗೆ ಕರ್ಮ- ಜ್ಞಾನಕಾಂಡಗಳ ಸಮನ್ವಯದಿಂದ ಪರತತ್ತ್ವದಲ್ಲಿ ನೆಲೆನಿಲ್ಲಬೇಕು.

## ಮಂಡನಪರಾಜಯ :

ಹೀಗೆ ಆಚಾರ್ಯರಿಗೂ ಮಂಡನಪಂಡಿತನಿಗೂ ವಾಗ್ವಾದವು ನಡೆದು ಕಡೆಯಲ್ಲಿ ಮಂಡನನಿಗೆ ಮುಂದೇನೂ ಹೇಳಲು ತೋಚದಾಯಿತು. ಸುಮಾರು ಎಂಟುದಿನಗಳ ಕಾಲ ಆಹ್ನಿಕ, ಭೋಜನ ಸಮಯಗಳ ಹೊರತಾಗಿ ಉಳಿದ ಕಾಲದಲ್ಲೆಲ್ಲ ವಾದವು ನಡೆದಿತ್ತು. ಪ್ರತಿದಿನವೂ ಉಭಯಭಾರತೀದೇವಿಯು ಮಧ್ಯಾಹ್ನಕಾಲಕ್ಕೆ ಯಜಮಾನರನ್ನು ಭೋಜನಕ್ಕೆ ಏಳಬೇಕೆಂದೂ ಆಚಾರ್ಯರನ್ನು ಭಿಕ್ಷೆಗೆ ದಯಮಾಡಿಸಬೇಕೆಂದೂ ಬಿಡಿಬಿಡಿಯಾಗಿ ಕರೆಯುತ್ತಿದ್ದಳು. ಕಡೆಯ ದಿನ ಆಕೆಯು ಮಧ್ಯಾಹ್ನಕಾಲಕ್ಕೆ ಬಂದು ನೋಡಿದಾಗ- ತನ್ನ ಪತಿಯ ಕಂಠದಲ್ಲಿದ್ದ ಹೂಮಾಲೆಯು ಬಾಡಿದ್ದಿತು. ಅಷ್ಟರಿಂದಲೇ ಪತಿಯು ಯತಿಯಿಂದ ಪರಾಜಿತನಾದನೆಂದು ತಿಳಿದು ವಾದದಲ್ಲಿ ಒಡ್ಡಿದ್ದ ಪಣದಂತೆ ಪತಿಯೂ ಯತಿಯಂತೆ ಆದನೆಂದು ಭಾವಿಸಿ 'ಇಬ್ಬರೂ ಭಿಕ್ಷೆಗೆ ಏಳಿರಿ' ಎಂದೇ ಆಹ್ವಾನಿಸಿಬಿಟ್ಟಳು. ಮಂಡನಮಿಶ್ರನು ಮಧ್ಯಸ್ಥೆಯಾದ ತನ್ನ ಪತ್ನಿಯ ಚಮತ್ಕಾರವಾದ ಆಹ್ವಾನವೇ ಆಕೆಯ ತೀರ್ಪನ್ನು ಪ್ರಕಟಮಾಡಿತೆಂದು ಅರಿತುಕೊಂಡನು. ಮತ್ತು ತನ್ನ ಸೋಲನ್ನು ಸ್ವೀಕರಿಸಿದನು. ಇದೊಂದು ಅದ್ಭುತಘಟನೆಯಾಯಿತು.

## ಉಭಯಭಾರತೀವೃತ್ತಾಂತ :

ಪರಮೇಶ್ವರನೇ ಶಂಕರಭಗವತ್ಪಾದರಾಗಿ ಅವತರಿಸಿದ ಕಾಲಕ್ಕೆ ಅವರ ಲೋಕೋಪಕಾರಕಾರ್ಯದಲ್ಲಿ ಸಹಾಯಾರ್ಥವಾಗಿ ಭೂಮಂಡಲದಲ್ಲಿ ದೇವತೆಗಳೂ ತಮ್ಮ ತಮ್ಮ ಅಂಶಗಳಿಂದ ಬೇರಬೇರೆಯ ಸ್ಥಳಗಳಲ್ಲಿ ಅವತರಿಸಿದ್ದರು. ಹಾಗೆ ಅವತರಿಸಿದ್ದವರಲ್ಲಿ ಪದ್ಮಪಾದನೆಂಬ ಶಿಷ್ಯನೇ ಶ್ರೀಮಹಾವಿಷ್ಣುವಿನ ಅಂಶದವನಾಗಿದ್ದನು. ಮುಂದೆ ಆಚಾರ್ಯರನ್ನು ಬಂದು ಸೇರಲಿರುವ ಹಸ್ತಾಮಲಕ, ತೋಟಕರೆಂಬ ಶಿಷ್ಯರುಗಳು ವಾಯುದೇವನ ಅಂಶದಿಂದ ಜನಿಸಿದ್ದರು. ಚತುರ್ಮುಖಬ್ರಹ್ಮನ ಅಂಶದಿಂದ ಮಂಡನಮಿಶ್ರನು ಜನಿಸದ್ದನು. ಹಾಗೆಯೇ ಬ್ರಹ್ಮಪತ್ನಿಯಾದ ಸರಸ್ವತಿಯೇ ಉಭಯಭಾರತಿಯಾಗಿ ಅವತರಿಸಿದ್ದಳು. ಒಮ್ಮೆ ಬ್ರಹ್ಮಲೋಕದಲ್ಲಿ ಚತುರ್ಮುಖನ ಅಧ್ಯಕ್ಷತೆಯಲ್ಲಿ ದೇವಸಭೆಯು ನಡೆಯುತ್ತಿರಲು ಸರಸ್ವತಿಯು ಬ್ರಹ್ಮನೊಡನೆ ಕುಳಿತಿದ್ದಳು. ಆಗ ದೂರ್ವಾಸರು ಸಾಮವೇದದವನ್ನು ಪಠಿಸುತ್ತಿದ್ದರು. ಆ ಗಾನದಲ್ಲಿ ಅಕಸ್ಮಾತ್ತಾಗಿ ಸ್ವರಭೇದವಾಗಿ ಸ್ವಲ್ಪ ತಪ್ಪಾಯಿತು. ಬ್ರಹ್ಮನೇನೂ ಅದನ್ನು ಗಮನಿಸಲಿಲ್ಲ. ಆದರೆ ಸರಸ್ವತಿಗೆ ಆ ತಪ್ಪು ಗೊತ್ತಾಯಿತು. ಸ್ತ್ರೀ ಸ್ವಭಾವದಂತೆ ಆಕೆಯು ಸ್ವಲ್ಪ ನಕ್ಕಳು. ಇದನ್ನು ಕಂಡ ದೂರ್ವಾಸರಿಗೆ ಕೋಪವುಂಟಾಗಿಬಿಟ್ಟಿತು. ಕೂಡಲೆ ಅವರು ಸರಸ್ವತಿಯನ್ನು ಕುರಿತು 'ನೀನು

ಬ್ರಹ್ಮಸಭೆಯಲ್ಲಿದ್ದುಕೊಂಡು ಗಾಂಭೀರ್ಯವನ್ನು ಕಾಪಾಡಿಕೊಳ್ಳದೆ ಮನುಷ್ಯರಂತೆ ಹಗುರವಾದ ರೀತಿಯಲ್ಲಿ ನಕ್ಕಿರುತ್ತೀಯೆ. ಆದ್ದರಿಂದ ಮನುಷ್ಯಳಾಗಿಯೇ ಹುಟ್ಟುವವಳಾಗು' ಎಂದು ಶಪಿಸಿಬಿಟ್ಟರು. ಆಗ ದೇವತೆಗಳೂ ಬ್ರಹ್ಮನೂ ಕೂಡಿ ದೂರ್ವಾಸರನ್ನು ಸಮಾಧಾನಗೊಳಿಸಿ ಸರಸ್ವತಿಗೆ ಶಾಪವಿಮೋಚನೆಯಾಗುವಂತೆ ಅನುಗ್ರಹಿಸಬೇಕೆಂದು ಬೇಡಿಕೊಂಡರು. ಆಗ ದೂರ್ವಾಸರು 'ಆಗಲಿ, ಪರಮೇಶ್ವರನು ಭೂಲೋಕದಲ್ಲಿ ಶಂಕರನಾಗಿ ಅವತರಿಸಿ ಸಂನ್ಯಾಸಿಯ ರೂಪದಿಂದ ದರ್ಶನವಿತ್ತಾಗ ಶಾಪವಿಮೋಚನೆಯಾಗುವದು' ಎಂದು ನುಡಿದರು. ಈ ನಿಮಿತ್ತದಿಂದ ಪರಮೇಶ್ವರನು ಶಂಕರನಾಗಿ ಅವತರಿಸಿದಾಗ ಸರಸ್ವತಿಯು ಶೋಣಾನದೀ ತೀರದಲ್ಲಿ ವಾಸವಾಗಿದ್ದ ವಿಷ್ಣುಮಿತ್ರನೆಂಬ ಬ್ರಾಹ್ಮಣನ ಮಗಳಾಗಿ ಜನಿಸಿ ಹಿಮಮಿತ್ರನ ಮಗನಾದ ಬ್ರಹ್ಮನ ಅಂಶಭೂತನಾದ ಮಂಡನಮಿಶ್ರನನ್ನು ಮದುವೆಯಾಗಿ ಗೃಹಿಣಿಯಾಗಿದ್ದಳು. ಬಾಲ್ಯದಿಂದಲೇ ಆಕೆಯಲ್ಲಿ ಸರಸ್ವತೀ ಅಂಶವು ಪ್ರಕಟವಾಗಿತ್ತು. ಆದ್ದರಿಂದ ಬ್ರಹ್ಮವಿದ್ಯೆಯ ಪರಾಕಾಷ್ಠೆಯನ್ನು ಸುನಿಶ್ಚಿತವಾಗಿ ಬಲ್ಲ ಉಭಯಭಾರತಿಯ ಮಧ್ಯಸ್ಥಿಕೆಯನ್ನು ಮಂಡನಮಿಶ್ರನು ಅಂಗೀಕರಿಸಿದ್ದನು. ಸತ್ಯಲೋಕನಿವಾಸಿನಿಯಾದ ಭಾರತಿಯು ವಾದದಲ್ಲಿ ಸತ್ಯವಾದ ಪಕ್ಷವನ್ನೇ ಎತ್ತಿ ಹಿಡಿದು ನೀಡಿದ ತೀರ್ಪಿನಿಂದ ಶಂಕರಾಚಾರ್ಯರಿಗೆ ಜಯವು ಲಭಿಸಿದ್ದರೊಡನೆ ಸರಸ್ವತಿಯ ಶಾಪವಿಮೋಚನೆಯೂ ಸಂಭವಿಸಿ ಕೂಡಲೆ ಸತ್ಯಲೋಕಕ್ಕೆ ತನ್ನ ಸ್ವಸ್ಥಾನಕ್ಕೆ ಹಿಂದಿರುಗಲನುವಾದಳು.

## ಆಚಾರ್ಯರಿಗೆ ಭಾರತಿಯ ಸಾಕ್ಷಾತ್ಕಾರ :

ಜ್ಞಾನದೃಷ್ಟಿಯಿಂದ ಆಚಾರ್ಯರು ಸರಸ್ವತಿಯ ನಿಜವನ್ನು ತಿಳಿದವರಾಗಿ ಆಕೆಯು ಬ್ರಹ್ಮಲೋಕಕ್ಕೆ ಹೊರಟಿರುವದನ್ನು ಕಂಡು ಕೂಡಲೆ ಅರಣ್ಯ ದುರ್ಗಾಮಂತ್ರದಿಂದ ಆಕೆಯನ್ನು ಬಂಧಿಸಿಬಿಟ್ಟರು. ದೇವತೆಗಳೆಲ್ಲರೂ ಮಂತ್ರಾಧೀನರೆಂಬುದು ಪ್ರಸಿದ್ಧವು. ಆಚಾರ್ಯರು ಬ್ರಹ್ಮನಿಷ್ಠರಾಗಿದ್ದುದರಿಂದ ಸಕಲಮಂತ್ರಸಿದ್ಧಿಗಳೂ ಅವರ ಬಳಿಯಲ್ಲಿದ್ದವು. ಆ ಬಲದಿಂದ ದೇವಿಯನ್ನು ಬಂಧಿಸಿ ಹೀಗೆ ಸ್ತೋತ್ರಮಾಡಿದರು :-

**ಜಾನಾಮಿ ದೇವೀಂ ಭವತೀಂ ವಿಧಾತು-**
**ರ್ದೇವಸ್ಯ ಭಾರ್ಯಾಂ ಪುರಭಿತ್ಸಗರ್ಭ್ಯಾಮ್ ।**
**ಉಪಾತ್ತಲಕ್ಷ್ಮ್ಯಾದಿವಿಚಿತ್ರರೂಪಾಂ**
**ಗುಪ್ತ್ಯೈ ಪ್ರಪಂಚಸ್ಯ ಕೃತಾವತಾರಾಮ್ ॥**

'ತಾಯೆ, ನಿಮ್ಮನ್ನು ಚತುರ್ಮುಖಬ್ರಹ್ಮನ ಪತ್ನಿಯೆಂದೂ ಮಹಾದೇವನ ಸಹೋದರಿಯೆಂದೂ ಬಲ್ಲೆನು. ಪ್ರಪಂಚರಕ್ಷಣೆಗಾಗಿ ಲಕ್ಷ್ಮಿ, (ಕಾಳಿ) ಮುಂತಾದ ಅವತಾರಗಳನ್ನು ಮಾಡಿರುವಿರೆಂದೂ ತಿಳಿದಿದ್ದೇನೆ' ಹೀಗೆಂದು ಸ್ತುತಿಸಿದ ಅನಂತರ 'ದೇವಿ, ನಿನ್ನ ಭಕ್ತಶ್ರೇಷ್ಠನಾದ ನಾನು ನಿನಗೆ ನಿಜಸ್ಥಾನವನ್ನು ಕುರಿತು ಹೋಗಲು ಯಾವಾಗ ಅಪ್ಪಣೆಯನ್ನು ನೀಡುವೆನೋ ಆಗ ಹೋಗಬಹುದು' ಎನ್ನಲಾಗಿ ಭಕ್ತಪರಾಧೀನಳಾದ ದೇವಿಯು ಹಾಗೆಯೇ ನಿಂತುಬಿಟ್ಟಳು. ದೇವಿಯ ನಿಜರೂಪದರ್ಶನದಿಂದ ಸಂತುಷ್ಟರಾದ ಆಚಾರ್ಯರು ಮುಂದೆ ಮಂಡನಮಿಶ್ರನ ಅಭಿಪ್ರಾಯವನ್ನರಿಯಲು ಸಿದ್ಧರಾದರು.

---

# ೨. ಮಂಡನನು ಸುರೇಶ್ವರನಾದುದು

## ಮಂಡನನ ಸಂಶಯಪರಿಹಾರ :

ಆಚಾರ್ಯರಿಂದ ವಾದದಲ್ಲಿ ಪರಾಜಿತನಾದ ಮಂಡನಮಿಶ್ರನಿಗೆ ಬಹಳ ವ್ಯಥೆಯಾಯಿತು. ಮೊದಲನೆಯದಾಗಿ ಆತನು ಈವರೆಗೂ ಸೋತಿರಲಿಲ್ಲ. ಅಂಥ ಅದ್ವಿತೀಯಪಂಡಿತನಾಗಿದ್ದನು. ಇಂಥವನಿಗೆ ಸೋಲು ತಾತ್ಕಾಲಿಕವಾಗಿ ಅಸಮಾಧಾನವನ್ನೂ ಶೋಕವನ್ನೂ ಉಂಟುಮಾಡಿತು. ಎರಡನೆಯದಾಗಿ ನ್ಯಾಯನಿರ್ಣಯಕ್ಕಾಗಿ ಸಕಲವಿದ್ಯಾಧಿದೇವತೆಯ ಅಂಶಳಾದ ತನ್ನ ಪತ್ನಿಯೇ ಇದ್ದುದರಿಂದ- ತಾನು ಈವರೆಗೆ ನಂಬಿದ್ದ ಹಾಗೂ ನಿಷ್ಠೆಯಿಂದ ವ್ಯಾಸಂಗಮಾಡಿ ಅಳವಡಿಸಿಕೊಂಡಿದ್ದ ಪೂರ್ವಮಿಮಾಂಸಾದರ್ಶನಕ್ಕೇ ಜಯವೆಂದು ನಂಬಿದ್ದನು. ಈಗ ಅದು ಪರಾಜಯವನ್ನು ಹೊಂದಿದ್ದುದು ಆ ದರ್ಶನಕರ್ತೃಗಳಾದ ಜೈಮಿನಿಗಳಿಗೇ ಅಪಮಾನವಾದಂತೆ- ಎಂದು ಭಾವಿಸಿದನು. ಹೀಗೆ ಸೋಲನ್ನು ವಾದದಲ್ಲಿ ಒಪ್ಪಿಕೊಂಡಿದ್ದರೂ ಅವನಿಗೆ ಮನಸ್ಸಿನಲ್ಲಿ ಕಳವಳವುಂಟಾಗಿತ್ತು. ಅದನ್ನು ಗ್ರಹಿಸಿದ ಆಚಾರ್ಯರು ಹೀಗೆಂದರು : 'ಅಯ್ಯ ಪಂಡಿತನೆ, ಕೇಳು, ಜೈಮಿನೀಯದರ್ಶನದ ಅಭಿಪ್ರಾಯವನ್ನು ನೀನು ತಪ್ಪಾಗಿ ತಿಳಿದಿದ್ದುದರಿಂದ ಹೀಗೆ ಖೇದವಾಗಿದೆ. ಜೈಮಿನಿಗಳ ಅಂತರಂಗದ ಅಭಿಪ್ರಾಯವೇನೆಂಬುದನ್ನು ಹೇಳುವೆನು; ಕೇಳು. ಕಣಾದರ ಅನುಯಾಯಿಗಳಾದ ನೈಯಾಯಿಕರು ಈಶ್ವರನಿದಾನೆ- ಎಂಬುದನ್ನು ಅನುಮಾನ ಪ್ರಮಾಣದಿಂದ ಸಾಧಿಸಲು ಹೊರಟರು. ಆದರೆ ಜೈಮಿನಿಗಳು ಆ ಪುರುಷನು (ಈಶ್ವರನು) ಉಪನಿಷತ್ತುಗಳೆಂಬ ವೇದಗಳಿಂದ ತಿಳಿದುಬಂದಾನೇ ಹೊರತು ಅನುಮಾನದಿಂದಲ್ಲ, ತಾರ್ಕಿಕರ ಈಶ್ವರಾಸ್ತಿತ್ವಾನುಮಾನವು ಹಾಸ್ಯಾಸ್ಪದ. ವೇದಜ್ಞನಲ್ಲದವನು ಈಶ್ವರನನ್ನು ಅರಿಯಲಾರನು- ಎಂದಿರುವಲ್ಲಿ ವೇದಬಾಹ್ಯವಾಗಿ ಅನುಮಾನಮಾಡುವ ತಾರ್ಕಿಕರಿಗೆ ಈಶ್ವರನು ಹೇಗೆ ಸಿದ್ಧನಾದಾನು? ಆದ್ದರಿಂದ ವೇದಗಳೇ ಈಶ್ವರನಿರುವನೆಂಬುದರಲ್ಲಿ ಪ್ರಮಾಣಗಳು. ಅವು ಅಪೌರುಷೇಯ ವಾದವುಗಳು. ವೇದಗಳು ತಿಳಿಸುವ ಧರ್ಮ, ಅಧರ್ಮಗಳನ್ನರಿತು ಅಧರ್ಮಗಳನ್ನು ಬಿಟ್ಟು ಧರ್ಮಕರ್ಮಗಳನ್ನು ಮಾಡಬೇಕು. ಕರ್ಮಗಳಿಂದ ಫಲಪ್ರಾಪ್ತಿಯಾಗುವದು. ವೇದಗಳೆಲ್ಲವೂ ಕರ್ಮಪರವೇ ಆಗಿವೆ- ಎಂದು ಜೈಮಿನಿಗಳ ಹೃದಯವನ್ನರಿಯದವರು ವ್ಯಾಖ್ಯಾನಮಾಡಿದ್ದಾರೆ. ಅವರು ಕೇವಲ ಕರ್ಮವಾದಿಗಳೆಂದೂ ಈಶ್ವರನನ್ನು ನಂಬದ ನಿರೀಶ್ವರವಾದಿಗಳೆಂದೂ ತಪ್ಪಾಗಿ ಕಲ್ಪಿಸಿರುತ್ತಾರೆ.

ವಾಸ್ತವವಾಗಿ ಜೈಮಿನಿಗಳು ನಿರೀಶ್ವರವಾದಿಗಳಲ್ಲ. ಅವರು ಕೂಡ ಈಶ್ವರವಾದಿಗಳೇ ಆಗಿದ್ದಾರೆ. ಈಶ್ವರನೆಂದರೂ ಬ್ರಹ್ಮವೆಂದರೂ ಒಂದೇ. ಈ ರೀತಿಯಾಗಿ ನೀನು ಅರಿತುಕೊಂಡಲ್ಲಿ ಜೈಮಿನಿಗಳ ನಿಜವಾದ ಹೃದಯವನ್ನರಿತಂತಾಗುವದು'- ಎಂದು ಸಮಾಧಾನಪಡಿಸಿದರು.

## ಜೈಮಿನಿಗಳಿಂದ ಆಚಾರ್ಯರ ಸ್ತುತಿ :

ಇಷ್ಟಾದರೂ ಮಂಡನನಿಗೆ ಪೂರ್ತಿಯಾಗಿ ಶೋಕವು ನೀಗಲಿಲ್ಲ. ಆಚಾರ್ಯರು ಹೇಳಿರವದು ಸರಿಯೆ? ಎಂದು ಜೈಮಿನಿಗಳಲ್ಲಿಯೇ ಪ್ರಸ್ತಾಪಿಸಿ ತಿಳಿಯೋಣವೆಂದು ಹೃದಯದಲ್ಲಿ ಜೈಮಿನಿಗಳನ್ನು ಸ್ಮರಿಸಿದನು. ಅವರು ಪ್ರತ್ಯಕ್ಷರಾಗಿ ಬಂದೇಬಿಟ್ಟರು. ಮಂಡನನನ್ನು ಕುರಿತು 'ಶಿಷ್ಯಾಗ್ರಣಿಯೆ, ಕೇಳು. ನಿನ್ನೊಡನೆ ವಾದಮಾಡಿದ ಯತಿಯು ಸಾಮಾನ್ಯನಲ್ಲ. ಆತನು ಪರಮೇಶ್ವರನ ಅವತಾರನೇ ಸರಿ. ಅವನು ಕೇವಲ ನನ್ನ ಪೂರ್ವಮೀಮಾಂಸಾದರ್ಶನವನ್ನು ಮಾತ್ರವಲ್ಲ! ಎಲ್ಲಾ ಶಾಸ್ತ್ರಗಳ ಅಂತರಾರ್ಥವನ್ನೂ ತಿಳಿದವನು. ಆತನು ಹೇಳಿದ ಅರ್ಥವೇ ನನಗೂ ಒಪ್ಪಾದದ್ದು. ಅವನ ಹೃದಯವೇ ನನ್ನ ಹೃದಯವು. ಇನ್ನೇನು ಹೇಳಲಿ? ನಾನೂ ವ್ಯಾಸರ ಶಿಷ್ಯನೇ. ವೇದವ್ಯಾಸರ ಸೂತ್ರಗಳಿಗೆ ಆತನು ಭಾಷ್ಯವನ್ನು ಬರೆದು ವ್ಯಾಸರಿಂದಲೇ ಹೊಗಳಿಸಿಕೊಂಡಿದ್ದಾನೆ. ಇನ್ನು ನಾನು ಆ ಸೂತ್ರಗಳಿಗೆ ವಿರುದ್ಧವಾಗಿ ಬರೆಯಬಲ್ಲೆನೆ? ಒಂದೇ ಒಂದು ಸೂತ್ರವನ್ನೂ ನಾನು ವೇದಾಂತ ದರ್ಶನವಿರುದ್ಧವಾಗಿ ಬರೆಯಲಾರೆ. ಆದ್ದರಿಂದ ಈ ಯತಿಯನ್ನು ಸಾಕ್ಷಾತ್ ಶಿವನೆಂದೇ ತಿಳಿ. ಇವನ ಮಹಿಮೆಯನ್ನು ಕೇಳು:

**ಆದ್ಯೇ ಸತ್ತ್ವಮುನಿಸ್ಸತಾಂ ವಿತರತಿ ಜ್ಞಾನಂ ದ್ವಿತೀಯೇ ಯುಗೇ**
**ದತ್ತೋ ದ್ವಾಪರನಾಮಕೇ ತು ಸುಮತಿರ್ವ್ಯಾಸಃ ಕಲೌ ಶಂಕರಃ ।**
**ಇತ್ಯೇವಂ ಸ್ಫುಟಮೀರಿತೋಽಸ್ಯ ಮಹಿಮಾ ಶೈವೇ ಪುರಾಣೇ ಯತಃ**
**ತಸ್ಯ ತ್ವಂ ಸುಮತೇ ಮತೇ ತ್ವವತರೇಃ ಸಂಸಾರವಾರ್ಧಿಂ ತರೇಃ ॥**

'ಆದ್ಯ (ಕೃತ) ಯುಗದಲ್ಲಿ ಕಪಿಲಋಷಿಯಾಗಿ ಸಜ್ಜನರಿಗೆ ಜ್ಞಾನವನ್ನು ಉಪದೇಶಿಸಿದವನಾಗಿಯೂ ಎರಡನೆಯ (ತ್ರೇತಾ) ಯುಗದಲ್ಲಿ ದತ್ತಾತ್ರೇಯನಾಗಿ ಅವತರಿಸಿ ಜ್ಞಾನೋಪದೇಶಮಾಡಿದವನಾಗಿಯೂ ದ್ವಾಪರಯುಗದಲ್ಲಿ ಸುಮತಿ ಯಾದ ವ್ಯಾಸನಾಗಿ ಆವಿರ್ಭವಿಸಿ ತತ್ತ್ವೋಪದೇಶವನ್ನು ನೀಡಿರುವವನಾಗಿಯೂ ಕಲಿಯುಗದಲ್ಲಿ ಶಂಕರಾಚಾರ್ಯನಾಗಿ ಹುಟ್ಟಿ ಬ್ರಹ್ಮವಿದ್ಯೆಯನ್ನು ಲೋಕಕ್ಕೆ ನೀಡಿದವನಾಗಿಯೂ ಇರುವ ಈತನು ಅತ್ಯಂತ ಮಹಿಮಾನ್ವಿತಪುರುಷನು. ಶೈವಪುರಾಣಗಳಲ್ಲಿ ಈ ವಿಷಯವು ಹೇಳಲ್ಪಟ್ಟಿದೆ. ಆದ್ದರಿಂದ ಆತನ ಉಪದೇಶದಲ್ಲಿ ಶ್ರದ್ಧೆ ವಿಶ್ವಾಸಗಳನ್ನಿಡು. ಅದರಂತೆ ನಡೆಯುವವನಾಗಿ ಸಂಸಾರಸಾಗರವನ್ನು ದಾಟುವವನಾಗು' ಎಂದು ತಿಳಿಸಿದವರಾಗಿ ಶ್ರೀ ಶಂಕರಾಚಾರ್ಯರನ್ನು

ಮನಸ್ಸಿನಿಂದಲೇ ಆಲಿಂಗಿಸಿಕೊಂಡರು. ಕೆಲವೇ ನಿಮಿಷಗಳಲ್ಲಿ ಅವರು ಅಂತರ್ಧಾನರಾಗಿಬಿಟ್ಟರು.

## ಮಂಡನನು ಆಚಾರ್ಯರಿಗೆ ಶರಣಾದದ್ದು :

ಅನಂತರ ಮಂಡನಮಿಶ್ರನಿಗೆ ಆಚಾರ್ಯರ ಉಪದೇಶಗಳಲ್ಲಿ ಭಕ್ತಿಯೂ ಕರ್ಮಕಾಂಡಕ್ಕಿಂತ ಜ್ಞಾನಕಾಂಡವು ಮಿಗಿಲಾದುದೆಂಬುದೂ ಮನದಟ್ಟಾಯಿತು. ವಾದವಿವಾದಗಳ ಸಂದರ್ಭದಲ್ಲಿ ಏನಾದರೂ ಅಪಚಾರಗಳಾಗಿದ್ದರೆ ಕ್ಷಮಿಸಬೇಕೆಂದು ಆತನು ಆಚಾರ್ಯರನ್ನು ಬೇಡಿಕೊಂಡನು. ತನಗೆ ಗುರುಚರಣಾರವಿಂದಗಳಲ್ಲಿ ಆಶ್ರಯವನ್ನು ನೀಡಬೇಕೆಂದು ಪ್ರಾರ್ಥಿಸಿಕೊಂಡನು. ವಿದ್ವಾಂಸನಾದವನಿಗೆ ವಿದ್ಯೆಯೊಡನೆ ವಿನಯವೂ ಇರಬೇಕು. ವಿಶೇಷವಾಗಿ ಬ್ರಾಹ್ಮಣನಿಗಂತೂ ವಿನಯವು ಹೆಗ್ಗುರುತಾಗಿರುತ್ತದೆ. ಬ್ರಹ್ಮನಿಷ್ಠರಿಗೆ ಅದು ಸ್ವಭಾವವೇ ಆಗಿಬಿಟ್ಟಿರುತ್ತದೆ. ಶ್ರೀಗೌಡಪಾದರವರು 'ವಿಪ್ರಾಣಾಂ ವಿನಯೋ ಹ್ಯೇಷಃ ಶಮಃ ಪ್ರಾಕೃತ ಉಚ್ಯತೇ' ಎಂದೇ ಘೋಷಿಸಿದ್ದಾರೆ. ಬ್ರಹ್ಮಜ್ಞಾನಿಗಳಾದ ವಿಪ್ರರಿಗೆ ವಿನೀತರಾಗಿರುವದು ಸ್ವಭಾವಸಿದ್ಧವೇ ಎಂದೂ ಅದೇ ಶಮವೆಂದೂ ಅದು ಪ್ರಾಕೃತ- ಎಂದರೆ ಸಹಜಸಿದ್ಧವೆಂದೂ ಅವರ ಅಭಿಪ್ರಾಯ. ಆಚಾರ್ಯರಂಥ ವಿನಯಮೂರ್ತಿಗಳೊಡನಾಟವೂ ವಾದವಿವಾದವೂ ಮಂಡನಮಿಶ್ರನನ್ನು ಔದ್ಧತ್ಯದಿಂದ ಬಿಡುಗಡೆಮಾಡಿ ವಿನೀತನನ್ನಾಗಿ ಮಾಡಿಬಿಟ್ಟಿತು. ಸಾಧುಸಜ್ಜನರ ಸಂಗದ ಫಲವಿದು- ಎದು ತಿಳಿಯಬೇಕು. ಹೀಗೆ ಮಂಡನಮಿಶ್ರನು ಆಚಾರ್ಯರಿಗೆ ಶರಣಾದನು.

## ಉಭಯಭಾರತಿಯ ಪ್ರಾರ್ಥನೆ :

ಈಗ ಮಂಡನನ ಪತ್ನಿಗೆ ಒಂದು ಸಮಸ್ಯೆಯು ಉದ್ಭವಿಸಿತು. ವಾದದಲ್ಲಿ ಸೋತ ತನ್ನ ಪತಿಯು ಪರಮಹಂಸಸಂನ್ಯಾಸಿಯಾಗುವದಂತೂ ನಿಜ. ಆದರೆ ಅಷ್ಟರೊಳಗೆ ತಾನು ಭೂಲೋಕದಿಂದ ಬಿಡುಗಡೆಹೊಂದಿಬಿಡುವದೇ ಸಮಂಜಸವಾದ್ದರಿಂದ ಆಚಾರ್ಯರನ್ನು ಒಪ್ಪಿಸಿ ತಾನು ಹೊರಡಬೇಕೆಂದು ಯೋಚಿಸಿದಳು. ಆಚಾರ್ಯರು ಸರ್ವಜ್ಞರೆಂದು ತಿಳಿದಿದ್ದರೂ ಅವರೊಡನೆ ತಾನು ಕೂಡ ಸ್ವಲ್ಪಕಾಲ ವಾದವನ್ನೇಕೆ ಮಾಡಬಾರದು? ಎಂದು ಅವಳಿಗೆ ಅನ್ನಿಸಿತು. ಮತ್ತು ಭಾರತಿಯನ್ನೇ ಜಯಿಸಿದ ಮಹನೀಯರು ಜಗದ್ಗುರುಗಳೆನಿಸುವದು ಅನ್ವರ್ಥವೇ ಆಗಲಿದೆ; ಇಂಥ ಅನಿತರಸಾಧಾರಣವಾದ ಗುರುಪದವಿಯನ್ನು ಆಚಾರ್ಯರಿಗೆ ಕೊಡಿಸಲು ತಾನು ಕೂಡ ವಾದಕ್ಕಿಳಿಯುವದು ಸಾಧುವೇ ಆದೀತು ಎಂದುಕೊಂಡು ಆಚಾರ್ಯರನ್ನು ಕುರಿತು ''ಪೂಜ್ಯರೆ, ನನ್ನದೊಂದು ಪ್ರಾರ್ಥನೆಯಿದೆ. ತಾವು ನನ್ನ ಯಜಮಾನರನ್ನು ವಾದದಲ್ಲಿ ಸೋಲಿಸಿದ್ದರೂ ಅವರ ಧರ್ಮಪತ್ನಿಯಾದ ನನ್ನನ್ನೂ ತಾವು ಗೆದ್ದಹೊರತು ಜಯವು ಪೂರ್ಣವಾಗುವದಿಲ್ಲ. ಪತಿಪತ್ನಿಯರು ಅರ್ಧರ್ಧ

ಶರೀರರೆಂಬುದು ಪ್ರಸಿದ್ಧವು. ಆದ್ದರಿಂದ ನನ್ನೊಡನೆಯೂ ತಾವು ವಾದಮಾಡಲು ಸಮ್ಮತಿಸಬೇಕು'' ಎಂದಳು. ಆಚಾರ್ಯರಿಗೆ ಈ ಪ್ರಾರ್ಥನೆಯಿಂದ ಆಶ್ಚರ್ಯವಾದರೂ ತಮ್ಮ ಜಯವು ಪೂರ್ಣವಾಗುವ ದೃಷ್ಟಿಯಿಂದ ವಾದವನ್ನು ಭಾರತಿಯೊಡನೆ ಮಾಡತಕ್ಕದ್ದೆಂದೇ ನಿರ್ಧರಿಸಿದರು. ಭಾರತಿಯು ಮುಂದುವರೆದು 'ಬ್ರಹ್ಮನಿಷ್ಠರೆ, ನಿಮಗೆ ಸ್ತ್ರೀಯೊಡನೆ ವಾದಮಾಡುವದು ಹೇಗಾದೀತು? ಎಂಬ ಸಂಶಯವು ಬೇಡ. ಯಾಜ್ಞವಲ್ಕ್ಯರು ಗಾರ್ಗಿಯೊಡನೆಯೂ ಜನಕನು ಸುಲಭಾ ಎಂಬವಳೊಡನೆಯೂ ವಾದಮಾಡಿದ ನಿದರ್ಶನಗಳಿವೆ. ಬ್ರಹ್ಮವಿದರು ಯಾರೊಡನೆಯಾದರೂ ವಾದಮಾಡಬಹುದು' ಎಂದಳು. ಆಚಾರ್ಯರು ಆಕೆಯ ಮಾತಿಗೆ ಒಪ್ಪಿದರು.

## ಉಭಯಭಾರತಿಯೊಡನೆ ವಾದ :

ಭಾರತಿಯು ಈ ಮಹಾತ್ಮರೊಡನೆ ನಾಲ್ಕು ವಿಧವಾದ ಪುರುಷಾರ್ಥಗಳ ವಿಚಾರವನ್ನೂ ಪ್ರಸ್ಥಾಪಿಸಬೇಕೆಂದು ನಿರ್ಧರಿಸಿದಳು. ಆಕೆಯು ಈ ಸಂನ್ಯಾಸಿಯು ಬಾಲ್ಯದಿಂದಲೇ ಪರಿವ್ರಾಜಕನಾಗಿಬಿಟ್ಟಿರುವದರಿಂದ ಕಾಮಶಾಸ್ತ್ರದ ವಿಷಯವಾಗಿ ಏನೂ ತಿಳಿದಿರಲಾರನೆಂದು ಭಾವಿಸಿದಳು. ಆದರೂ ಸಂನ್ಯಾಸಿಗಳಲ್ಲಿ- ಅದರಲ್ಲಿಯೂ ಸದ್ಗೃಹಿಣಿಯಾದ ತಾನು- ಅಂಥ ವಿಚಾರವನ್ನು ಒಮ್ಮೆಗೇ ಪ್ರಸ್ತಾಪಿಸಬಾರದೆಂದುಕೊಂಡು ಜ್ಞಾನಕಾಂಡದ ನೆಪದಿಂದ ತನ್ನ ವಾದವನ್ನು ಮುಂದಿಟ್ಟಳು. ಆಚಾರ್ಯರಿಗೂ ಉಭಯಭಾರತಿಗೂ ಈ ಕೆಳಗೆ ಕಂಡಂತೆ ಸಂವಾದವು ನಡೆಯಿತು. ಮಂಡನಮಿಶ್ರನು ಪ್ರೇಕ್ಷಕನಾಗಿದ್ದನು.

**ಭಾರತಿ :** ಜ್ಞಾನದಿಂದಲೇ ಮುಕ್ತಿಯೆನ್ನುವ ಪಕ್ಷದಲ್ಲಿ ಕರ್ಮಕಾಂಡವು ವ್ಯರ್ಥವೆಂದೇ ಆಯಿತಲ್ಲವೆ?

**ಆಚಾರ್ಯರು :** ಹಾಗೇನಿಲ್ಲ. ಹುಟ್ಟಿದಂದಿನಿಂದಲೇ ಎಲ್ಲರೂ ಜ್ಞಾನಕ್ಕೆ ಅಧಿಕಾರಿಗಳಾಗಿರುವದಿಲ್ಲ. ಅಂಥವರಿಗೆ ಜ್ಞಾನವುಂಟಾಗುವ ಮುಂಚೆ ಅವಶ್ಯವಾಗಿ ಕರ್ಮಾನುಷ್ಠಾನವು ಬೇಕಾಗುತ್ತದೆ. ಅದಕ್ಕಾಗಿಯೇ ವೇದವು ಜ್ಞಾನೋತ್ಪತ್ತಿಗೆ ಉಪಾಯವಾಗಿರುವಂಥ ಕರ್ಮಗಳನ್ನೂ ಹೇಳುತ್ತದೆ.

**ಭಾರತಿ :** ಬಯಕೆಗಳಿಲ್ಲದೆ ಕರ್ಮವು ಪ್ರವೃತ್ತವಾಗುವದಿಲ್ಲ. ಅಂಥ ಬಯಕೆಗಳನ್ನು ಕಾಮವೆಂದೂ ಅದೂ ಒಂದು ಪುರುಷಾರ್ಥವೆಂದೂ ಹೇಳಿರುವದೇಕೆ?

**ಆಚಾರ್ಯರು :** ಪರಮಪುರುಷಾರ್ಥದ ದೃಷ್ಟಿಯಿಂದ ಕಾಮವು ಪುರುಷಾರ್ಥವೆನಿಸುವದಿಲ್ಲ. ಆದರೆ ಕಾಮವಿಲ್ಲದೆ ಜಗದ್ವ್ಯಾಪಾರವಾಗಲಿ, ವ್ಯವಹಾರಗಳಾಗಲಿ ನಡೆಯುವದಿಲ್ಲವಾದ್ದರಿಂದ ಸ್ವೇಚ್ಛಾಪ್ರವೃತ್ತಿಗಿಂತಲೂ ಧರ್ಮಕ್ಕೆ

ವಿರೋಧವಲ್ಲದ ಕಾಮವು ಗ್ರಾಹ್ಯವೆಂದೇ ಶಾಸ್ತ್ರಗಳ ಅಭಿಪ್ರಾಯವಿದೆ. ಭಗವಂತನು ಕೂಡ ''ಧರ್ಮಕ್ಕೆ ವಿರೋಧವಲ್ಲದ ಕಾಮವು ನಾನೇ- ಎಂದು ಹೇಳಿರುತ್ತಾನೆ.

**ಭಾರತಿ :** ಹಾಗಾದರೆ ಕಾಮಶಾಸ್ತ್ರವೂ ಗ್ರಾಹ್ಯವೆಂದೇ ಆಗುವದರಿಂದ ಅದರ ಮೀಮಾಂಸೆಯನ್ನೂ ಮಾಡಬೇಕಲ್ಲವೆ?

**ಆಚಾರ್ಯರು :** ಮಾಡಬಹುದು. ಆದರೆ ಕಾಮಗಳನ್ನೇ ದಾಟಿರುವವರಿಗೆ ಅದು ಅವಶ್ಯವಾಗುವದಿಲ್ಲವಾದ್ದರಿಂದಲೂ ಕಾಮಗಳಲ್ಲಿ ವೈರಾಗ್ಯವುಂಟಾಗದೆ ಬ್ರಹ್ಮಜಿಜ್ಞಾಸೆಯೇ ಸಂಭವಿಸುವದಿಲ್ಲವಾದ್ದರಿಂದಲೂ ಮುಮುಕ್ಷುವಿಗಾಗಲಿ, ಮುಕ್ತನಿಗಾಗಲಿ ಕಾಮಶಾಸ್ತ್ರದ ಜಿಜ್ಞಾಸೆಯು ಬೇಕಿರುವದಿಲ್ಲ.

**ಭಾರತಿ :** ನಿಜ ; ಆದರೆ ಬ್ರಹ್ಮನಿಷ್ಠನು ಸರ್ವಜ್ಞನೆನಿಸಿರುವನೆಂದು ಶ್ರುತಿಗಳಲ್ಲಿ ಹೇಳಿದೆ. ಸರ್ವಜ್ಞನಾಗಬೇಕಾದರೆ ಸರ್ವವೂ ತಿಳಿದಿರಬೇಕಲ್ಲವೆ? ಸರ್ವದಲ್ಲಿ ಕಾಮಶಾಸ್ತ್ರವೂ ಅಡಕವಾಗಿದೆಯಲ್ಲವೆ?

**ಆಚಾರ್ಯರು :** ಹಾಗಾದರೆ ಸರ್ವಜ್ಞತ್ವದ ಅಭಿಪ್ರಾಯವನ್ನು- ಎಂದರೆ ಎಲ್ಲವೂ ತಿಳಿದಿರಬೇಕು. ಎಂಬುದನ್ನು- ಶರೀರಿಯಾದ ಒಬ್ಬ ಜೀವಿಯು ಜೀವನಾಗಿದ್ದುಕೊಂಡೇ ಎಲ್ಲ ಶಾಸ್ತ್ರಗಳನ್ನೂ ಬಲ್ಲವನಾಗಿರಬೇಕೆಂಬ ಮಟ್ಟದಿಂದ ಅರ್ಥಮಾಡಿದರೆ ಹೊಂದುವದಿಲ್ಲ. ಏಕೆಂದರೆ ಇನ್ನು ಮುಂದಿನ ಭವಿಷತ್ಕಾಲದಲ್ಲಿಯೂ ಭೌತಿಕವಿಜ್ಞಾನಿಗಳು ಕಂಡುಹಿಡಿಯಬಹುದಾದ ವಿಷಯಗಳೆಲ್ಲವೂ ಈಗಾಗಲೇ ಸರ್ವಜ್ಞನಿಗೆ ತಿಳಿದಿರಬೇಕೆಂದಾಗುವದು. ಇದು ಹೇಗೆ ಸಾಧ್ಯ?

**ಭಾರತಿ :** ಹಾಗದರೆ ಸರ್ವಜ್ಞತ್ವ, ಸಕಲಕಾಮಾವಾಪ್ತಿ- ಎಂಬಿವು ಕೇವಲ ಮಾತುಗಳೆ ? ಇವೆಲ್ಲ ಜ್ಞಾನಿಯ ಸ್ತುತಿಮಾತ್ರವೆ?

**ಆಚಾರ್ಯರು :** ಹಾಗಲ್ಲ. ದೇಶಕಾಲಾತೀತವಾದ ಬ್ರಹ್ಮವನ್ನರಿತವನಿಗೆ ಬ್ರಹ್ಮದಲ್ಲಿಯೇ ಎಲ್ಲವೂ ಇದ್ದುಕೊಂಡಿರವದೆಂಬ ತಿಳಿವಳಿಕೆಯಿರುವದು. ಆತ್ಮಜ್ಞಾನಿಗೆ ತನ್ನ ಆತ್ಮನೆಂಬವನು ಸರ್ವರ ಆತ್ಮನೂ ಆಗಿರುವನು- ಎಂಬ ದೃಢ ನಿಶ್ಚಯವಿರುವದರಿಂದ ಯಾರುಯಾರು ಯಾವ ಕಾಲದಲ್ಲೇ ಆಗಲಿ- ಏನೇನು ಅರಿತುಕೊಂಡರೂ ಅನುಭವಿಸಿದರೂ ಅವರೆಲ್ಲರೂ ಆತ್ಮರಾಗಿದ್ದುಕೊಂಡೇ ಅನುಭವಿಸುವದರಿಂದ ಅಂಥ ಸರ್ವಾತ್ಮನೇ ಜ್ಞಾನಿಯ ಆತ್ಮನಾದ್ದರಿಂದ ಜ್ಞಾನಿಯೇ ಎಲ್ಲವನ್ನೂ ಅರಿತು ಅನುಭವಿಸಿದಂತಾಯಿತಲ್ಲವೆ?

**ಭಾರತಿ :** ಉದಾಹರಣೆಯಿಂದ ಈ ವಿಷಯವನ್ನು ಸ್ಪಷ್ಟಪಡಿಸುವಿರಾ ?

**ಆಚಾರ್ಯರು :** ಆಗಬಹುದು. ಒಬ್ಬ ಗೃಹಸ್ಥನು ತಾನು ಯಜಮಾನನೆಂದುಕೊಂಡು ಕುಟುಂಬವನ್ನೆಲ್ಲ ತನ್ನದೆಂದೂ ತಾನೆಂದೂ

ಭಾವಿಸಿಕೊಂಡಿರುವನಷ್ಟೆ? ಅವನ ಗೃಹದಲ್ಲಿ ದನಕರುಗಳಿದ್ದರೆ ಅವುಗಳಲ್ಲಿಯೂ ಅವನಿಗೆ ತನ್ನದೆಂಬ ಅಭಿಮಾನವಿದ್ದೇ ಇರುವದು. ನನ್ನ ದೇಹ- ಎಂದುಕೊಳ್ಳುವಂತೆಯೇ ನನ್ನ ಹಸು- ಎಂದೂ ಅವನು ವ್ಯವಹರಿಸುತ್ತಾನೆ. ಹಾಗೆಂದ ಮಾತ್ರಕ್ಕೆ ಅವನು ತನ್ನ ಬಾಯಿಂದಲೇ ಹುಲ್ಲು ತಿನ್ನಬೇಕೆಂದಾದೀತೆ? ಹಾಗೇನಿಲ್ಲ. ಹಸುವು ಅದರ ಬಾಯಿಂದ ಹುಲ್ಲು ತಿಂದು ತೃಪ್ತವಾದರೂ ಯಜಮಾನನು ತಾನು ತೃಪ್ತನಾದೆನೆಂದೇ ಕಂಡುಕೊಳ್ಳುವನು. ಹೀಗೆ ಪರಿಚ್ಛಿನ್ನದೇಹಾಭಿಮಾನದಿಂದ ಆತ್ಮನನ್ನು ಬಿಡಿಸಿಕೊಂಡು ಸಾರ್ವತ್ರಿಕ ವಾಗಿಸಿಕೊಳ್ಳುವದೇ ಜ್ಞಾನದ ಪ್ರಯೋಜನವು. 'ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ' ಎಂಬಿದರ ಅಭಿಪ್ರಾಯವೇ ಹೀಗಿದೆ.

**ಭಾರತಿ :** ಹಾಗಾದರೆ ಎಲ್ಲಾ ದೇಹಗಳಲ್ಲಿಯೂ ಆಗುವ ಅನುಭವಗಳೆಲ್ಲವೂ ಜ್ಞಾನಿಯ ಅನುಭವವೇ- ಎಂದು ನಿಮ್ಮ ಅಭಿಪ್ರಾಯವೆ?

**ಆಚಾರ್ಯರು :** ಯಾವನಿಗೆ ಹಾಗೆ ಸಮಸ್ತದೇಹಗಳಲ್ಲಿಯೂ ಇರುವ ಆತ್ಮನು ಒಬ್ಬನೇ ; ಆ ಆತ್ಮನೇ ತಾನು- ಎಂಬ ನಿಶ್ಚಯವಿರುವದೋ ಅಂಥವನ ದೃಷ್ಟಿಯಿಂದ ಹಾಗೆಯೇ ಸರಿ. ದೇಹಭೇದಗಳಾಗಲಿ ಆಯಾ ದೇಹಕ್ಕೆ ಮಾತ್ರ ಅನ್ವಯಿಸುವ ವೈಯಕ್ತಿಕ ಅನುಭವಗಳಾಗಲಿ ಸರ್ವಾತ್ಮಜ್ಞಾನಿಗೆ - ಎಂದರೆ ಅವನ- ಪೂರ್ಣಾನುಭವಕ್ಕೆ ಎಂದಿಗೂ ಹೊರತಾದವುಗಳಲ್ಲ. **ಈ ಜ್ಞಾನವೆಂಬುದು ಎಲ್ಲಾ ಅವಸ್ಥೆಗಳನ್ನೂ ಎಲ್ಲಾ ಐಂದ್ರಿಯಿಕ, ಮಾನಸಿಕ, ಬೌದ್ಧಿಕ, ಯೌಗಿಕಾನುಭವಗಳನ್ನೂ ಮೀರಿರುವದಾಗಿಯೂ ಹಾಗೂ ಎಲ್ಲವನ್ನೂ ವ್ಯಾಪಿಸಿಕೊಂಡದ್ದಾಗಿಯೂ ಇರುವ ಅರಿವೆನಿಸಿರುವದು. ಇದು ವೃತ್ತಿರೂಪವಾದ ತಿಳಿವಳಿಕೆಯಲ್ಲ. ಜ್ಞಪ್ತಿ ಎಂಬ ಸಿದ್ಧಾನುಭವವು. ಇದಕ್ಕೆ ಪರಿಚ್ಛೇದವಿಲ್ಲ. ಇದರಲ್ಲಿ ವಿಭಾಗವಿಲ್ಲ; ದ್ವೈತವಿಲ್ಲ. ಇದು ಕಾಲದಲ್ಲಿಲ್ಲ. ಇದೇ ಬ್ರಹ್ಮವು - ಎಂದೇ ಶ್ರುತಿಗಳ ಅಭಿಪ್ರಾಯ.**

**ಭಾರತಿ :** ಇಂಥ ಅನುಭವವೊಂದಿದೆಯೆ?

**ಆಚಾರ್ಯರು :** ಇದೆಯೆ? ಎಂದು ಕೇಳುತ್ತಿರುವದಕ್ಕೂ ಈ ಅನುಭವವೇ ಆಧಾರವಾಗಿರುವದು. ನೀವು ಅದನ್ನು ಕೇವಲವಾಗಿ ಹಾಗೇ ಕಂಡುಕೊಂಡಲ್ಲಿ ದೃಢವಾಗುವದು.

**ಭಾರತಿ :** ನಾವು ಕೇವಲಾನುಭವರೂಪರಾಗಿಯೇ ಇದ್ದುಕೊಂಡಿರುವದು ಯಾವಾಗ?

**ಆಚಾರ್ಯರು :** ಯಾವಾಗಲೋ ಒಮ್ಮೆ ಹಾಗಿರುವೆವು- ಎಂಬುದೇ ಸರಿಯಲ್ಲ. ಏಕೆಂದರೆ ನಮ್ಮ ಸ್ವರೂಪವೇ ಆಗಿರುವ ಅನುಭವವು ನಮ್ಮನ್ನು

ಬಿಟ್ಟಿರುವದು ಹೇಗಾದೀತು? ಅಥವಾ ಅನುಭವವನ್ನು ಬಿಟ್ಟು ನಾವಾದರೂ ಹೇಗೆ ಇರಬಲ್ಲೆವು? ಆದ್ದರಿಂದ ಉಪಾಧಿಗಳ ಸಂಪರ್ಕವಿಲ್ಲದ ನಾವೇ ನಾವಾದ ಅನುಭವವನ್ನು ಯಾವಾಗ ಗುರುತಿಸುವೆವೋ ಆಗ ನಮಗೆ ನಮ್ಮ ಸ್ವರೂಪದ ವಿಷಯದ ಎಲ್ಲಾ ಸಂಶಯಗಳೂ ನೀಗಿಬಿಡುತ್ತವೆ.

**ಭಾರತಿ :** ಅಪರಿಚ್ಛಿನ್ನ ಸ್ವರೂಪರೇ ನಾವಾದಾಗ 'ನಾನು' ಎಂಬುದು ಇಲ್ಲವಾಗುತ್ತದೆಯಲ್ಲ?

**ಆಚಾರ್ಯರು :** 'ನಾನು' ಎಂಬ ವಿಶೇಷವ್ಯವಹಾರವು ಇಲ್ಲವಾಗಬಹುದು. ಆದರೆ ತಾನು ತಾನಾಗಿರುವದಕ್ಕೇನೂ ಚ್ಯುತಿಯಿಲ್ಲ. ವ್ಯವಹಾರಗಳೂ ನಾಮರೂಪಗಳೂ ಆಗಂತುಕಗಳೇ ಹೊರತು ಅವು ಆತ್ಮಸ್ವಭಾವವಲ್ಲವಷ್ಟೆ!

**ಭಾರತಿ :** ಕೇವಲಾತ್ಮಾನುಭವವು ಹೇಗಿರುವದೆಂಬುದನ್ನು ವಿವರಿಸುವಿರಾ?

**ಆಚಾರ್ಯರು :** ಈ ವಿಷಯಕ್ಕೆ ಶ್ರುತಿಯ ಅಭಿಪ್ರಾಯವು ಹೀಗಿದೆ : ''ಈ ಜೀವಾತ್ಮನು ತನ್ನ ಉಪಾಧಿಗಳನ್ನೆಲ್ಲ ಕಳಚಿಕೊಂಡು ಪ್ರಾಜ್ಞಾತ್ಮನೊಡನೆ ಒಂದಾಗಿಬಿಡುವನಲ್ಲವೆ? ಅದೇ ಇವನ ಅಪಹತಪಾಪ್ಮವೂ ಅಭಯವೂ ಆಗಿರುವ ರೂಪವು. ಏಕೀಭಾವವೇ ಇದ್ದುಕೊಂಡಿರುವ ಇಂಥ ಅನುಭವವು ಸುಷುಪ್ತಿಯಲ್ಲಿ ಕಂಡುಬರುವದು. ಇದು ಸ್ವಾಭಾವಿಕವೂ ಸಾರ್ವತ್ರಿಕವೂ ಆಗಿದ್ದು ಎಲ್ಲಾ ಜೀವರುಗಳಿಗೂ ಸಮಾನವಾಗಿರುವದು. ಲೋಕದ ಜನರು ಕೂಡ ಇಂಥ ಸುಷುಪ್ತನನ್ನು 'ಸ್ವಪಿತಿ' ಎಂದೇ ಕರೆಯುವರು. ನಿದ್ರೆ ಮಾಡುತ್ತಿರುವವನನ್ನು ಬ್ರಹ್ಮೀಭೂತನಾಗಿರುವನು ; ಬ್ರಹ್ಮತ್ವವನ್ನು ಹೊಂದಿರುವನು- ಎಂದೇ ವ್ಯವಹರಿಸುತ್ತಾರೆ. ★ ಆದ್ದರಿಂದ ಪ್ರಾಜ್ಞಾತ್ಮನಾಗಿದ್ದುಕೊಂಡಿರುವದೇ ನಮ್ಮೆಲ್ಲರ ಸ್ವಭಾವವು. ಎಚ್ಚರಕನಸುಗಳಲ್ಲಿ ಮಾತ್ರ ಉಪಾಧಿಸಂಪರ್ಕದಿಂದ ಶೋಕ ಮೋಹಾದಿಗಳೂ ಜನನಮರಣಾದಿಗಳೂ ಕರ್ತೃತ್ವಭೋಕ್ತೃತ್ವಗಳೂ ನಮ್ಮ ಆತ್ಮನಲ್ಲಿ ಆಗಂತುಕವಾಗಿ ಕಂಡುಬರುವವು. ಸ್ವಾಭಾವಿಕಾವಸ್ಥೆಯಾದ ಸುಷುಪ್ತಿಯನ್ನು ವಿಚಾರಮಾಡಿದರೆ ಕೇವಲಾತ್ಮನ ಅನುಭವವು ಎಲ್ಲರಿಗೂ ವಶವಾಗುವದು.

**ಭಾರತಿ :** ಏಕೀಭಾವವೆಂದರೇನು?

**ಆಚಾರ್ಯರು :** ಅದನ್ನೂ ಲೌಕಿಕದೃಷ್ಟಾಂತದಿಂದ ಶ್ರುತಿಯೇ ವಿವರಿಸುತ್ತದೆ. ಹೇಗೆಂದರೆ : ಒಬ್ಬ ಕಾಮಿಯಾದ ಪುರುಷನು ತನಗೆ ಪ್ರಿಯಳಾದ ಹೆಂಗಸಿನೊಡನೆ ಆಲಿಂಗಿತನಾದಾಗ ಹೊರಗಾಗಲಿ, ಒಳಗಾಗಲಿ ಏನನ್ನೂ

---

★ ಆಚಾರ್ಯರ ಕಾಲಕ್ಕೆ ಹೀಗೆ ವ್ಯವಹಾರವಿತ್ತು- ಎಂಬುದಕ್ಕೆ ಬ್ರಹ್ಮಸೂತ್ರ ಭಾಷ್ಯ ೧-೩-೧೫ ಭಾಷ್ಯವಾಕ್ಯವು ಹೀಗಿದೆ : 'ಲೋಕೇಽಪಿ ಕಿಲ ಗಾಢಂ ಸುಷುಪ್ತಂ ಆಚಕ್ಷತೇ ಬ್ರಹ್ಮೀಭೂತಃ ಬ್ರಹ್ಮತಾಂ ಗತಃ ಇತಿ' ॥

ಅರಿಯನೋ- ಏಕೆಂದರೆ ಪರಿಷ್ವಂಗೋತ್ತರಕಾಲದಲ್ಲಿ ಏಕೀಭಾವವಾಗಿ ಬಿಡುವರಿಂದ ದ್ವೈತವನ್ನರಿಯದಿರುವನೋ ಹಾಗೆಯೇ ಜೀವಾತ್ಮನು ಪ್ರಾಜ್ಞಾತ್ಮನೊಡನೆ ಒಂದಾದಾಗ ಏನನ್ನೂ ಅರಿಯುವದಿಲ್ಲ. ಅರಿಯದೆ ಇರುವದಕ್ಕೇ ಏಕೀಭಾವವೇ ಕಾರಣವು. ಇದೇ ಆತ್ಮನ ಸ್ವರೂಪವು. ಮಾಂಡೂಕ್ಯಶ್ರುತಿಯು ಕೂಡ 'ಏಕೀಭೂತಃ ಪ್ರಜ್ಞಾನಘನಃ' ಎಂದೇ ತಿಳಿಸುತ್ತಿದೆ. ಏಕತ್ವವು ತಾನಾಗಿಯೇ ಸುಷುಪ್ತಿಯಲ್ಲಿ ಸಂಭವಿಸಿದರೂ ಮತ್ತೆ ಎಚ್ಚರವಾಗುವದರಿಂದ ಆತ್ಯಂತಿಕವಲ್ಲ ವಾಗಿದ್ದು ಮುಕ್ತಿಯೆನಿಸಿರುವದಿಲ್ಲ. ಆದರೆ ಜ್ಞಾನದಿಂದ ಏಕೀಭಾವವು ತಿಳಿದುಬಂದರೆ ಆತ್ಯಂತಿಕವೇ ಆಗಿ ಅದು ಮೋಕ್ಷವೆನಿಸುವದು.

(ಈ ಉತ್ತರವನ್ನು ಕೇಳಿದ ಭಾರತಿಗೆ ಆಚಾರ್ಯರನ್ನು ಕಾಮಶಾಸ್ತ್ರದಲ್ಲಿ ಸೋಲಿಸಿಯೇನೆಂಬ ಬಗ್ಗೆ ನಿರಾಶೆಯಾಯಿತು. ಏಕೆಂದರೆ ವೇದರಹಸ್ಯವನ್ನೇ ಬಲ್ಲ ಆಚಾರ್ಯರ ವಿಶಾಲಜ್ಞಾನದೃಷ್ಟಿಯಲ್ಲಿ ಕಾಮಶಾಸ್ತ್ರವು ಪ್ರತ್ಯೇಕವಾಗಿ ಉಳಿದಿಲ್ಲವೆಂದು ಅವಳಿಗೆ ಗೊತ್ತಾಯಿತು.)

**ಭಾರತಿ :** ಪೂಜ್ಯರೆ, ತಮ್ಮ ಉತ್ತರಗಳು ಅತ್ಯಂತಸಮಂಜಸವಾಗಿವೆ. ಆದರೆ ಬ್ರಹ್ಮವಿದನು ಸರ್ವಜ್ಞನೆನಿಸಬೇಕಾದರೆ ಎಲ್ಲಾ ವಿದ್ಯೆಗಳೂ ತಿಳಿದಿರಬೇಕೆಂಬ ನನ್ನ ಭಾವನೆಯು ಇನ್ನೂ ಪೂರ್ಣವಾಗಿ ಅಳಿಸಿಹೋಗಿಲ್ಲ. ಆದ್ದರಿಂದ ನಾನು ಅವಾಂತರ ಪ್ರಶ್ನೆಗಳನ್ನು ಪ್ರಾಸಂಗಿಕವಾಗಿ ಕೇಳಬಹುದೆ?

**ಆಚಾರ್ಯರು :** ಆಗಬಹುದು. ತಿಳಿದದ್ದನ್ನು ನಿಮ್ಮ ಮುಂದೆ ಮಂಡಿಸುವೆವು.

**ಭಾರತಿ :** ಅರವತ್ತುನಾಲ್ಕು ವಿದ್ಯೆಗಳಲ್ಲಿ 'ಪರಕಾಯಪ್ರವೇಶ' ವೆಂಬ ವಿದ್ಯೆಯೂ ಒಂದಿದೆಯಷ್ಟೆ; ಅದು ತಮಗೆ ವಶವಾಗಿದೆಯೆ?

**ಆಚಾರ್ಯರು :** ಬ್ರಹ್ಮವಿದ್ಯೆಯು ಸರ್ವವಿದ್ಯೆಗಳಿಗೂ ಪ್ರತಿಷ್ಠೆ (ಆಶ್ರಯ)ವು- ಎಂದು ಉಪನಿಷತ್ತುಗಳು ಮೊಳಗುತ್ತಿವೆ. ಆದ್ದರಿಂದ ಪರಕಾಯ ಪ್ರವೇಶವಿದ್ಯೆಯೂ ಅವಶ್ಯವಾಗಿ ಅದರಲ್ಲಿ ಅಡಕವಾಗಿಯೇ ಇದೆ. ಬ್ರಹ್ಮಜ್ಞಾನಿಗೆ ಯಾವಯಾವ ಲೋಕಗಳಿಗೆ ಬೇಕಾದರೂ ಹೋಗಿಬರುವ ಸಂಪೂರ್ಣ ಸ್ವಾತಂತ್ರ್ಯವೇ ಇದೆ. ಇದು ಕೇವಲ ಹೊಗಳಿಕೆಯಲ್ಲ- ಎಂಬುದನ್ನು ಬೇಕಾದರೆ ಈಗಲೇ ಅನುಭವಾರೂಢವಾಗಿ ತೋರಿಸಲೆ?

**ಭಾರತಿ :** ಆಗಲಿ ; ಸದ್ಯದಲ್ಲಿ ತಾವು ಪರಕಾಯಪ್ರವೇಶಸಿದ್ಧಿಯನ್ನು ತೋರಿಸಿದರೆ ನಾನು ಜಿತಳಾದೆನೆಂದೇ ಭಾವಿಸುವೆನು.

**ಆಚಾರ್ಯರು :** ಕೇಳಿರಿ. ಮಾನವನ ಪೂರ್ಣಾನುಭವವನ್ನು ವಿಚಾರಕ್ಕೆ ತೆಗೆದುಕೊಂಡರೆ ಎಲ್ಲಾ ಸಿದ್ಧಿಗಳೂ ಹೇಗೆ ಆತ್ಮಮೂಲವಾಗಿವೆ- ಎಂಬಿದು

ಗೊತ್ತಾದೀತು. ಈ ಸಂದರ್ಭದಲ್ಲಿಯೂ ಶ್ರುತ್ಯಾಧಾರದಿಂದಲೇ ವಿಷಯವನ್ನು ತಿಳಿಸುತ್ತೇನೆ. ಸಿದ್ಧಿಗಳೆಲ್ಲವೂ ದೇಶಕಾಲಗಳಿಗೆ ಒಳಪಟ್ಟೇ ಆಗುವವು. ದೇಶಕಾಲಗಳಾದರೊ, ಅವಸ್ಥಾಬದ್ಧವಾಗಿಯೇ ತೋರಿಕೊಳ್ಳುವವು. ಆದ್ದರಿಂದ ಅವಸ್ಥೆಗಳನ್ನು ವಿಚಾರಮಾಡಿದರೆ ಎಲ್ಲವನ್ನೂ ವಿಚಾರಿಸಿದಂತಾಗುವದು. ಅವಸ್ಥೆಗಳಾದರೊ, ಆತ್ಮನ ಬೆಳಕಿನಿಂದಲೇ ಇವೆ ಎನಿಸಿಕೊಂಡಿವೆ. ಆತ್ಮನಲ್ಲಿ ಮಾತ್ರ ಯಾವ ಅವಸ್ಥೆಗಳೂ ಇಲ್ಲ. ಇದು ಹಾಗಿರಲಿ ; ವ್ಯವಹಾರದೃಷ್ಟಿಯಿಂದ ನೋಡಿದಾಗ ಆತ್ಮನು ಎಚ್ಚರದಿಂದ ಕನಸಿಗೂ ಕನಸಿನಿಂದ ಎಚ್ಚರಕ್ಕೂ ಸಂಚರಿಸುವನಷ್ಟೆ ! ಎಚ್ಚರವನ್ನು ಅವನು ಬಿಡುವ ವೇಳೆಗೆ ಶ್ರುತಿಯು ತಿಳಿಸುವಂತೆ 'ಸ್ವಯಂ ವಿಹತ್ಯ ಸ್ವಯಂ ನಿರ್ಮಾಯ ಸ್ವೇನ ಭಾಸಾ ಸ್ವೇನ ಜ್ಯೋತಿಷಾ' ಎಂಬ ವಿವರದಂತೆ ತಾನೇ ಎಚ್ಚರವನ್ನಳಿಸಿ ಹಾಕಿ ತಾನೇ ಸ್ವಪ್ನವನ್ನು ಸೃಷ್ಟಿಸಿ ತನ್ನ ಬೆಳಕಿನಿಂದಲೇ ಬೆಳಗುತ್ತಾ ಸ್ವಪ್ನದಲ್ಲಿ ತಾನೇ ಎಲ್ಲವೂ ಆಗಿ ತೋರಿಕೊಳ್ಳುವನು. ಸ್ವಪ್ನಜೀವರುಗಳು ಎಷ್ಟುಮಂದಿ ತೋರಿಕೊಳ್ಳುವರೋ ಅವರಲ್ಲೆಲ್ಲ ಆತ್ಮನೊಬ್ಬನೇ ಪ್ರವೇಶಮಾಡಿರುವನಲ್ಲವೆ? ಇಂಥ ಪರಕಾಯಗಳ ಪ್ರವೇಶವು ಆತ್ಮನ ಸಿದ್ಧಿಗಳಲ್ಲವೆ? ಕನಸು ಯಾರಿಗೆ ಆಗುವದಿಲ್ಲ? ಕನಸಿಗೆ ಯಾರುತಾನೆ ತಮ್ಮ ಎಚ್ಚರದ ದೇಹಾದಿಗಳನ್ನು ಕೊಂಡೊಯ್ಯಲಾದೀತು? ಅಲ್ಲೆಲ್ಲ ಬೇರೊಂದು ದೇಹವನ್ನೇ ಧರಿಸಿ ನಾನು, ನನ್ನದು, ನನ್ನದಲ್ಲ- ಎಂಬ ಎಲ್ಲಾ ವ್ಯವಹಾರಗಳನ್ನೂ ನಡೆಸುತ್ತಾ ಸ್ವಯಂಜ್ಯೋತಿಯಾಗಿ ಬೆಳಗುತ್ತಿರುವ ಆತ್ಮನಿಗೆ ಪರಕಾಯಪ್ರವೇಶವು ಕಷ್ಟವೆ? ಆದ್ದರಿಂದ ಅವಸ್ಥಾತ್ರಯಸಾಕ್ಷಿಯಾದ ಆತ್ಮನೇ ತಾನೆಂದು ಈಗಲೇ ಇಲ್ಲಿಯೇ ಕಂಡುಕೊಂಡವನು ಯಾವ ಸಿದ್ಧಿಗಳಿಗೂ ಮರುಳಾಗುವದಿಲ್ಲ. ಅಂಥವನಿಗೆ ತಾನು ಪರಕಾಯಪ್ರವೇಶಮಾಡಬೇಕೆಂಬ ಬಯಕೆಯಾಗಲಿ ಸಿದ್ಧಿಗಳ ಪ್ರದರ್ಶನದ ಹುಚ್ಚಾಗಲಿ ಇರುವದೇ ಇಲ್ಲ. ನೀವು ಸರ್ವಜ್ಞತೆಯ ವಿಷಯಕ್ಕೆ ಸರ್ವವೂ ಆಗಿರುವ ಆತ್ಮನನ್ನು ಕಂಡುಕೊಳ್ಳುವದೇ ಅದರ ತಿರುಳು ಎಂಬುದನ್ನು ದೃಢಪಡಿಸಿಕೊಳ್ಳಬೇಕು. ಆಗ ನಿಮಗೆ ತೃಪ್ತಿಯಾಗುವದು.

**ಭಾರತಿ :** ಆತ್ಮನನ್ನರಿತರೆ ಎಲ್ಲವನ್ನೂ ಅರಿತಂತಾಗುವದೆ?

**ಆಚಾರ್ಯರು :** ಇದು ನಾನು ಹೇಳುವ ಮಾತಲ್ಲ. ವಾಗೀಶ್ವರಿಯಾದ

ಶ್ರುತಿಯೇ ಹೇಳುವ ಮಾತಾಗಿದೆ. ನೀವು ನಿಮ್ಮ ನಿಜಸ್ವರೂಪವಾದ ವಾಗ್ದೇವಿಯ ತತ್ತ್ವವನ್ನು ಮರೆಮಾಡಿಕೊಂಡು 'ಭಾರತಿ'ಯೆನಿಸಿ ಮಾಯಾಮನುಷ್ಯಳಾಗಿ ಈಗ ವ್ಯವಹರಿಸುತ್ತಿರುವಿರಿ. ಇದನ್ನು ನಾನು ಬಲ್ಲೆ. ಪರಮಾರ್ಥವಾದ ನಿಮ್ಮ ಸ್ವರೂಪವು ಶ್ರುತಿಗಳಿಗೆಲ್ಲ ಮಾತೆಯಾಗಿದ್ದುಕೊಂಡಿರುವದು. ಶ್ರುತಿಯೇ ಏಕವಿಜ್ಞಾನದಿಂದ ಸರ್ವವಿಜ್ಞಾನವಾಗುವದೆಂದು ಹೇಳುತ್ತಿರುವದು ನಿಮಗೆ ತಿಳಿಯದ ವಿಷಯವೇನಲ್ಲ.

ಹೀಗೆ ಆಚಾರ್ಯರು ಭಾರತಿಗೆ ಆಕೆಯ ಮೂಲಸ್ವರೂಪವನ್ನು ನೆನಪು ಮಾಡಿಕೊಡಲಾಗಿ ಅವಳು ಹೀಗೆಂದಳು :

**ತ್ವಯಾ ಯದಾವಾಂ ವಿಜಿತೌ ಪರಾತ್ಮನ್**
**ನ ತತ್ ತ್ರಪಾಮಾವಹತೀಡ್ಯ ಸರ್ವಥಾ ।**
**ಕೃತಾಭಿಭೂತಿರ್ನ ಮಯೂಖಶಾಲಿನಾ**
**ನಿಶಾಕರಾದೇರಪಕೀರ್ತಯೇ ಖಲು ॥**

''ಎಲೈ ಪರಬ್ರಹ್ಮರೂಪರೆ, ನಿಮ್ಮಿಂದ ನಾವಿಬ್ಬರೂ ಪರಾಜಿತರಾದುದೇನೂ ನಾಚಿಕೆಯ ವಿಷಯವಲ್ಲ. ಹಾಗೆಂದು ನಾನು ಭಾವಿಸಿಯೂ ಇಲ್ಲ. ಸೂರ್ಯನ ಬೆಳಕಿನಿಂದ ಚಂದ್ರನು ಮಂಕಾಗಿ ಸೋತರೆ ಅದೇನೂ ಅಪಕೀರ್ತಿಗೆ ಕಾರಣವಲ್ಲ'' ಹೀಗೆಂದು ನುಡಿಯುತ್ತಾ ಬ್ರಹ್ಮಲೋಕಕ್ಕೆ ಹೊರಡಲು ಆಚಾರ್ಯರ ಅನುಮತಿಯನ್ನು ಕೇಳಿದಳು. ಆಗ ಆಚಾರ್ಯರು ಆಕೆಯನ್ನು ದೇವತೆಯಾಗಿ ಕಂಡುಕೊಂಡು ಸ್ತೋತ್ರಮಾಡಿದರು.

**ಜಾನಾಮಿ ತ್ವಾಂ ದೇವಿ ದೇವಸ್ಯ ಧಾತುಃ**
**ಭಾರ್ಯಾಮಿಷ್ಟಾಮಷ್ಟಮೂರ್ತೇಃ ಸಗರ್ಭ್ಯಾಮ್ ।**
**ವಾಚಾಮಾದ್ಯಾಂ ದೇವತಾಂ ವಿಶ್ವಗುಪ್ತ್ಯೈ**
**ಚಿನ್ಮಾತ್ರಾಮಪ್ಯಾತ್ತಲಕ್ಷ್ಮ್ಯಾದಿರೂಪಾಮ್ ॥**

**ತಸ್ಮಾದಸ್ಮತ್ಕಲ್ಪಿತೇಷ್ವರ್ಚ್ಯಮಾನಾ**
**ಸ್ಥಾನೇಷು ತ್ವಂ ಶಾರದಾಖ್ಯಾ ದಿಶಂತೀ ।**
**ಇಷ್ಟಾನರ್ಥಾನ್ಋಷ್ಯಶೃಂಗಾದಿಕೇಷು**
**ಕ್ಷೇತ್ರೇಷ್ವಾಸ್ಸ್ವ ಪ್ರಾಪ್ತಸತ್ಸನ್ನಿಧಾನಾ ॥**

''ಎಲೌ ದೇವಿಯೆ, ನೀನು ಅಷ್ಟಮೂರ್ತಿಯಾದ ಶಿವನ ಸಹೋದರಿಯೂ ಬ್ರಹ್ಮದೇವನ ಪತ್ನಿಯೂ ಆಗಿರುವೆ. ವಾಕ್ಕುಗಳಿಗೆಲ್ಲ ನೀನು ಒಡೆಯಳು. ಸ್ವರೂಪದಿಂದ ಚಿನ್ಮಾತ್ರಳೇ ಆಗಿದ್ದರೂ ಜಗತ್ತನ್ನು ಕಾಪಾಡುವದಕ್ಕಾಗಿ ಲಕ್ಷ್ಮಿ - ಮುಂತಾದ ರೂಪಗಳನ್ನು ಧರಿಸಿರುವೆ. ಹೀಗೆಂದು ನಾನು ಬಲ್ಲೆನು. ಆದ್ದರಿಂದ ನಾವು. ಇನ್ನು ಮುಂದೆ ಸ್ಥಾಪಿಸಲಿರುವ ಪೀಠಗಳಲ್ಲಿ ನೀನು 'ಶಾರದೆ' ಎಂಬ ಹೆಸರಿನಿಂದ

ಪೂಜಿಸಲ್ಪಡುವವಳಾಗಿ ಭಕ್ತರಿಗೆ ಇಷ್ಟಾರ್ಥಗಳನ್ನು ದಯಪಾಲಿಸುತ್ತಾ ಋಷ್ಯಶೃಂಗವೇ ಮುಂತಾದ ಕ್ಷೇತ್ರಗಳಲ್ಲಿ ನಿನ್ನ ಸಾಂನಿಧ್ಯವನ್ನಿರಿಸಿ ಸದಾಕಾಲವೂ ಇದ್ದುಕೊಂಡಿರುವವಳಾಗು. ಈ ವರವನ್ನು ನಮಗೆ ಅನುಗ್ರಹಿಸಿ ನೀನು ಮೂಲಸ್ಥಾನಕ್ಕೆ ದಯಮಾಡಿಸಬೇಕು''- ಎಂದು ಪ್ರಾರ್ಥಿಸಿದರು. ಕೂಡಲೆ ದೇವಿಯು ಆಚಾರ್ಯರಿಗೆ ಆ ವರವನ್ನಿತ್ತು ಅಂತರ್ಧಾನಳಾಗಿಬಿಟ್ಟಳು. ಈ ಆಶ್ಚರ್ಯವನ್ನು ಮಂಡನಮಿಶ್ರನೂ ಕಂಡು ವಿಸ್ಮಿತನಾದನು. ಆಚಾರ್ಯರ ಮಂತ್ರಸಿದ್ಧಿಯನ್ನಾಗಲಿ, ದೇವತಾಸಾಕ್ಷಾತ್ಕಾರವನ್ನಾಗಲಿ, ಬ್ರಹ್ಮವಿದ್ಯೆಯ ಮಜಲನ್ನಾಗಲಿ, ಲೋಕೋಪಕಾರ ಬುದ್ಧಿಯನ್ನಾಗಲಿ, ಜೀವನ್ಮುಕ್ತ ಸ್ಥಿತಿಯನ್ನಾಗಲಿ ಹುಲುಮಾನವರಾದ ನಾವು ಹೊಗಳಿ ಪೂರೈಸಲಾದೀತೆ? ಇಂಥ ಸರ್ವಜ್ಞ ಮೂರ್ತಿಗಳೂ ಈಶ್ವರಾತ್ಮರೂ ಆದ ಶಂಕರಭಗವತ್ಪಾದರನ್ನು ಏನೆಂದು ವರ್ಣಿಸೋಣ? 'ಶಂಕರಾರ್ಯಸಮೋ ದೇವ್ಹೋ ನ ಭೂತೋ ನ ಭವಿಷ್ಯತಿ' ಎಂದು ನೆನೆಯುತ್ತಾ ಅವರ ಪಾದಗಳಿಗೆ ಮಣಿಯೋಣ.

## ಮಂಡನಮಿಶ್ರನಿಗೆ ಸಂನ್ಯಾಸಾನುಗ್ರಹ :

ಅನಂತರ ಮಂಡನಮಿಶ್ರನು ತನ್ನ ಸೋಲನ್ನು ಒಪ್ಪಿಕೊಂಡು ವಾದದ ಪ್ರಾರಂಭದಲ್ಲಿಯೇ ಗೊತ್ತುಮಾಡಲ್ಪಟ್ಟಿದ್ದ ಪಣದಂತೆ ಆಚಾರ್ಯರಿಗೆ ಶರಣಾಗತನಾಗಿ ಸಂನ್ಯಾಸದೀಕ್ಷೆಯನ್ನು ಅನುಗ್ರಹಿಸುವಂತೆ ಬೇಡಿಕೊಂಡನು. ಆಗ ಗುರುಗಳು ಆತನಿಗೆ ವಿಧ್ಯುಕ್ತವಾದ ಸಂನ್ಯಾಸವನ್ನು ನೀಡಿದರು. 'ಸುರೇಶ್ವರಾಚಾರ್ಯ' ಎಂಬ ಯೋಗಪಟ್ಟವನ್ನು ಅನುಗ್ರಹಿಸಿ ಎರಡನೆಯ ಶಿಷ್ಯನನ್ನಾಗಿ ಮಾಡಿಕೊಂಡರು. ಸಂನ್ಯಾಸವಿಧಿನಿಯಮಗಳು ಪೂರೈಸಿದ ಮೇಲೆ ಆತನಿಗೆ ಬ್ರಹ್ಮೋಪದೇಶವನ್ನು ಮಹಾವಾಕ್ಯಗಳ ಅರ್ಥವಿವರಣೆಯೊಡನೆ ಮಾಡಿದರು. ಇಂಥ ಸಂಸ್ಕಾರವು ಸದ್ಗುರುವಿನಿಂದ ಶಿಷ್ಯನಿಗೆ ದೊರಕಲು ಜನ್ಮಾಂತರಗಳ ಪುಣ್ಯವಿಶೇಷವೇ ಬೇಕು. ಆತ್ಮನು ಅಸಂಗನೂ ಶುದ್ಧನೂ ಸ್ಥಾನತ್ರಯ ವ್ಯತಿರಿಕ್ತನೂ ಆಗಿರುವನೆಂಬುದನ್ನೂ ಅಂಥ ಆತ್ಮಸ್ವರೂಪನೇ ನೀನು- ಎಂಬಿದನ್ನೂ ಅವಸ್ಥಾತ್ರಯಮಹಾತರ್ಕದಿಂದಲೂ ತತ್ತ್ವಮಸಿವಾಕ್ಯಾರ್ಥ ವಿವರಣೆಯಿಂದಲೂ ವಿವರಿಸಿ ತಿಳಿಸಿದರು. ಈ ಸಂದರ್ಭದಲ್ಲಿ ಒಂದೆರಡು ಶ್ಲೋಕಗಳನ್ನು ಉದಾಹರಿಸಲಿಚ್ಛಿಸುವೆನು ;

**ನೇತಿ ನೇತ್ಯಾದಿ ನಿಗಮವಚನೇನ**
**ನಿಪುಣಂ ನಿಷಿಧ್ಯ ಮೂರ್ತಾಮೂರ್ತರಾಶಿಮ್ ।**
**ಯದಶಕ್ಯನಿಹ್ನವಂ ಸ್ವಾತ್ಮರೂಪತಯಾ**
**ಜಾನಂತಿ ಕೋವಿದಾಸ್ತತ್ತ್ವಮಸಿ ತತ್ತ್ವಮ್ ॥**

''ನೇತಿ, ನೇತಿ- ಎಂಬ ಶ್ರುತಿವಾಕ್ಯದಿಂದ ಮೂರ್ತಾಮೂರ್ತ ಪ್ರಪಂಚ ವನ್ನೆಲ್ಲ ನಿಷೇಧಮಾಡಿ ಇನ್ನು ತಾನೇ (ಆತ್ಮರೂಪವಾಗಿದ್ದು ಕೊಂಡಿರುವದರಿಂದ) ಎಂದರೆ ನಿಷೇಧಕನ ಆತ್ಮವೇ ಆಗಿದ್ದು ನಿಷೇಧ ಮಾಡಲಾಗದೆ ಇದೆಯೋ- ಜಾಣರು

ಆ ಸ್ವರೂಪವನ್ನು ತಮ್ಮ ಆತ್ಮನಾಗಿಯೇ ಕಂಡುಕೊಂಡಿರುವರೋ ಆ ಪರಬ್ರಹ್ಮತತ್ತ್ವವೇ ನೀನಾಗಿರುವೆ.''

**ಪುರುಷ ಏವೇದಮಿತ್ಯಾದಿವೇದೇಷು**
**ಸರ್ವಕಾರಣತಯಾ ಯಸ್ಯ ಸಾರ್ವಾತ್ಮ್ಯಮ್ ।**
**ಹಾಟಕಸ್ಯೇವ ಮುಕುಟಾದಿತಾದಾತ್ಮ್ಯಂ**
**ಸರಸಮಾಮ್ನಾಯತೇ ತತ್ತ್ವಮಸಿ ತತ್ತ್ವಮ್ ॥**

''ಇದೆಲ್ಲವೂ ಪುರುಷನೇ- ಎಂದು ವೇದಗಳಲ್ಲಿ ಯಾವ ಪರಬ್ರಹ್ಮಕ್ಕೆ ಸರ್ವಾತ್ಮತ್ವಕಾರಣತ್ವಗಳನ್ನು- ಹೇಗೆ ಚಿನ್ನವೊಂದೇ ಕಿರೀಟವೇ ಮೊದಲಾದ ವಿಕಾರ (ಕಾರ್ಯ)ಗಳಾಗಿ ತೋರುವಂತೆ ಎಂಬುದಾಗಿ- ಹೇಳಿರುತ್ತದೆಯೋ ಅಂಥ ಪರಬ್ರಹ್ಮತತ್ತ್ವವೇ ನಿನಾಗಿರುವೆ''- ಎಂದು ಪರಬ್ರಹ್ಮತತ್ತ್ವೋಪದೇಶವನ್ನು ಮಾಡಿದರು.

ಅನಂತರ ಗುರುಸನ್ನಿಧಿಯಲ್ಲಿ ಶಿಷ್ಯನು ಹೇಗೆ ನಡೆದುಕೊಳ್ಳಬೇಕೆಂಬುದನ್ನೂ ಸನಾತನಸಂಪ್ರದಾಯವನ್ನೂ ಬೋಧಿಸಿದರು. ಅದರ ಸಾರವು ಹೀಗಿದೆ : 'ಶಿಷ್ಯನು ಯಾವಾಗಲೂ ಗುರುವಿನ ಮನಸ್ಸನ್ನು ಅರಿತು ಅದರಂತೆ ನಡೆಯಬೇಕು. ಅವನ ಇಚ್ಛೆಗೆ ವಿರುದ್ಧವಾಗಿ ವರ್ತಿಸಬಾರದು. ಶುಶ್ರೂಷೆಯಿಂದ ಗುರುವನ್ನು ಸಂತೋಷಗೊಳಿಸಿದ್ದೇ ಆದರೆ ಗುರುವು ತನ್ನ ಕರುಣಾದೃಷ್ಟಿಯನ್ನು ಶಿಷ್ಯನ ಕಡೆಗೆ ಹರಿಯಿಸುವನು. ಅದೇ ಕಲ್ಪವಲ್ಲಿಯೆಂದು ಶಿಷ್ಯನು ತಿಳಿಯಬೇಕು. ಅದರ ಬಲದಿಂದ ಎಲ್ಲಾ ಕೋರಿಕೆಗಳೂ ನೆರವೇರುವವು. ಶಿಷ್ಯನಿಗೆ ಇರುವ ಬಲವೆಂದರೆ ಈ ಗುರುಬಲವೇ ಹೊರತು ಪಂಚಾಂಗದಿಂದ ಕಂಡುಕೊಳ್ಳುವ ಗುರುಬಲವಲ್ಲ. ಒಂದುವೇಳೆ ಗುರುವೇ ಉಪದೇಶಿಸಿದವಿದ್ಯೆಯಂತೆ ಉಪಾಸನೆಮಾಡಿದ ಆರಾಧ್ಯದೇವತೆಯು ಕಾರಣಾಂತರದಿಂದ ಕೋಪಗೊಂಡರೂ ಗುರುವು ರಕ್ಷಕನಾಗಿ ಬೆನ್ನು ಹಿಂದೆ ಇದ್ದು ಬಿಟ್ಟರೆ ಆ ದೇವತೆಯೂ ಏನೂ ಮಾಡಲಾರಳು. ಆದರೆ ಗುರುವೇ ಕುಪಿತನಾದರೆ ಮಾತ್ರ ತ್ರಿಮೂರ್ತಿಗಳೂ ಕಾಪಾಡಲಾರರು. ಹೀಗಿದೆ- ಗುರುಭಕ್ತಿಯ ಮಹಿಮೆ ! ಗುರುವು ಹೇಳಿದ್ದೆಲ್ಲ ಅನುಷ್ಠೇಯವೇ. ಆತನು ಪ್ರತಿಷಿದ್ಧವಾದದ್ದನ್ನು ಎಂದಿಗೂ ಹೇಳುವದೇ ಇಲ್ಲ. ಆದ್ದರಿಂದ ದೇವತಾರಾಧನೆಯ ಫಲವಾಗಿ ದೇವತೆಯು ವರಗಳನ್ನಿತ್ತರೆ ಅದು ಗುರುವೇ ಕೊಡಿಸಿರುವ ಕೊಡುಗೆಯಾಗಿರುವದು. ಏಕೆಂದರೆ ಗುರುವು ಮಂತ್ರೋಪದೇಶವನ್ನು ಕೊಡದೆಇದ್ದರೆ ದೇವತೆಯನ್ನು ಉಪಾಸಿಸುವದಾದರೂ ಹೇಗಾದೀತು? ಹೀಗೆ ಸಕಲದೇವತೆಗಳಿಗೂ ಮಿಗಿಲಾದ ಸದ್ಗುರುವು ಸಾಕ್ಷಾತ್‌ಪರಬ್ರಹ್ಮವೇ ಆಗಿರುವನು. ಗುರುಭಕ್ತಿಯೇ ಮೋಕ್ಷಮೂಲವಾಗಿರುವದು.' ಹೀಗೆ ಉಪದೇಶಿಸಿದ ಆಚಾರ್ಯರು ಮುಂದೆ ಶಿಷ್ಯಪರಿವಾರಸಮೇತರಾಗಿ ಶ್ರೀಶೈಲಕ್ಷೇತ್ರದ ಕಡೆಗೆ ಹೊರಟರು.

---

## ೩. ಕಾಪಾಲಿಕವಿಜಯ

**ಶ್ರೀಶೈಲಕ್ಷೇತ್ರವಾಸ :**

ಮಾಹೀಷ್ಮತಿಯಿಂದ ದಕ್ಷಿಣಾಭಿಮುಖವಾಗಿ ಹೊರಟ ಆಚಾರ್ಯರು ದುರ್ಗಮವಾದ ವನಗಳಿಂದಲೂ ನೀರಿನ ಝರಿಗಳಿಂದಲೂ ಕೂಡಿ ಮನೋಹರ ವಾಗಿದ್ದ ಶ್ರೀಶೈಲಪರ್ವತಕ್ಕೆ ಬಂದರು. ಆ ಪ್ರದೇಶವೆಲ್ಲವೂ ಆನೆ, ಸಿಂಹ - ಮುಂತಾದ ವನ್ಯ ಪ್ರಾಣಿಗಳಿಂದ ನಿಬಿಡವಾಗಿತ್ತು. ಕಾಪಾಲಿಕರೆಂಬ ಹೆಸರಿನ ಶಿವಾರಾಧಕರು ಹಾಗೂ ಸಾಧಕರು ಆ ಪ್ರದೇಶದಲ್ಲಿ ಹೆಚ್ಚಾಗಿ ನೆಲಸಿದ್ದರು. ಅವರುಗಳು ವೈದಿಕಮಾರ್ಗವಿರೋಧಿಗಳೂ ಆಗಿದ್ದರು. ಇಂಥ ದೇಶದಲ್ಲಿರುವ, ಎತ್ತರವಾದ ಬೆಟ್ಟದ ಮೇಲೆ ನೆಲೆಸಿದ್ದ 'ಮಲ್ಲಿಕಾರ್ಜುನ' ನೆಂಬ ಹೆಸರಿನ ದಿವ್ಯ ಜ್ಯೋತಿರ್ಲಿಂಗ ರೂಪಿಯಾದ ಪರಮೇಶ್ವರನನ್ನು ದರ್ಶನಮಾಡುವದಕ್ಕಾಗಿ ಆಚಾರ್ಯರು ಶಿಷ್ಯರೊಡಗೂಡಿ ಆ ಕ್ಷೇತ್ರಕ್ಕೆ ಬಂದರು. ಅಲ್ಲಿದ್ದ ಪಾತಾಳಗಂಗಾ ತೀರ್ಥದಲ್ಲಿ ಸ್ನಾನಮಾಡಿದರು. ಭಗವಾನ್ ಮಲ್ಲಿಕಾರ್ಜುನೇಶ್ವರನನ್ನು ಕಂಡು ಹೀಗೆ ಸ್ತುತಿಸಿದರು:-

**ಸಂಧ್ಯಾರಂಭವಿಜೃಂಭಿತಂ ಶ್ರುತಿಶಿರಃಸ್ಥಾನಾಂತರಾಧಿಷ್ಠಿತಂ**
**ಸಪ್ರೇಮಭ್ರಮರಾಭಿರಾಮಮಸಕೃತ್ ಸದ್ವಾಸನಾಶೋಭಿತಮ್।**
**ಭೋಗೀಂದ್ರಾಭರಣಂ ಸಮಸ್ತಸುಮನಃಪೂಜ್ಯಂ ಗುಣಾವಿಷ್ಕೃತಂ**
**ಸೇವೇ ಶ್ರೀ ಗಿರಿಮಲ್ಲಿಕಾರ್ಜುನ ಮಹಾಲಿಂಗಂ ಶಿವಾಲಿಂಗಿತಮ್ ॥**

''ಸಂಧ್ಯಾಕಾಲದ ಆರಂಭದಲ್ಲಿ ವಿಜೃಂಭಣೆಯಿಂದ ತೋರುವ, ಉಪನಿಷತ್ತುಗಳೆಂಬ ಸ್ಥಾನದಲ್ಲಿ ನೆಲಸಿರುವ, ಪ್ರೇಮದಿಂದೊಡಗೂಡಿದ ಭ್ರಮರಾಂಬಿಕೆಯಿಂದೊಪ್ಪುತ್ತಿರುವ, ಸದ್ವಾಸನೆಗಳಿಂದ ಅಲಂಕೃತವಾಗಿರುವ, ಸರ್ಪಶ್ರೇಷ್ಠನೆಂಬ ಆಭರಣವುಳ್ಳ, ಸಮಸ್ತದೇವತೆಗಳಿಂದ ಪೂಜಿತನಾಗಿರುವ, ಕಲ್ಯಾಣ ಗುಣಗಳಿಂದ ಹೊರತೋರುವ, ಪಾರ್ವತಿಯಿಂದ ಆಲಿಂಗಿತನಾಗಿರುವ ಶ್ರೀಶೈಲದ ಮಲ್ಲಿಕಾರ್ಜುನರೂಪಿಯಾಗಿರುವ ಶಿವನನ್ನು ಭಜಿಸುತ್ತೇನೆ.'' ಹೀಗೆ ಸ್ತುತಿಸಿದ ಅನಂತರ ಭ್ರಮರಾಂಬೆಯನ್ನು ಸಂದರ್ಶಿಸಿ ಹೀಗೆ ಹೊಗಳಿದರು :

ಗಾಯತ್ರೀಂ ಗರುಡಧ್ವಜಾಂ ಗಗನಗಾಂ ಗಾಂಧರ್ವಗಾನಪ್ರಿಯಾಂ
ಗಂಭೀರಾಂ ಗಜಗಾಮಿನೀಂ ಗಿರಿಸುತಾಂ ಗಂಧಾಕ್ಷತಾಲಂಕೃತಾಮ್ ।
ಗಂಗಾಗೌತಮಗರ್ಗಸನ್ನುತಪದಾಂ ಗಾಂ ಗೌತಮೀಂ ಗೋಮತೀಂ
ಶ್ರೀಶೈಲಸ್ಥಲವಾಸಿನೀಂ ಭಗವತೀಂ ಶ್ರೀಮಾತರಂ ಭಾವಯೇ ॥

''ಗಾಯತ್ರೀಸ್ವರೂಪಳೂ, ಗರುಡಧ್ವಜಳೂ, ಆಕಾಶಗಾಮಿನಿಯೂ, ಗಾಂಧರ್ವರ ಗಾನದಿಂದ ಆನಂದಿಸುವವಳೂ, ಗಂಭೀರಳೂ, ಆನೆಯಂತೆ ನಡಿಗೆಯುಳ್ಳವಳೂ ಹಿಮಾಚಲನ ಮಗಳೂ ಗಂಧ, ಅಕ್ಷತೆಗಳಿಂದ ಶೋಭಿತಳೂ ಗಂಗೆ, ಗೌತಮರು, ಗರ್ಗರು-ಗಳಿಂದ ನಮಸ್ಕರಿಸಲ್ಪಟ್ಟ ಪಾದಗಳುಳ್ಳವಳೂ, ಭೂರೂಪಳೂ, ಗೌತಮಿಯೂ ಆದ, ಶ್ರೀ ಶೈಲಸ್ಥಳದಲ್ಲಿ ನಿವಾಸಮಾಡುವ ಪೂಜ್ಯಳಾದ ಶ್ರೀಮಾತೆಯೆನಿಸಿದ (ಭ್ರಮರಾಂಬೆಯನ್ನು) ಚಿಂತಿಸುವೆನು''. ಹೀಗೆ ದೇವತಾದರ್ಶನದಿಂದ ಪುಳಕಿತರಾದ ಆಚಾರ್ಯರು ಕೆಲವು ಕಾಲ ತಪೋನಿಷ್ಠರಾಗಿ ಅಲ್ಲಿದ್ದುಕೊಂಡಿದ್ದರು.

## ಉಗ್ರಭೈರವನ ಸಮಾಗಮ :

ಒಮ್ಮೆ ಆಚಾರ್ಯರು ಶಿಷ್ಯರಿಗೆ ಪಾಠಪ್ರವಚನಗಳನ್ನು ಪೂರೈಸಿ ಒಬ್ಬರೇ ಕುಳಿತಿರುವಾಗ ಒಬ್ಬ ಕಾಪಾಲಿಕನು ಅವರ ಬಳಿಗೆ ಬಂದನು. ಆಚಾರ್ಯರ ಆಕಾರ, ಮುಖಭಾವ, ಸ್ವಭಾವಗಳಿಂದ ಬಹಳ ಆಕರ್ಷಿತನಾದ ಆತನು ತನ್ನ ಮನೋರಥವು ಪೂರ್ಣವಾಯಿತೆಂದೇ ಭಾವಿಸಿಕೊಂಡನು. ಮೆಲ್ಲನೆ ಆಚಾರ್ಯರನ್ನು ಕುರಿತು ''ಯತಿಗಳೆ, ನಿಮ್ಮ ಕಲ್ಯಾಣಗುಣಗಳನ್ನು ಕೇಳಿ ಮನಸೋತವನಾಗಿ ನಿಮ್ಮ ದರ್ಶನಕ್ಕಾಗಿ ಬಂದಿರುವೆನು. ನೀವು ಶೋಕಮೋಹಗಳನ್ನು ನೀಗಿಕೊಂಡಿರುವ ಮಹಾತ್ಮರು. ದೇಹಾಭಿಮಾನವಂತೂ ನಿಮಗೆ ಎಳ್ಳಷ್ಟೂ ಇರುವದಿಲ್ಲ. ಪರೋಪಕಾರಕ್ಕಾಗಿಯೇ ನೀವು ಶರೀರವನ್ನು ಭರಿಸಿರುವಿರಿ; ನಿಮ್ಮಂಥ ಗುಣಶಾಲಿಗಳಲ್ಲಿ ಬೇಡಿಕೆಯನ್ನು ಸಲ್ಲಿಸುವ ಯಾವನಾದರೂ ನಿರಾಶನಾಗಿ ಹಿಂದಿರುಗಲಾರನು. ಎಂಥ ಅಸಾಧ್ಯವಾದ ಕೊಡುಗೆಯನ್ನಾದರೂ ತಾವು ಇಲ್ಲವೆನ್ನಲಾರಿರಿ'' ಎಂದು ತಿಳಿಸಿದನು. ಆಚಾರ್ಯರು ಆತನ ವೇಷಭೂಷಣಗಳಿಂದ ಅವನು ಕಾಪಾಲಿಕನೆಂಬುದನ್ನು ತಿಳಿದುಕೊಂಡರು. 'ವಿದ್ವಾನ್ ನ ಬಿಭೇತಿ ಕುತಶ್ಚನ' ಎಂಬ ಶ್ರುತಿವಾಕ್ಯದಂತೆ ಪೂರ್ಣಜ್ಞಾನಿಗಳಾಗಿದ್ದ ಅವರಿಗೆ ಆತನಿಂದ ಯಾವ ಭಯವಾಗಲಿ ಉದ್ವೇಗವಾಗಲಿ ಉಂಟಾಗಲೇ ಇಲ್ಲ. ಒಳ್ಳೆಯ ಮಾತಿನಿಂದಲೇ ಅವನನ್ನು ''ಅಯ್ಯ, ನೀನು ಯಾರು? ನಿನ್ನ ಉದ್ದೇಶವೇನು? ನನ್ನಿಂದ ಏನಾದರೂ ಬಯಸಿರುವೆಯೊ?'' ಎಂದು ಕೇಳಿದರು. ಆಗ ಅವನು ಸಂಕೋಚವನ್ನು ಬಿಟ್ಟು ಹೀಗೆಂದನು. ''ಪೂಜ್ಯರೆ, ನನ್ನನ್ನು 'ಉಗ್ರಭೈರವ'ನೆಂದು ಕರೆಯುತ್ತಾರೆ. ನಾನು ಶಿವೋಪಾಸಕನು. ಪರಶಿವನನ್ನು ಕುರಿತು ತಪಸ್ಸು ಮಾಡಿದೆನು. ಭಗವಂತನು ಒಲಿದು 'ನಿನಗೇನು ಬೇಕು?' ಎಂದನು. ನಾನು

''ಇದೇ ಶರೀರದಿಂದ ಕೈಲಾಸಕ್ಕೆ ಬರಬೇಕು; ಹಾಗೆ ವರವನ್ನು ಕೊಡು'' ಎಂದು ಕೇಳಿಕೊಂಡೆನು. ಆಗ ಶಿವನು 'ನಿನ್ನ ಇಚ್ಛೆಯು ನೆರವೇರಬೇಕಾದರೆ ನೀನು ಒಂದು ಯಜ್ಞವನ್ನು ಕೈಗೊಂಡು ಅದರಲ್ಲಿ ಸಾಮ್ರಾಜ್ಯಪಟ್ಟಾಭಿಷಿಕ್ತನಾದ ಒಬ್ಬ ಮಹಾರಾಜನ ತಲೆಯನ್ನಾಗಲಿ, ಅಥವಾ ಸರ್ವಜ್ಞನಾದ ಒಬ್ಬ ಸಂನ್ಯಾಸಿಯ ತಲೆಯನ್ನಾಗಲಿ ಹೋಮಮಾಡುವೆಯಾದರೆ ನಿನ್ನ ಇಷ್ಟಾರ್ಥಸಿದ್ಧಿಯಾದೀತು' ಎಂದು ಹೇಳಿ ಅಂತರ್ಧಾನನಾದನು. ಮಹಾರಾಜನ ಶಿರಸ್ಸನ್ನು ಪಡೆಯುವದು ನನಗೆ ಕನಸಿನಲ್ಲಿಯೂ ಅಸಾಧ್ಯವೇ ಸರಿ. ಆದ್ದರಿಂದ ಶಿರಸ್ಸನ್ನು ಬೇಡಿ ನಿಮ್ಮಲ್ಲಿಗೆ ಬಂದಿರುವೆನು. ನೀವು ತಲೆಯನ್ನು ನನಗೆ ಕೊಡುವದಾದರೆ ಹೆಚ್ಚಿನ ಕೀರ್ತಿಯೇ ನಿಮ್ಮದಾಗುವದು. ಹೇಗೂ ನೀವು ವಿರಕ್ತರು. ನಿಮಗೆ ದೇಹಾಭಿಮಾನವೇನೂ ಇರುವದಿಲ್ಲ. ಆದ್ದರಿಂದ ನಿಮಗೆ ಬೇಡದ ತಲೆಯನ್ನು ನನಗೆ ಕೊಡಬಹುದಲ್ಲವೆ ? ದೇಹವು ಎಂದಿದ್ದರೂ ಬಿದ್ದು ಹೋಗುವ ವಸ್ತುವೇ ಆಗಿದೆ. ಅದು ಈಗ ಬೇರೊಬ್ಬರ ಉಪಯೋಗಕ್ಕಾಗಿ ಕೊಡಲ್ಪಟ್ಟರೆ ಸಾರ್ಥಕವೆನಿಸುವದು. ಎಂಥವರಿಗಾದರೂ ದೇಹವನ್ನು ಬಿಟ್ಟುಕೊಡುವದು ಕಷ್ಟವೇ ಆದರೂ ದಧೀಚಿ - ಮುಂತಾದ ಮಹರ್ಷಿಗಳು ಪರೋಪಕಾರಕ್ಕಾಗಿ ದೇಹವನ್ನು ಅರ್ಪಿಸಿದರೆಂಬುದು ಪುರಾಣಪ್ರಸಿದ್ಧವಾಗಿದೆ. ಆದ್ದರಿಂದ ನೀವು ಕೃಪೆಮಾಡಿ ನಿಮ್ಮ ದೇಹವನ್ನು ನನಗೆ ಕೊಡಿರಿ'' ಎಂದು ಕೇಳಿಕೊಂಡನು. ಬೇರೆಯವರಾಗಿದ್ದರೆ ಈ ಮಾತುಗಳಿಂದಲೇ ಹೆದರಿ ಮೂರ್ಛೆಹೋಗಿಬಿಡುತ್ತಿದ್ದರು. ಆದರೆ ಆಚಾರ್ಯರು ಸ್ವಲ್ಪವೂ ತಳಮಳಗೊಳ್ಳದೆ ಹೀಗೆಂದರು : ''ಅಯ್ಯ. ನೀನು ಕೇಳುವದು ಸರಿಯೆ. ಹಾಗೆ ಕೇಳಿದ್ದರಿಂದ ನಿನ್ನ ಮೇಲೆ ನನಗೇನೂ ದ್ವೇಷವುಂಟಾಗಿರುವದಿಲ್ಲ. ನಾನು ನಿನಗೆ ಅವಶ್ಯವಾಗಿ ದೇಹವನ್ನು ಅರ್ಪಿಸಿಬಿಡುತ್ತೇನೆ. ನಿನ್ನ ಇಚ್ಛೆಯು ನೆರವೇರಲಿ ; ಆದರೆ ಈ ಕೆಲಸವು ಗೋಪ್ಯವಾಗಿ ನಡೆಯಬೇಕು. ಏಕೆಂದರೆ ದೇಹಾಭಿಮಾನವು ನನಗಿಲ್ಲವಾದರೂ ನನ್ನ ಶಿಷ್ಯರಿಗೆ ಗುರುಗಳ ವಿಷಯದಲ್ಲಿ ಅಪಾರವಾದ ಪ್ರೇಮವಿರುವದರಿಂದ ಅವರು ನನ್ನನ್ನು ಬಿಟ್ಟುಕೊಡಲಾರರು. ಆದ್ದರಿಂದ ಅವರುಗಳಿಗೆ ಗೊತ್ತಾಗದಂತೆ ನೀನು ಈ ದೇಹವನ್ನು ತೆಗೆದುಕೊ. ಇದೊ, ನಾನು ಸಮಾಧಿಸ್ಥನಾಗಿ ಕುಳಿತು ಯೋಗದಿಂದ ದೇಹಾಭಿಮಾನವನ್ನು ಕಳಚಿಕೊಂಡು ಬಿಡುವೆನು'' ಎಂದು ಹೇಳಿ ನಿಗೂಢಸ್ಥಳದಲ್ಲಿ ಯೋಗಾರೂಢರಾಗಿಬಿಟ್ಟರು. ಈ ದೇಹವು ಅನಿತ್ಯ, ಅಶಾಶ್ವತ, ಎಂದು - ಬಾಯಲ್ಲಿ ವೇದಾಂತವನ್ನು ಹೇಳುವದಕ್ಕೂ ಸಮಯವು ಬಂದಾಗ ದೇಹವನ್ನೇ ತ್ಯಾಗಮಾಡಲು ಸಂತೋಷದಿಂದ ಸಿದ್ಧರಾಗುವದಕ್ಕೂ ಎಷ್ಟೊಂದು ಅಜಗಜಾಂತರವುಂಟೆಂಬುದನ್ನು ಈ ಸನ್ನಿವೇಶದಿಂದ ತಿಳಿಯಬಹುದು. ''ಸಶರೀರತ್ವಸ್ಯ ಮಿಥ್ಯಾಜ್ಞಾನನಿಮಿತ್ತತ್ವಾತ್'' (ಸಶರೀರತ್ವವೆಂಬುದು ಮಿಥ್ಯಾಜ್ಞಾನನಿಮಿತ್ತವಾದದ್ದು) ''ಜೀವತೋಽಪಿ ವಿದುಷಃ

ಅಶರೀರತ್ವಮ್'' (ಜ್ಞಾನಿಗೆ ಬದುಕಿರುವಾಗಲೇ - ಅಶರೀರತ್ವವು ಸಿದ್ಧವಾಗಿರುವದು) ಎಂಬ ಆಚಾರ್ಯರ ಭಾಷ್ಯವಾಕ್ಯಗಳು ಎಂಥ ಅನುಭವಪೂರ್ಣವಾದ ಉಪದೇಶಾಮೃತಗಳೆಂಬುದನ್ನು ಈ ಸಂದರ್ಭದಿಂದ ಒರೆಹಚ್ಚಿ ನೋಡಬಹುದಾಗಿದೆ. ಆಚಾರ್ಯರು ಅನುಭವವೇದಾಂತಿಗಳಲ್ಲವಾಗಿದ್ದರೆ ಹೀಗೆ ನಡೆದುಕೊಳ್ಳಲು ಸಾಧ್ಯವಿತ್ತೆ ? ಎಂಬುದನ್ನು ಯೋಚಿಸಬೇಕು. ಹೀಗೆ ಆ ಮಹನೀಯರು ಉಗ್ರ ಭೈರವನಿಗೆ ತಮ್ಮ ದೇಹವನ್ನೇ - ಅರ್ಪಿಸಿಕೊಂಡುಬಿಟ್ಟರು.

## ಉಗ್ರಭೈರವನ ವಧೆ :

ಕೂಡಲೆ ಉಗ್ರಭೈರವನು ತನ್ನ ಭಯಂಕರವಾದ ವೇಷದಿಂದ ಆಯುಧವನ್ನು ಹಿಡಿದು ಕೆಂಗಣ್ಣುಗಳಿಂದ ಕೂಡಿದವನಾಗಿ ಆಚಾರ್ಯರ ಶಿರಸ್ಸನ್ನು ಕತ್ತರಿಸಿಕೊಳ್ಳಲು ನುಗ್ಗಿ ಬರುತ್ತಿದ್ದನು. ದೈವಲೀಲೆಯನ್ನು ಏನೆಂದು ಹೇಳೋಣ? ಈ ಸಂಚು ಪದ್ಮಪಾದನೆಂಬ ಆಚಾರ್ಯರ ಶಿಷ್ಯನಿಗೆ ಹೇಗೋ ಗೊತ್ತಾಗಿ ಅವನು ಗುರುಗಳಿಗೆ ಬಂದೊದಗಿರುವ ವಿಪತ್ತನ್ನು ಕಂಡವನಾಗಿ ಕೂಡಲೆ ನರಸಿಂಹಮಂತ್ರವನ್ನು ಪುರಶ್ಚರಣೆ ಮಾಡಿದನು. ಅವನು ಆ ಮಂತ್ರಸಿದ್ಧಿಯುಳ್ಳವನೂ ಆಗಿದ್ದನು. ಆಗ ನರಸಿಂಹನ ಆವೇಶವು ಅವನಿಗೆ ಉಂಟಾಗಲಾಗಿ ನೇರವಾಗಿ ನುಗ್ಗಿ ಉಗ್ರಭೈರವನನ್ನೆತ್ತಿ ತನ್ನ ತೊಡೆಯ ಮೇಲೆ ಮಲಗಿಸಿಕೊಂಡು - ಹಿಂದೆ ನರಸಿಂಹನು ಹಿರಣ್ಯಕಶಿಪುವನ್ನು ಸೀಳಿದಂತೆ - ಉಗುರುಗಳಿಂದ ಸೀಳಿಯೇ ಬಿಟ್ಟನು. ಆ ಸಮಯಕ್ಕೆ ನೃಸಿಂಹನ ಅಟ್ಟಹಾಸವೂ ಘೋಷಣೆಯೂ ಭಯಂಕರವಾಗಿ ಕೇಳಿ ಬಂದಿತು. ಇದರಿಂದ ಯೋಗಸಮಾಧಿಯಲ್ಲಿದ್ದ ಆಚಾರ್ಯರಿಗೆ ಎಚ್ಚರವಾಯಿತು. ಹೊರಗೆ ಕಣ್ಣು ಬಿಟ್ಟು ನೋಡಲಾಗಿ ಉಗ್ರಭೈರವನು ಸತ್ತು ಬಿದ್ದಿದ್ದನು. ಪದ್ಮಪಾದನು ಆವೇಶವು ಇಳಿದದ್ದರಿಂದ ನಮ್ರವಾಗಿ ಗುರುಸನ್ನಿಧಿಯಲ್ಲೇ ನಿಂತಿದ್ದನು. ಜ್ಞಾನದೃಷ್ಟಿಯಿಂದ ಆಚಾರ್ಯರು ನಡೆದಿರುವದನ್ನೆಲ್ಲ ತಿಳಿದುಕೊಂಡರು. ಅವರಿಗೆ ತಮ್ಮ ಶಿಷ್ಯನ ಮಂತ್ರಸಿದ್ಧಿಯ ವಿಚಾರಕ್ಕೆ ಆಶ್ಚರ್ಯವೂ, ಕುತೂಹಲವೂ ಉಂಟಾಯಿತು. ಅನಂತರ ಶಿಷ್ಯನನ್ನು ಕುರಿತು - ''ಅಪ್ಪಾ, ನಿನಗೆ ಪ್ರಹ್ಲಾದವಶ್ಯನಾದ ಭಗವಂತನು ಒಲಿದದ್ದು ಹೇಗೆ?'' ಎಂದು ಕೇಳಿದರು. ಆಗ ಪದ್ಮಪಾದನು ಹೀಗೆಂದು ಉತ್ತರಿಸಿದನು.

## ನರಸಿಂಹಸಾಕ್ಷಾತ್ಕಾರ :

''ಪೂಜ್ಯರೆ, ಈ ಹಿಂದೆ ನಾನು ನರಸಿಂಹನನ್ನು ಸಾಕ್ಷಾತ್ಕರಿಸಿಕೊಳ್ಳುವ ಸಲುವಾಗಿ 'ಅಹೋಬಲ'ವೆಂಬ ಕ್ಷೇತ್ರದ - ಅರಣ್ಯದಲ್ಲಿ ಸಂಚಾರ ಮಾಡುತ್ತಿದ್ದೆನು. ಒಮ್ಮೆ ಒಂದು ಕಡೆ ಅಲ್ಲಿಯೇ ಕುಳಿತು ಧ್ಯಾನಮಾಡಲುಪಕ್ರಮಿಸಿದೆನು. ಕೆಲವು ದಿನಗಳು ಕಳೆದವು. ಆಗ ಒಬ್ಬ ಕಿರಾತರ ಹುಡುಗನು ನನ್ನನ್ನು ಕಂಡು 'ತಪಸ್ವಿಗಳೆ, ಈ

ಕಗ್ಗಾಡಿನಲ್ಲಿ ನೀವೊಬ್ಬರೇ ಕುಳಿತು ಏನು ಮಾಡುತ್ತಿರುವಿರಿ?'' ಎಂದು ಕೇಳಿದನು. ಆಗ ನಾನು ''ಅಯ್ಯಾ, ನಾನು ನೃಸಿಂಹಸ್ವಾಮಿಯನ್ನು ಸಾಕ್ಷಾತ್ಕಾರಮಾಡಿಕೊಳ್ಳಲು ತಪಸ್ಸು ಮಾಡುತ್ತಿರುವೆನು ; ಈಗಲೂ ಅವನು ನನಗೆ ಗೋಚರನಾಗಿಲ್ಲ.'' ಎಂದು ಉತ್ತರವನ್ನು ಕೊಟ್ಟೆನು. ಕೂಡಲೆ ಆ ಹುಡುಗನು ಕಾಡಿನೊಳಕ್ಕೆ ನುಸಿದು ಹೋಗಿ ಸ್ವಲ್ಪ ಸಮಯದಲ್ಲಿಯೇ ಬಳ್ಳಿಗಳಿಂದ ಬಿಗಿದು ಬಂಧಿಸಲ್ಪಟ್ಟಿದ್ದ ನನ್ನ ಆರಾಧ್ಯದೇವತೆಯನ್ನೇ ಎದುರಿಗೆ ತಂದಿಟ್ಟು ' ಈ ದೇವರನ್ನೇ ನೀವು ಹುಡುಕುತ್ತಿರುವಿರಾ ?' ಎಂದು ಕೇಳಿಬಿಟ್ಟನು. ನನಗೆ ಬಹಳ ಆಶ್ಚರ್ಯವಾಯಿತು. ಕುತೂಹಲವನ್ನು ತಡೆದುಕೊಳ್ಳಲಾರದೆ ಆ ದೇವನನ್ನೇ ಕುರಿತು ''ಪ್ರಭೋ, ನೀನು ಈ ಕಿರಾತಬಾಲಕನಿಗೆ ವಶನಾದದ್ದು ಹೇಗೆ ?'' ಎಂದು ಕೇಳಿದೆನು. ಆಗ ಸ್ವಾಮಿಯು ''ಮಗು, ಕೇಳು ; ಈ ಹುಡುಗನು ಏಕಾಗ್ರಚಿತ್ತದಿಂದ ನನ್ನನ್ನು ಧ್ಯಾನಿಸುವಂತೆ ಬೇರೆ ಯಾರೂ ಧ್ಯಾನಿಸಲಿಲ್ಲ ; ಅದಕ್ಕಾಗಿ ನಾನು ಒಲಿದು ಈ ಭಕ್ತನಿಗೆ ಅಧೀನನಾಗಿರುವೆನು'' ಎಂದನು. ನಾನು ''ಪ್ರಭೋ, ನನ್ನನ್ನೂ ಅನುಗ್ರಹಿಸು - '' ಎಂದು ಬೇಡಿಕೊಂಡೆನು. ಭಗವಂತನು ತನ್ನ ಸಾಕ್ಷಾತ್ಕಾರದ ಮರ್ಮವನ್ನು ತಿಳಿಸಿಕೊಟ್ಟು ಅಂತರ್ಧಾನನಾದನು. ಹೀಗೆ ನಾನು ಮಂತ್ರಸಿದ್ಧನಾದೆನು. ಇದೊ, ನನ್ನ ದೇವತಾ ಸಾಕ್ಷಾತ್ಕಾರದ ಅನುಭವವನ್ನು ಪ್ರಕಟಿಸುವೆನು-'' ಎನ್ನುತ್ತಾ ಪದ್ಮಪಾದನು ಆವೇಶದಿಂದ ಕೂಡಲೆ ನೃಸಿಂಹನಾಗಿ ತೋರಿಕೊಂಡೇ ಬಿಟ್ಟನು. ದೇವತೋಪಾಸಕರುಗಳಿಗೆಲ್ಲ ಬದುಕಿರುವಾಗಲೇ ಸಾಕ್ಷಾತ್ಕಾರವೂ ದೇಹಪಾತಾನಂತರ ಆಯಾ ದೇವತಾಸಾಯುಜ್ಯವೂ ದೊರಕುವಂದೆಂಬುದು ಶಾಸ್ತ್ರಸಮ್ಮತವಾಗಿದೆ.

**ಆಚಾರ್ಯರು ನರಸಿಂಹನನ್ನು ಸ್ತುತಿಸಿದ್ದು :**

ಕ್ಷಣಮಾತ್ರದಲ್ಲಿ ನೃಸಿಂಹನ ಗರ್ಜನೆಯೂ ಅಟ್ಟಹಾಸವೂ ಲೀಲೆಯೂ ಕಂಡು ಬಂದು ಆಚಾರ್ಯರಿಗೆ ಸಾಕ್ಷಾತ್ ನರಸಿಂಹದೇವರ ದರ್ಶನವೇ ಆಗಿಬಿಟ್ಟಿತು. ಕೂಡಲೆ ಅವರು ಹೀಗೆ ಸ್ತೋತ್ರಮಾಡಿದರು :-

**ನರಹರೇ ಹರ ಕೋಪಮನರ್ಥದಂ**
**ತವ ರಿಪುರ್ನಿಹತೋ ಭುವಿ ವರ್ತತೇ ।**
**ಕುರು ಕೃಪಾಂ ಮಯಿ ದೇವ ಸನಾತನೀಂ**
**ಜಗದಿದಂ ಭಯಮೇತಿ ಭವದ್ರುಶಾ ॥**
**ತವ ವಪುಃ ಕಿಲ ಸತ್ತ್ವಮುದಾಹೃತಂ**
**ತವ ಹಿ ಕೋಪಮನಣ್ವಪಿ ನೋಚಿತಮ್ ।**
**ತದಿಹ ಶಾಂತಿಮವಾಪ್ನುಹಿ ಶರ್ಮಣೇ**
**ಹರಗುಣಂ ಹರಿರಾಶ್ರಯಸೇ ಕಥಮ್ ॥**

''ಎಲೌ ನರಹರಿಯೆ, ಅನರ್ಥಕರವಾದ ಕೋಪವನ್ನು ಬಿಡು. ನಿನ್ನ ಶತ್ರುವು ಈಗಾಗಲೆ ಹತನಾಗಿ ಬಿದ್ದಿರುತ್ತಾನೆ. ಎಲೈ ದೇವನೆ, ನನ್ನ ಮೇಲೆ ಕೃಪೆ ಮಾಡು. ನಿನ್ನ (ಕ್ರೂರ) ದೃಷ್ಟಿಯಿಂದ ಜಗತ್ತೆಲ್ಲವೂ ಭಯಗ್ರಸ್ತವಾಗಿ ಬಿಟ್ಟಿದೆ. ನಿನ್ನ ಶರೀರವು ಸತ್ತ್ವ ಪ್ರಧಾನವೆಂದು ಕೇಳಿರುತ್ತೇನೆ. ಆದ್ದರಿಂದ ಒಂದು ಅಣುಮಾತ್ರದಷ್ಟು ಕೋಪವೂ ನಿನಗೆ ತಕ್ಕದ್ದಲ್ಲ. ಆದ್ದರಿಂದ ಈಗ ಜಗತ್ತಿನ ಕ್ಷೇಮಕ್ಕಾಗಿ ಶಾಂತಿಯನ್ನು ಹೊಂದುವವನಾಗು. ಹರ (ಪರಮೇಶ್ವರ)ನ ಗುಣವನ್ನು ಹರಿಯಾದ ನೀನು ಆಶ್ರಯಿಸುವದಾದರೂ ಹೇಗೆ ಸರಿಯಾದೀತು ?'' ಎಂದು ಸ್ತೋತ್ರಮಾಡಿದರು. ಪುನಃ ಭಕ್ತಿನಮ್ರರಾಗಿ ಇಂತೆಂದರು :

**ಶ್ರೀಮತ್ಪಯೋನಿಧಿನಿಕೇತನ ಚಕ್ರಪಾಣೇ**
**ಭೋಗೀಂದ್ರಭೋಗಮಣಿರಂಜಿತ ಪುಣ್ಯಮೂರ್ತೇ ।**
**ಯೋಗೀಶ ಶಾಶ್ವತ ಶರಣ್ಯ ಭವಾಬ್ಧಿಪೋತ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧ ॥**

**ಬ್ರಹ್ಮೇಂದ್ರರುದ್ರಮರುದರ್ಕಕಿರೀಟಕೋಟಿ-**
**ಸಂಘಟ್ಟಿತಾಂಘ್ರಿಕಮಲಾಮಲಕಾಂತಿಕಾಂತ ।**
**ಲಕ್ಷ್ಮೀಲಸತ್ಕುಚಸರೋರುಹರಾಜಹಂಸ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೨ ॥**

**ಲಕ್ಷ್ಮೀಪತೇ ಕಮಲನಾಭ ಸುರೇಶ ವಿಷ್ಣೋ**
**ವೈಕುಂಠ ಕೃಷ್ಣ ಮಧುಸೂದನ ಪುಷ್ಕರಾಕ್ಷ ।**
**ಬ್ರಹ್ಮಣ್ಯ ಕೇಶವ ಜನಾರ್ದನ ವಾಸುದೇವ**
**ದೇವೇಶ ದೇಹಿ ಕೃಪಣಸ್ಯ ಕರಾವಲಂಬಮ್ ॥ ೩ ॥**

(೧) ಕ್ಷೀರ ಸಮುದ್ರವನ್ನು ವಾಸಸ್ಥಾನವಾಗಿ ಮಾಡಿಕೊಂಡಿರುವವನೆ, ಚಕ್ರಧಾರಿಯೆ, ನಾಗಶ್ರೇಷ್ಠನಾದ ಆದಿಶೇಷನ ಹೆಡೆಯಲ್ಲಿರುವ ರತ್ನಮಣಿಯಿಂದ ಅಲಂಕೃತನೆ, ಪುಣ್ಯಸ್ವರೂಪನೆ, ಯೋಗಿಗಳೊಡೆಯನೆ, ಶಾಶ್ವತನೆ, ಶರಣ್ಯನೆ, ಸಂಸಾರಸಾಗರವನ್ನು ದಾಟಲು ಹಡಗಾಗಿರುವವನೆ, ಎಲೈ ಲಕ್ಷ್ಮೀನರಸಿಂಹ ದೇವನೆ, ನೀನು ನನಗೆ ಕೈ ಚಾಚಿ ಆಶ್ರಯವನ್ನು ನೀಡುವವನಾಗು ; (೨) ಬ್ರಹ್ಮ, ಇಂದ್ರ, ರುದ್ರ, ಮರುದ್ದೇವತೆಗಳು, ಸೂರ್ಯ (ನೇ ಮೊದಲಾದವರು) ಮುನ್ನುಗ್ಗಿ ನಮಸ್ಕರಿಸುತ್ತಿರಲಾಗಿ ಅವರುಗಳ ಕಿರೀಟಗಳು ಒಂದಕ್ಕೊಂದು ತಗಲುತ್ತಿರಲು ಉಂಟಾದ ರತ್ನಪ್ರಭೆಯಿಂದ ಹೊಳೆಯುತ್ತಿರುವ - ಕಮಲದಂತೆ ಇರುವ -ಪಾದಗಳುಳ್ಳವನೆ, ಸ್ವಚ್ಛವಾದ ಕಾಂತಿ ಯಿಂದ ಬೆಳಗುತ್ತಿರುವವನೆ, ಹೊಳೆಯುತ್ತಿರುವ ಲಕ್ಷ್ಮೀದೇವಿಯ ವಕ್ಷೋಜಗಳೆಂಬ ಸರೋವರದಲ್ಲಿ ವಿಹರಿಸುತ್ತಿರುವ ರಾಜಹಂಸನೆ, ಲಕ್ಷ್ಮೀನರಸಿಂಹದೇವನೆ, ನನಗೆ

ಕೈಚಾಚಿ ಆಲಂಬನವನ್ನಿತ್ತು ಕಾಪಾಡು, (೨) ಎಲೌ ಲಕ್ಷ್ಮೀಪತಿಯೆ, ಪದ್ಮನಾಭನೆ, ದೇವತೆಗಳೊಡೆಯನೆ, ಸರ್ವವ್ಯಾಪಕನೆ, ವೈಕುಂಠನೆ, ಕೃಷ್ಣನೆ, ಮಧುಸೂದನನೆ, ಕಮಲನೇತ್ರನೆ, ವೇದೋದ್ಧಾರಕನೆ, ಕೇಶವನೆ, ಜನಾರ್ದನನೆ, ವಾಸುದೇವನೆ, ದೇವೇಶನೆ, ಕೃಪಣನಾದ ನನಗೆ ಕರಾವಲಂಬನವನ್ನು ನೀಡುವವನಾಗು'' ಹೀಗೆ ಸ್ತೋತ್ರ ಮಾಡಲು ನರಸಿಂಹನು ಪ್ರಸನ್ನನಾಗಿ ಆಚಾರ್ಯರನ್ನು ಅನುಗ್ರಹಿಸಿ ಅಂತರ್ಧಾನನಾದನು. ಪದ್ಮಪಾದನು ತಾನು ಕನಸನ್ನು ಕಂಡು ಎಚ್ಚತ್ತವನಂತಾಗಿ ಎಂದಿನಂತೆ ಗುರುಪಾದಗಳಿಗೆ ವಂದಿಸಿ ನಮ್ರನಾಗಿ ನಿಂತನು.

# ೪. ಆಚಾರ್ಯರ ತೀರ್ಥಯಾತ್ರೆ

## ಗೋಕರ್ಣಾದಿ ಕ್ಷೇತ್ರದರ್ಶನ :

ಶ್ರೀಶೈಲಕ್ಷೇತ್ರದ ಈ ಘಟನೆಯ ಅನಂತರ ಆಚಾರ್ಯರು ಶಿಷ್ಯಸಮೇತ ರಾಗಿ ಪಶ್ಚಿಮಾಭಿಮುಖವಾಗಿ ತೀರ್ಥಯಾತ್ರೆಯನ್ನು ಕೈಗೊಂಡರು. ಪರಮಹಂಸ ಪರಿವ್ರಾಜಕನ ಧರ್ಮದಂತೆ ಒಂದೊಂದು ಗ್ರಾಮದಲ್ಲಿ ಒಂದೊಂದು ರಾತ್ರಿಯನ್ನು ಮಾತ್ರವೇ ಕಳೆದು ಮುಂದುಮುಂದಕ್ಕೆ ಸಾಗುತ್ತಿರಬೇಕೆಂದು ಶಾಸ್ತ್ರದ ಅನುಶಾಸನವಿದೆ. ಅದರಂತೆಯೇ ಆಚಾರ್ಯರು ಸಂಚಾರಮಾಡುತ್ತಾ ಪಶ್ಚಿಮ ಸಮುದ್ರತೀರಕ್ಕೆ ಸಮೀಪವಾದ ಗೋಕರ್ಣಕ್ಷೇತ್ರಕ್ಕೆ ಬಂದರು. ಅಲ್ಲಿ ಶ್ರೀಮಹಾಬಲೇಶ್ವರನನ್ನು ದರ್ಶನಮಾಡಿ ಸ್ತುತಿಸಿದರು. ಕಾಮಕ್ರೋಧಾದಿಗಳ ಮೂರ್ತಿಯಾದ ಹಾಗೂ ಬಲಾವಲೇಪದಿಂದ ಕೊಬ್ಬಿದ್ದ ರಾವಣನನ್ನು ಕೂಡ ಹಿಮ್ಮೆಟ್ಟಿಸಿದ ಮಹಾಬಲೇಶ್ವರನು ಜಗತ್ತಿನಲ್ಲಿ ಕಾಮಕ್ರೋಧಗಳ ಕಾಟದಿಂದ ಬಳಲುತ್ತಿರುವವರಿಗೆ ಅಭಯವನ್ನು ನೀಡಿ ಅವುಗಳಿಂದ ಬಿಡುಗಡೆಮಾಡಿಸುವ ಮಹಾಮಹಿಮನೆಂದೂ, ಅಂಥ ಶಿವನೇ ತಾನಾಗಿರುವೆನೆಂದೂ ಅನುಸಂಧಾನ ಮಾಡಿಕೊಂಡರು. ಪರಮೇಶ್ವರನು ಪಾರ್ವತಿಯ ತೋಳುಗಳಿಂದ ಕಂಠದಲ್ಲಿ ಸುತ್ತಲ್ಪಟ್ಟವನಾದರೂ ಸರ್ವಮಂಗಳೆಯ ಮಾಂಗಲ್ಯಸೂತ್ರಪ್ರಭಾವದಿಂದ ಕಂಠಕ್ಕೆ ಇಳಿದಿದ್ದ ವಿಷವೂ ಕೂಡ ತನ್ನ ಶಕ್ತಿಯನ್ನು ಕಳೆದುಕೊಂಡದ್ದಲ್ಲದೆ ಆ ಶಂಕರನಿಗೆ ಅಲಂಕಾರಭೂತವಾಗಿಯೇ ಪರಿಣಮಿಸಿದ್ದನ್ನು ನೆನೆಯುತ್ತಾ ಅಂಥ ಪರಶಿವನೇ ತನ್ನ ಆತ್ಮನೆಂದು ಧ್ಯಾನಿಸುತ್ತಾ ಮೂರು ರಾತ್ರಿಗಳನ್ನು ಗೋಕರ್ಣಕ್ಷೇತ್ರದಲ್ಲಿಯೇ ಕಳೆದರು.

ಅನಂತರ ತೀರ್ಥಯಾತ್ರೆಯನ್ನು ಮುಂದುವರೆಸಿ 'ಹರಿಶಂಕರ' ಎಂಬ ಕ್ಷೇತ್ರಕ್ಕೆ ಬಂದರು. ಅಲ್ಲಿ ಭಗವಂತನು ದ್ವೈತವು ಮಿಥ್ಯೆ -ಎಂಬಿದನ್ನೂ ಹರಿ - ಹರರಿಬ್ಬರೂ

ಒಂದೇ ಎಂಬುದನ್ನೂ ತಿಳಿಸುವದಕ್ಕಾಗಿ ಶಿವ - ವಿಷ್ಣುರೂಪಗಳಿಂದ ಅಭಿನ್ನವಾಗಿ ಪ್ರಕಟವಾಗಿದ್ದನು. ಹೀಗೆ ಹರಿಹರರೂಪಿಯಾಗಿ ನೆಲೆಸಿರುವ ಆ ಮಹಾತೇಜಸ್ಸನ್ನು ಕಂಡು ಆಚಾರ್ಯರು ಸಂತುಷ್ಟರಾಗಿ ಶಿವಪರವಾಗಿಯೂ ವಿಷ್ಣುಪರವಾಗಿಯೂ ಎರಡೂ ಅರ್ಥಗಳೂ ಹೊಂದುವಂಥ ಹತ್ತು ಪದ್ಯಗಳಿಂದ ದಶಾವತಾರಗಳನ್ನು ಮಾಡಿದ ಮಹಾವಿಷ್ಣುವಿನ ಒಂದೊಂದು ಅವತಾರಲೀಲೆಯನ್ನೂ ಕುರಿತು ಸ್ತೋತ್ರ ಮಾಡಿದರು. ಉದಾಹರಣೆಗಾಗಿ ಒಂದು ಪದ್ಯವನ್ನು ಇಲ್ಲಿ ಕೊಡಲಾಗಿದೆ.

**ವಂದ್ಯಂ ಮಹಾಸೋಮಕಲಾವಿಲಾಸಂ**
**ಗಾಮಾದರೇಣಾಕಲಯನ್ನನಾದಿಮ್ ।**
**ಮೈನಂ ಮಹಃ ಕಿಂಚನ ದಿವ್ಯಮಂಗೀ -**
**ಕುರ್ವನ್ ವಿಭುರ್ಮೇ ಕುಶಲಾನಿ ಕುರ್ಯಾತ್ ॥**

''ಸಪ್ತರ್ಷಿಗಳೇ ಮೊದಲಾದವರಿಂದ ನಮಸ್ಕೃತನಾದ, ಹಾಗೂ ಪ್ರಲಯಾಬ್ಧಿಯಲ್ಲಿ ಹುಟ್ಟಿದ ಚಂದ್ರನ ಕಲೆಗಳಿಂದ ಕ್ರೀಡೆಯಾಡುತ್ತಿರುವ ಅಥವಾ ವೇದಗಳನ್ನು ಅಪಹರಿಸಿದ ಸೋಮಕನೆಂಬ ರಾಕ್ಷಸನನ್ನು ಸಂಹರಿಸುವ ಕ್ರೀಡೆಯುಳ್ಳವನಾದ, ಅನಾದಿಪುರುಷನಾದ, ಭೂಮಿಯನ್ನು ಆದರದಿಂದ ಸೆಳೆದು ತನ್ನ ಸ್ವಶಕ್ತಿಯಿಂದ ಧರಿಸಿದವನಾದ, ( ಮೈನವೆಂದರೆ) ಮತ್ಸ್ಯರೂಪವನ್ನು ಧರಿಸಿ ಜಗದುದ್ಧಾರಮಾಡಿದ ವ್ಯಾಪಕನೂ, ತೇಜೋಮಯನೂ ಆದ ಭಗವಂತನು ನನಗೆ ಮಂಗಳವುಂಟುಮಾಡಲಿ''- ಎಂದು ವಿಷ್ಣುಪರವಾದ ತಾತ್ಪರ್ಯವು.

''ಚಂದ್ರಕಲೆಯನ್ನು ಮಹತ್ತಾಗಿ ಭಾವಿಸಿ ಲೀಲೆಯಿಂದ ಜಟೆಯಲ್ಲಿ ಧರಿಸಿರುವ, ಸಿದ್ಧಮುನಿಗಣಗಳಿಂದ ನಮಸ್ಕೃತನಾದ, ಅನಾದಿಯಾದ ವೇದಗಳನ್ನು ಆದರದಿಂದ ವಿಚಾರಮಾಡುತ್ತಿರುವ, ಮೇನಾದೇವಿಯ ಮಗಳಾದ ತೇಜೋಮಯಳಾದ (ಪಾರ್ವತಿ)ಯನ್ನು ಅಂಗೀಕರಿಸಿ (ವಾಮಾರ್ಧದಲ್ಲಿ ಧರಿಸಿರುವ) ವಿಭುವಾದ ಮಹಾದೇವನು ನನಗೆ ಕುಶಲವನ್ನುಂಟುಮಾಡಲಿ'' ಎಂದು ಶಿವಪರವಾದ ತಾತ್ಪರ್ಯವು.

ಹೀಗೆ ಉಭಯಪರವಾದ ಸ್ತುತಿಗಳಿಂದ ಹರಿಶಂಕರರನ್ನು ಸ್ತೋತ್ರಮಾಡಿ ಆ ಕ್ಷೇತ್ರದಿಂದ ಹೊರಟು ನೇರಾಗಿ ಆಚಾರ್ಯರು ಮೂಕಾಂಬಿಕಾಕ್ಷೇತ್ರಕ್ಕೆ ದಯಮಾಡಿಸಿದರು. ಈಗಲೂ ಆ ಕ್ಷೇತ್ರವು ಕೊಲ್ಲೂರು - ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಶಕ್ತಿಪೀಠವಾಗಿದೆ. ಈ ಕ್ಷೇತ್ರದಲ್ಲಿ ಆಚಾರ್ಯರು ದೇವಿಯನ್ನು ಶ್ರೀಚಕ್ರದಲ್ಲಿ ಸ್ಥಾಪಿಸಿ ಪೂಜಿಸಿದರು. ಬ್ರಹ್ಮನಿಷ್ಠರಾದ ಅವರಿಗೆ ತಂತ್ರಶಾಸ್ತ್ರಗಳೆಲ್ಲವೂ ಸ್ವಾಧೀನವಾಗಿದ್ದವು. ದೇವಿಗೆ ಅತ್ಯಂತ ಪ್ರಿಯವಾದ ಚಕ್ರಾರ್ಚನೆಯನ್ನು ಲೋಕಕಲ್ಯಾಣಕ್ಕಾಗಿ ನಿಃಸ್ಪೃಹರೂ ವೇದಾಂತವಿಜ್ಞಾನಸುನಿಶ್ಚಿತಾರ್ಥರೂ ಆದ

ಆಚಾರ್ಯರು ಅಲ್ಲಿ ನೆರವೇರಿಸಿದರು. ದೇವಿಯೇ ಚಿಚ್ಛಕ್ತಿಸ್ವರೂಪಿಣಿಯು, ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳೆಂಬ ವ್ಯಾಪಾರಗಳೆಲ್ಲವೂ ಆಕೆಯ ಅಧೀನವೇ ಆಗಿರುವದು. ವೇದಾಂತಗಳಲ್ಲಿ ಪ್ರತಿಪಾದಿಸಿರುವ ಜಗತ್ಕಾರಣವಾದ ಪರಬ್ರಹ್ಮವನ್ನೇ ದೇವಿಯೆಂದು ಪುರಾಣದಲ್ಲಿಯೂ ತಂತ್ರಶಾಸ್ತ್ರಗಳಲ್ಲಿಯೂ ಕರೆದಿದೆ. ಇದು ಉಪನಿಷತ್ತುಗಳಿಗೂ ಸಂಗತವಾಗಿಯೇ ಇದೆ. ಹೇಗೆಂದರೆ : ಛಾಂದೋಗ್ಯೋಪ ನಿಷತ್ತಿನಲ್ಲಿ ಜಗನ್ಮೂಲವಸ್ತುವನ್ನು ಪ್ರಾರಂಭದಲ್ಲಿ ಸದ್ಬ್ರಹ್ಮವೆಂದು ನಿರ್ದೇಶಿಸಿದ ಅನಂತರ 'ಪರಾ ದೇವತಾ' ಎಂದೇ ಮುಂದುವರೆದು ವಿವರಿಸಿದೆ. ಆದ್ದರಿಂದ ಪರಬ್ರಹ್ಮವೇ ಪರಾದೇವತೆಯು. ಪರಾದೇವತೆಯು ಬ್ರಹ್ಮಸ್ವರೂಪಳೇ ಎಂಬುದನ್ನು ಋಗ್ವೇದದ ದೇವೀಸೂಕ್ತದಲ್ಲಿ ಸ್ಪಷ್ಟವಾಗಿ ತಿಳಿಸಿದೆ. ಅಲ್ಲಿ ದೇವಿಯು ತಾನೇ ಸರ್ವದೇವತಾತ್ಮಕಳೆಂದು ಹೇಳಿಕೊಂಡಿದ್ದಾಳೆ. ಆದ್ದರಿಂದ ಜಗತ್ಕಾರಣಶಕ್ತಿಯಾದ ಚಿಚ್ಛಕ್ತಿಮಾತೆಯನ್ನು ಒಂದಾನೊಂದು ವಿಶಿಷ್ಟ ರೀತಿಯಿಂದ ಸ್ಥಿತಿಕಾಲದಲ್ಲಿ ಜಗತ್ಕಲ್ಯಾಣಕ್ಕಾಗಿ ಅರ್ಚಿಸುವ ಸಾಂಪ್ರದಾಯಿಕಪದ್ಧತಿಯೇ ಶ್ರೀಚಕ್ರಾರ್ಚನೆ ಯೆನಿಸಿರುವದು. ಇದು ರಹಸ್ಯವಾದುದು. ಆದ್ದರಿಂದ ಬಲ್ಲವರಿಂದ ಇದರ ಸಂಪ್ರದಾಯವನ್ನೂ, ವಿಶೇಷವಿಷಯಗಳನ್ನೂ ತಿಳಿದುಕೊಳ್ಳಬೇಕು. ಪ್ರಕೃತ-ಆಚಾರ್ಯರು ದೇವಿಯನ್ನು ಯಾಥಾವಿಧಿಯಾಗಿ ಪೂಜಿಸಿ ನಾನಾವಿಧವಾಗಿ ಸುತ್ತಿಸಿದರು. ಒಂದೆರಡು ಸ್ತುತಿಗಳನ್ನು ಇಲ್ಲಿ ಕೊಟ್ಟಿದೆ.

**ಕಾಲಾಗ್ನಿರೂಪೇಣ ಜಗಂತಿ ದಗ್ಧ್ವಾ**
**ಸುಧಾತ್ಮನಾಪ್ಲಾವ್ಯ ಸಮುದ್ಸೃಜಂತೀಮ್।**
**ಯೇ ತ್ವಾಮವಂತೀಮಮೃತಾತ್ಮನೈವ**
**ಧ್ಯಾಯಂತಿ ತೇ ಸೃಷ್ಟಿಕೃತೋ ಭವಂತಿ ॥**

**ಯೇ ಪ್ರತ್ಯಭಿಜ್ಞಾಮತಪಾರವಿಜ್ಞಾಃ**
**ಧನ್ಯಾಸ್ತು ತೇ ಪ್ರಾಗ್ವಿದಿತಾಂ ಗುರೂಕ್ತ್ಯಾ ।**
**ಸೈವಾಹಮಸ್ಮೀತಿ ಸಮಾಧಿಯೋಗಾತ್**
**ತ್ವಾಂ ಪ್ರತ್ಯಭಿಜ್ಞಾವಿಷಯಂ ವಿದಧ್ಯುಃ ॥**

''ಕಾಲಾಗ್ನಿರೂಪದಿಂದ (ಪ್ರಲಯಕಾಲದಲ್ಲಿ) ಪ್ರಪಂಚಗಳನ್ನೆಲ್ಲ ಸುಟ್ಟು ಅವುಗಳನ್ನು (ಸೃಷ್ಟಿಕಾಲಕ್ಕೆ) ಅಮೃತರಸದಿಂದ ತೋಯಿಸಿ ಹೊರಚಲ್ಲುತ್ತಿರುವ ಯಾವ ನಿನ್ನನ್ನು ಕಾಪಾಡುವ ತಾಯಿಯೆಂದು ಭಾವಿಸಿ ಅಮೃತಸ್ವರೂಪಳೆಂದೇ ಯಾರು ಧ್ಯಾನಿಸುವರೋ ಅವರು ಬ್ರಹ್ಮನೇ ಆಗಿಬಿಡುವರು. ಇನ್ನು ಯಾರು ಗುರೂಪದೇಶದಿಂದ ಮೊದಲು ನಿನ್ನನ್ನು ಅರಿತುಕೊಂಡು ಅನಂತರ ಸಮಾಧಿಯೋಗ ದಿಂದ ದೇವಿಯೇ ತಾನೆಂದು ಗುರುತಿಸಿ ಕಂಡುಕೊಂಡವರಾಗಿ ಕಡೆಯಲ್ಲಿ

ಸಚ್ಚಿದಾನಂದಲಕ್ಷಣವಾದ ಬ್ರಹ್ಮವೇ ತಾನೆಂಬ ಅದ್ವೈತಜ್ಞಾನದಿಂದ ನಿನ್ನನ್ನು ಪಡೆಯುವವರೋ ಅವರೇ ಧನ್ಯರು''- ಹೀಗೆ ಸ್ತುತಿಸಿ ಮೂಕಾಂಬಿಕಾ ದೇವಾಲಯದಲ್ಲಿ ಸ್ವಲ್ಪ ಕಾಲ ನಿಂತರು. ಆಗ ನಡೆದ ಒಂದು ಸಂಗತಿಯು ಹೀಗಿದೆ :-

## ಆಚಾರ್ಯರು ಸತ್ತಮಗುವನ್ನು ಬದುಕಿಸಿದ್ದು :

ದೇವೀಪ್ರಸಾದಪಾತ್ರರಾದ ಆಚಾರ್ಯರ ಬಳಿಗೆ ಆಗ ಒಬ್ಬ ಬ್ರಾಹ್ಮಣನು ಪತ್ನೀಸಮೇತನಾಗಿ ಬಂದನು. ಆತನ ಹೆಂಡತಿಯ ತೊಡೆಯ ಮೇಲೆ ಆಗ ತಾನೆ ಸತ್ತು ಹೋದ ಒಂದು ಮಗುವಿತ್ತು. ಆ ಬ್ರಾಹ್ಮಣದಂಪತಿಗಳು ಗುರುಗಳನ್ನು ಕಾಣುತ್ತಲೇ ಇವರು ಯಾರೋ ಸಿದ್ಧಪುರುಷರಿರಬಹುದೆಂದೂ ತಮ್ಮ ಏಕ ಮಾತ್ರ ಸಂತಾನವಾಗಿದ್ದ ಮಗುವನ್ನು ಇವರು ಮತ್ತೆ ಬದುಕಿಸಿಕೊಡಬಹುದೆಂದೂ ಭಾವಿಸಿ ಶರಣಾಗತ ರಾದರು. ದುಃಖದಿಂದ ಅಳುತ್ತಾ ವಿಷಯವನ್ನೆಲ್ಲ ವಿಜ್ಞಾಪಿಸಿಕೊಂಡರು. ಎಂಥ ನಿಸ್ಸಂಗರಾದ ಆಚಾರ್ಯರಿಗೂ ಈ ಸನ್ನಿವೇಶವು ದುಃಖವನ್ನು ತಂದೊಡ್ಡಿತು. ದಂಪತಿಗಳ ದುರ್ದೈವದ ವಿಷಯಕ್ಕೆ ಕರುಣೆಯೂ ಉಂಟಾಗಿಬಿಟ್ಟಿತು. ಆಚಾರ್ಯರಿಗೆ ಏನು ಮಾಡಲೂ ತೋರಲಿಲ್ಲ. ಅಷ್ಟರಲ್ಲಿ ಆಕಾಶವಾಣಿಯೊಂದು ಹೀಗೆ ನುಡಿಯಿತು. ''ಅಯ್ಯ ಯತಿಯೆ, ಯಾರಿಗೆ ಮತ್ತೊಬ್ಬರನ್ನು ದುಃಖದಿಂದ ಪಾರುಗಾಣಿಸಿ ಕಾಪಾಡುವ ಸಾಮರ್ಥ್ಯವಿರುವದಿಲ್ಲವೋ ಅಂಥವರು ಸುಮ್ಮನೆ 'ಅಯ್ಯೋ ಪಾಪ'- ಎಂದರೇನು ಫಲ? ಇದರಿಂದ ದುಃಖಿತರ ಕಷ್ಟವೇನಾದರೂ ಪರಿಹಾರವಾದೀತೇ ?'' ಎಂದಿತು. ಆಗ ಆಚಾರ್ಯರು ವಾಣಿಯನ್ನು ಅರ್ಥಮಾಡಿ ಕೊಂಡವರಾಗಿ ಹೀಗೆ ಉತ್ತರಿಸಿದರು : ''ತಾಯೆ, ನಿನ್ನ ಹೊರತು ಲೋಕದಲ್ಲಿ ದುಃಖಿತರನ್ನು ಕಾಪಾಡುವವರು ಮತ್ತೆ ಯಾರಿದ್ದಾರು? ಈಗ ನುಡಿದ ಮಾತು ನಿನ್ನಂಥ ದಯಾಮಯಳೂ ಸರ್ವಶಕ್ತಳೂ ಆದ ನಿನ್ನಲ್ಲಿ ಮಾತ್ರವೇ ಶೋಭಿಸಲಿದೆ. ನೀನು ಕೃಪೆ ಮಾಡಿದರೆ ಮೃತಶಿಶುವು ಬದುಕುವದರಲ್ಲಿ ಆಶ್ಚರ್ಯವೇನಿದೆ? ಈ ಪವಾಡವು ನನ್ನಿಂದಾದೀತೆ ? ಮಹಾಮಾಯೆಯೆನಿಸಿದ ನೀನಲ್ಲವೆ, ಈ ಕಾರ್ಯದಲ್ಲಿ ದಕ್ಷಳು? ಇದೊ, ನಿನಗೆ ವಂದನೆಗಳು '' ಎಂದು ಪ್ರಾರ್ಥಿಸಿದರು. ದೇವಿಯು ಆಚಾರ್ಯರ ನಿರಹಂಕಾರಭಾವಕ್ಕೆ ಮೆಚ್ಚಿದವಳಾಗಿ ಮಗುವನ್ನು ಬದುಕಿಸಿದಳು. ಮಲಗಿದ್ದ ಮಗುವು ಏಳುವಂತೆ ಅದು ಸುಖವಾಗಿ ಎಚ್ಚರಗೊಂಡಿತು. ಆದರೆ ಅಲ್ಲಿ ನೆರೆದಿದ್ದವರಿಗೆ ಆಚಾರ್ಯರ- ಹಾಗೂ ದೇವಿಯ ನಡುವಣ ಸಂಭಾಷಣೆಯೇನೂ ಕೇಳಲಿಲ್ಲ. ಎಲ್ಲರೂ ಗುರುಗಳ ಕೃಪೆಯಿಂದಲೇ ಮಗುವು ಬದುಕಿತೆಂದು ತಿಳಿದುಕೊಂಡರು. ಗುರುಗಳು ಮೌನವಾಗಿಯೇ ಇದ್ದರು. ಭಗವತಿಯ ಹಾಗೂ ಭಕ್ತನ ಸಂಬಂಧವು ಹೀಗೆ ಮಧುರವೂ ಅಮೃತಮಯವೂ ಆಗಿರುವದು.

## ಶ್ರೀಬಲಿ ಎಂಬ ಅಗ್ರಹಾರಕ್ಕೆ ಆಗಮನ :

ಅನಂತರ ಆಚಾರ್ಯರು ಶಿಷ್ಯ ಸಮೇತರಾಗಿ ಕೊಲ್ಲೂರಿನಿಂದ ಹೊರಟು ಶ್ರೀಬಲಿ- ಎಂಬ ಅಗ್ರಹಾರಕ್ಕೆ ಬಂದರು. ಆ ಅಗ್ರಹಾರವು ಹೆಸರಿಗೆ ತಕ್ಕಂತೆ ನಿಷ್ಠರಾದ ಬ್ರಾಹ್ಮಣರುಗಳಿಂದ ಕೂಡಿತ್ತು. ಪ್ರತಿಯೊಂದು ಮನೆಯಲ್ಲಿಯೂ ವೇದಾಧ್ಯಯನವೂ ಅಗ್ನಿಹೋತ್ರವೂ ಅತಿಥಿಸತ್ಕಾರಾದಿಗಳೂ ನಡೆಯುತ್ತಿದ್ದವು. ಸುಮಾರು ಎರಡುಸಾವಿರ ಬ್ರಾಹ್ಮಣಕುಟುಂಬಗಳಿದ್ದ ಆ ಅಗ್ರಹಾರವು ಯಾವಾಗಲೂ ವೇದಧ್ವನಿಯಿಂದ ಮೊಳಗುತ್ತಿತ್ತು. ದುರಾಚಾರಿಗಳಾಗಲಿ, ಅವಿದ್ಯಾವಂತರಾಗಲಿ ಅಲ್ಲಿರಲಿಲ್ಲ. ಆ ಊರಿನ ನಡುವೆ ಮಕುಟಪ್ರಾಯವಾಗಿ ಒಂದು ಈಶ್ವರ ದೇವಾಲಯವೂ ಇದ್ದಿತು. ಇಂಥ ಗ್ರಾಮದಲ್ಲಿ ವೇದಾಧ್ಯಯನ ಸಂಪನ್ನನೂ ಶ್ರೋತ್ರಿಯನೂ ಆದ ಪ್ರಭಾಕರನೆಂಬ ಒಬ್ಬ ಬ್ರಾಹ್ಮಣನಿದ್ದನು. ಆತನಿಗೆ ಭೂಮಿ, ಮನೆ, ಗೋವುಗಳು, ಚಿನ್ನ- ಮುಂತಾದ ಐಶ್ವರ್ಯವೆಲ್ಲವೂ ಇತ್ತು. ಆದರೂ ಅವನಿಗೆ ಮನಸ್ಸಂತೋಷವಿರಲಿಲ್ಲ. ಏಕೆಂದರೆ ಅವನ ಒಬ್ಬನೇ ಮಗನು ಹದಿಮೂರು ವರ್ಷದವನಾಗಿದ್ದರೂ ಮಾತನಾಡುತ್ತಿರಲಿಲ್ಲ. ಆ ಹುಡುಗನಿಗೆ ಮಾತು ಬರುತ್ತದೊ, ಇಲ್ಲವೊ- ಎಂಬಿದುಕೂಡ ಗೊತ್ತಿರಲಿಲ್ಲ. ಹುಟ್ಟಿದಂದಿನಿಂದಲೂ ಒಂದೂ ಮಾತನ್ನಾಡದೆ ಮೌನವಾಗಿದ್ದ ಆ ಹುಡುಗನು ಒಂದು ಸಮಸ್ಯೆಯಾಗಿಬಿಟ್ಟಿದ್ದನು. ಯಾವಾಗಲೂ ತಾನೊಬ್ಬನೇ ಏಕಾಂತದಲ್ಲಿ ಕುಳಿತು ಏನೋ ಧ್ಯಾನಿಸುತ್ತಿರುವಂತೆ ಕಂಡುಬರುತ್ತಿದ್ದನು. ರೂಪದಲ್ಲಿ ಮನ್ಮಥನಂತೆಯೂ ಮುಖಭಾವದಲ್ಲಿ ಚಂದ್ರನಂತೆಯೂ ಸುಂದರನಾಗಿದ್ದನು. ಸಹನೆಯಲ್ಲಿ ಭೂದೇವಿಗೆ ಸಮಾನನೆನಿಸಿದ್ದನು. ಕೊಟ್ಟರೆ ಊಟಮಾಡುವನು; ಇಲ್ಲವಾದರೆ, ಇಲ್ಲ. ಜಡನಂತೆ ಇದ್ದುಕೊಂಡು ಬಿಟ್ಟಿದ್ದನು. ಒಂದು ದಿನ ತಂದೆಯಾದ ಪ್ರಭಾಕರನಿಗೆ ತಮ್ಮ ಅಗ್ರಹಾರಕ್ಕೆ ಯಾರೋ ಮಹಾತ್ಮರಾದ ಯತಿಗಳು ಬಂದಿದ್ದಾರೆಂತ ತಿಳಿಯಿತು. ಅವರು ಶಿಷ್ಯ ಪ್ರಶಿಷ್ಯರೊಡನೆಯೂ ಬಹಳವಾದ ಗ್ರಂಥಭಂಡಾರದೊಡನೆಯೂ ದಯಮಾಡಿಸಿದ್ದಾರೆಂದೂ ಗೊತ್ತಾಯಿತು. ಆಗ ಆ ಬ್ರಾಹ್ಮಣನು ಏನೂ ಕೆಲಸಕ್ಕೆ ಬಾರದ ತನ್ನ ಜಡಸ್ವಭಾವದ ಮಗನನ್ನೇ ಗುರುಕಾಣಿಕೆಯಾಗಿ ಅರ್ಪಿಸಿಬಿಡಬೇಕೆಂದು ನಿರ್ಧರಿಸಿದನು. ಹೇಗೂ ಬರಿಗೈಯಲ್ಲಿ ಯತಿದರ್ಶನವನ್ನು ಮಾಡಬಾರದೆಂಬ ಶಾಸ್ತ್ರವೂ ಅವನಿಗೆ ತಿಳಿದಿತ್ತಾದ್ದರಿಂದ ತನ್ನ ಮಗನನ್ನೇ ಗುರುದಕ್ಷಿಣೆಯಾಗಿ ತೆಗೆದುಕೊಂಡು ಆಚಾರ್ಯರ ಬಳಿಗೆ ಬಂದನು.

## ಶಿಷ್ಯಸ್ವೀಕಾರ :

ಪ್ರಭಾಕರಭಟ್ಟನು ಪುತ್ರಸಮೇತನಾಗಿ ಗುರುಗಳನ್ನು ದರ್ಶನಮಾಡಿ ಸಾಷ್ಟಾಂಗನಮಸ್ಕಾರಮಾಡಿದನು. ಆಚಾರ್ಯರು ಅವನನ್ನು ಬರಮಾಡಿಕೊಂಡರು.

ಮಗುವು ಸಹ ಆಚಾರ್ಯರಿಗೆ ಪ್ರಣಾಮಮಾಡಲು ಮಲಗಿದವನು ಮೇಲಕ್ಕೇಳಲೇ ಇಲ್ಲ. ತನ್ನ ಜಾಡ್ಯವನ್ನು ಅಲ್ಲಿಯೂ ಪ್ರಕಟಿಸಿದನು. ಆಗ ಗುರುಗಳೇ ಕೃಪೆಯಿಂದ ಆ ಹುಡುಗನನ್ನು ಮೇಲೆಬ್ಬಿಸಿದರು. ಆಗ ತಂದೆಯು ಹೀಗೆಂದನು : ''ಪೂಜ್ಯರೆ, ನನ್ನ ಕಷ್ಟವನ್ನೇನು ಹೇಳಲಿ ? ಈ ಹುಡುಗನು ನನ್ನ ಮಗನು. ಇವನ ವಯಸ್ಸು ಹದಿಮೂರಾಗಿದೆ. ಆದರೆ ಮಾತೇ ಇಲ್ಲ. ಮೂಕನಂತಿದ್ದಾನೆ. ವೇದಾಧ್ಯಯನ ವನ್ನು ಮಾಡಲಿಲ್ಲ. ಬರಹವನ್ನೂ ಬರೆಯಲಿಲ್ಲ. ಏನನ್ನೂ ಕಲಿತಿಲ್ಲ. ನಾನು ಬಹಳ ಶ್ರಮವನ್ನು ವಹಿಸಿ ಹೇಗೋ ಉಪನಯನವನ್ನು ಸಕಾಲಕ್ಕೆ ಮಾಡಿದೆನು. ಆದರೇನು? ಈ ಹುಡುಗನು ಯಾರೊಡನೆಯೂ ಸೇರುವದಿಲ್ಲ. ಆಟವಾಡಲೂ ಹೋಗುವದಿಲ್ಲ. ತೀರ ಮುಗ್ಧನಾಗಿರುತ್ತಾನೆ. ಹುಡುಗರು ಕುಚೇಷ್ಟೆಗಳನ್ನು ಮಾಡಿ ಏಟುಗಳನ್ನು ಹೊಡೆದರೂ ಸುಮ್ಮನೆ ಸಹಿಸಿಕೊಳ್ಳುತ್ತಾನೆ. ಕೋಪಿಸಿಕೊಳ್ಳುವದೂ ಇಲ್ಲ. ಅಂತೂ ದೊಡ್ಡವನಾಗಿ ಬೆಳೆಯುತ್ತಿದ್ದಾನೆ.'' ಹೀಗೆಂದು ಹೇಳಿ ತಂದೆಯು ಸುಮ್ಮನಾದನು.

ಆಚಾರ್ಯರು ಆ ಹುಡುಗನನ್ನು ಮಾತನಾಡಿಸಬೇಕೆಂದು ಸಂಕಲ್ಪಿಸಿ ''ಕಸ್ತ್ವಂ ಜಡವತ್ ವರ್ತಸೇ'' (ನೀನು ಯಾರು? ಜಡನಂತೆ ಕಾಣಿಸುವೆಯಲ್ಲ?) ಎಂದರು. ಆವರೆಗೂ ಬಾಯನ್ನೇ ಬಿಡದಿದ್ದ ಆ ಹುಡುಗನು ''ನಾಹಂ ಜಡಃ, ಕಿಂ ತು ಮತ್ಸನ್ನಿಧಾನೇನ ಜಡಃ ಪ್ರವರ್ತತೇ'' ಎಂಬ ಪ್ರಪ್ರಥಮವಾಕ್ಯವನ್ನು ಉಚ್ಚರಿಸಿದನು. 'ನಾನು ಜಡನಲ್ಲ, ಆದರೆ ನನ್ನ ಸನ್ನಿಧಾನಮಾತ್ರದಿಂದ ಜಡವು ಪ್ರವರ್ತಿಸುತ್ತದೆ' - ಎಂದು ಅದರ ಅಭಿಪ್ರಾಯ. ಹಾಗೆಯೇ ಮುಂದುವರೆದು ಆ ಹುಡುಗನು ''ಗುರುಗಳೆ, ನಾನು ಅಶನಾಯಾಪಿಪಾಸಾದಿ ಷಡೂರ್ಮಿಗಳಿಲ್ಲದ ಸುಖಸ್ವರೂಪ ವಾದ ತತ್ತ್ವವೇ ಆಗಿರುವೆನು. ಈ ವಿಷಯದಲ್ಲಿ ನನಗೇನೂ ಸಂದೇಹವಿಲ್ಲ. ನನ್ನ ಈ ಅನುಭವವೇ ಮುಮುಕ್ಷುಗಳೆಲ್ಲರಿಗೂ ಉಂಟಾಗಲೆಂದು ಆಶಿಸುತ್ತೇನೆ''- ಎಂದು ಹೇಳುತ್ತಾ ಚಿದಾತ್ಮತತ್ತ್ವವನ್ನು ನಿರೂಪಿಸುವ ಹನ್ನೆರಡು ಪದ್ಯಗಳನ್ನು ಪಠಿಸಿ ಉತ್ತರವನ್ನು ನೀಡಿದನು. ಉದಾಹರಣೆಗಾಗಿ ಎರಡು ಪದ್ಯಗಳನ್ನು ಕೊಟ್ಟಿದೆ.

**ನಿಮಿತ್ತಂ ಮನಶ್ಚಕ್ಷುರಾದಿಪ್ರವೃತ್ತೌ**
**ನಿರಸ್ತಾಖಿಲೋಪಾಧಿರಾಕಾಶಕಲ್ಪಃ ।**
**ರವಿರ್ಲೋಕಚೇಷ್ಟಾನಿಮಿತ್ತಂ ಯಥಾ ಯಃ**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥**

**ಘನಚ್ಛನ್ನದೃಷ್ಟಿರ್ಘನಚ್ಛನ್ನಮರ್ಕಂ**
**ಯಥಾ ಮನ್ಯತೇ ನಿಷ್ಪ್ರಭಂ ಚಾತಿಮೂಢಃ ।**
**ತಥಾ ಬದ್ಧವದ್ ಭಾತಿ ಯೋ ಮೂಢದೃಷ್ಟೇಃ**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥**

''ಮನಸ್ಸು, ಕಣ್ಣುಗಳೇ ಮುಂತಾದ ಇಂದ್ರಿಯಗಳ ಪ್ರವೃತ್ತಿಗೆ ಯಾವದು ನಿಮಿತ್ತನಾಗಿರುವದೋ ಮತ್ತು ಎಲ್ಲಾ ಉಪಾಧಿಗಳನ್ನೂ ಕಳಚಿ ಆಕಾಶ ಸಮಾನವಾಗಿ ಯಾವದು ಇದ್ದುಕೊಂಡಿರವದೋ ಲೋಕದ ಪ್ರಾಣಿಗಳು ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗುವದಕ್ಕೆ ಸೂರ್ಯನು (ಉದಯಿಸಿದರೆ ಹೇಗೆ) ನಿಮಿತ್ತನಾಗುವನೋ ಹಾಗೆ ಎಂದೆಂದೂ ಇದ್ದುಕೊಂಡಿರುವ ನಿತ್ಯಜ್ಞಾನ ಸ್ವರೂಪನಾದ ಆತ್ಮನು ನಾನಾಗಿರುವೆನು. ಮೋಡಗಳಿಂದ ಮುಚ್ಚಲ್ಪಟ್ಟ ದೃಷ್ಟಿಯವನು 'ಸೂರ್ಯನಿಗೆ ಮೋಡಗಳು ಕವಿದಿವೆ ; ಆತನು ನಿಷ್ಪ್ರಭನಾಗಿದ್ದಾನೆ' - ಎಂದು ಹೇಗೆ ಅತಿಮೂಢನಾಗಿ ತಿಳಿಯದವನಾಗಿ ವ್ಯವಹಾರಮಾಡುವನೋ ಹಾಗೆ ಅಜ್ಞಾನ ದೃಷ್ಟಿಯವನಿಗೆ ಯಾವ ಮುಕ್ತನಾದ ಆತ್ಮನು ಸಂಸಾರಬದ್ಧನಂತೆ ಕಂಡುಬರುವನೋ ಅಂಥ ನಿತ್ಯ ಜ್ಞಾನಸ್ವರೂಪನಾದ ಆತ್ಮನು ನಾನಾಗಿರುವೆನು ''- ಎಂದು ಶ್ಲೋಕಗಳ ಅಭಿಪ್ರಾಯ.

ಆಚಾರ್ಯರು ಈ ಉತ್ತರವನ್ನು ಕೇಳಿ ಅತೀವ ಸಂತುಷ್ಟರಾದರು. ಬ್ರಹ್ಮವಿದರೊಡನೆಯೇ ಪ್ರಪ್ರಥಮಸಂಭಾಷಣೆಗಾಗಿ ಅವತರಿಸಿದ್ದ ಆ ದೇವಾಂಶದ ಬಾಲಕನು ಬೇರೆಯ ಸಂಸಾರಿಗಳೊಡನೆ ಮಾತನಾಡಿಯಾನೆ? 'ಅನ್ಯಾ ವಾಚೋ ವಿಮುಂಚಥ' (ಮಿಕ್ಕ ಮಾತುಗಳನ್ನು ಬಿಡಿರಿ) ಎಂಬ ಶ್ರುತ್ಯರ್ಥವನ್ನೇ ಅನುಷ್ಠಾನದಲ್ಲಿ ಇಟ್ಟುಕೊಂಡಿದ್ದ ಈ ಬಾಲಕನು ಅಂಗೈಯಲ್ಲಿರುವ ನೆಲ್ಲಿಯಕಾಯಿಯಂತೆ ಪರಮತತ್ತ್ವವನ್ನು ಸುಸ್ಪಷ್ಟವಾಗಿ ನಿರೂಪಿಸಿರುವ ಸುಮಧುರಶ್ಲೋಕಗಳಿಂದ ಮಾತನಾಡಿದ್ದರಿಂದ ಜನರು ಇವನನ್ನು **ಹಸ್ತಾಮಲಕ**ನೆಂದೇ ಕರೆಯಲಾರಂಭಿಸಿದರು. ಆಚಾರ್ಯರು ಆ ಹುಡುಗನ ಶಿರಸ್ಸಿನ ಮೇಲೆ ತಮ್ಮ ಅಮೃತಹಸ್ತವನ್ನಿಟ್ಟು ಶಕ್ತಿಪಾತಮಾಡಿದರು. ಅನಂತರ ಆತನ ತಂದೆಯನ್ನು ಕುರಿತು ಹೀಗೆಂದರು : ''ಶ್ರೋತ್ರಿಯರೆ, ನಿಮ್ಮ ಪುತ್ರನು ಖಂಡಿತ ಜಡನಲ್ಲ. ಇವನು ಹಿಂದಿನ ಜನ್ಮದಲ್ಲಿ ಸಾಕಷ್ಟು ಅಧ್ಯಾತ್ಮಸಾಧನಗಳನ್ನು ಮಾಡಿ ಈಗ ಯೋಗಭ್ರಷ್ಟನಾಗಿ ಜನಿಸಿರುತ್ತಾನೆ. ಇವನ ಪ್ರವೃತ್ತಿಯೆಲ್ಲವೂ ಅಂತರ್ಮುಖವಾಗಿದೆ. ಇವನು ಇನ್ನೆಂದಿಗೂ ಸಂಸಾರದ ಕಡೆಗೆ ತಿರುಗಲಾರನು. ಆದ್ದರಿಂದ ನಿಮಗೆ ಇವನಿಂದ ಪ್ರಯೋಜನವಿಲ್ಲ. ಇಂಥವನು ನಿಮ್ಮ ಬಳಿಯಲ್ಲಿರುವದೂ ಯೋಗ್ಯವಲ್ಲ. ಇವನನ್ನು ನಮಗೆ ಅರ್ಪಿಸಿಬಿಡಿರಿ. ನಾವು ಶಿಷ್ಯನನ್ನಾಗಿ ಮಾಡಿಕೊಳ್ಳುತ್ತೇವೆ. ಈತನಿಗೆ ತತ್ತ್ವವೆಲ್ಲವೂ ಮನದಟ್ಟಾಗಿದೆ. ಇಲ್ಲವಾದರೆ ಹೀಗೆ ಮಾತನಾಡುವದು ಹೇಗಾದೀತು? ನೀವು ಇನ್ನು ನಿಶ್ಚಿಂತರಾಗಿರಿ'' ಎಂದರು. ಆಗ ಪ್ರಭಾಕರಭಟ್ಟರು ತಮ್ಮ ಮಗನನ್ನು ಗುರುಗಳಿಗೆ ಒಪ್ಪಿಸಿಬಿಟ್ಟರು. ಆಚಾರ್ಯರು ಅವನನ್ನು ಸ್ವೀಕರಿಸಿ ಸಂನ್ಯಾಸ ದೀಕ್ಷೆಯನ್ನು ನೀಡಿದರು. ಆತನು ಗುರುಗಳಿಂದಲೂ ಹಸ್ತಾಮಲಕನೆಂದೇ ಯೋಗಪಟ್ಟವನ್ನು ಹೊಂದಿ ಆಚಾರ್ಯರ ಮೂರನೆಯ ಪ್ರಧಾನಶಿಷ್ಯನಾಗಿ

ವಿರಾಜಿಸಿದನು. ಮುಂದೆ ಆಚಾರ್ಯರು ಆ ಅಗ್ರಹಾರದಿಂದ ಹೊರಟು ಶೃಂಗಗಿರಿಕ್ಷೇತ್ರಕ್ಕೆ ಬರುವವರಾದರು.

# ೫. ಶೃಂಗೇರೀ ಕ್ಷೇತ್ರವಾಸ

## ಆಚಾರ್ಯರು ಶೃಂಗೇರಿಗೆ ಆಗಮಿಸಿದ್ದು :

ಕರ್ನಾಟಕರಾಜ್ಯದ ಚಿಕ್ಕಮಗಳೂರು ಜಿಲ್ಲೆಗೆ ಸೇರಿರುವ ತುಂಗಾನದಿಯ ದಡದಲ್ಲಿರುವ ಪವಿತ್ರಕ್ಷೇತ್ರವೇ ಶೃಂಗೇರಿಯು. ಶೃಂಗಗಿರಿ ಎಂಬುದು ತದ್ಭವವಾಗಿ ಶೃಂಗೇರಿಯಾಗಿದೆ. ಆದಿಶಂಕರಾಚಾರ್ಯರು ಸ್ಥಾಪಿಸಿರುವ ಶ್ರೀಶಾರದಾಪೀಠವು ಇಲ್ಲಿದೆ. ಆಚಾರ್ಯರ ಕಾಲದಿಂದಲೂ ಅವಿಚ್ಛಿನ್ನಗುರುಪರಂಪರೆಯಿಂದ ಗುರುಶಿಷ್ಯ ಸಂಪ್ರದಾಯವು ರಕ್ಷಿಸಲ್ಪಟ್ಟು ಈಗ ಶ್ರೀ ಶ್ರೀ ಭಾರತೀತೀರ್ಥಸ್ವಾಮಿ ಗಳು ಪೀಠದಲ್ಲಿ ವಿರಾಜಮಾನರಾಗಿದ್ದಾರೆ. ಈ ಪೀಠದ ಪ್ರಪ್ರಥಮ ಅಧಿಪತಿಗಳು ಶ್ರೀಸುರೇಶ್ವರಾಚಾರ್ಯರೆಂದು ತಿಳಿದುಬಂದಿದೆ. ಈಚೆಗೆ ಶ್ರೀಮಠದ ಆವರಣದಲ್ಲಿ ಶ್ರೀಸುರೇಶ್ವರಾಚಾರ್ಯರ ದೇವಾಲಯವೂ ನಿರ್ಮಿತವಾಗಿ ಸುರೇಶ್ವರಾಚಾರ್ಯರ ವಿಗ್ರಹವು ಪ್ರತಿಷ್ಠಾಪಿಸಲ್ಪಟ್ಟಿದೆ. ದಕ್ಷಿಣಾಮ್ನಾಯಪೀಠವೆಂದು ಪ್ರಸಿದ್ಧವಾಗಿರುವ ಇಲ್ಲಿ ಗುರುಪರಂಪರೆಯ ಅನೇಕ ಪೀಠಾಧಿಪರ ಸಮಾಧಿಗಳಿವೆ. ಭಗವತೀ ಶಾರದಾಂಬೆಯ ದಿವ್ಯಸನ್ನಿಧಾನವಿದೆ. ಇನ್ನೂ ಕೆಲವು ಭವ್ಯ ದೇವಾಲಯಗಳೂ ಇವೆ. ಈಗಲೂ ಹಿಂದೆಯೂ ರಾಜಮಹಾರಾಜರುಗಳಿಂದಲೂ ಸರ್ಕಾರದಿಂದಲೂ ಗೌರವಿಸಲ್ಪಟ್ಟು ಇಡಿಯ ಭಾರತದೇಶದಲ್ಲಿಯೇ ಜಗದ್ಗುರುಪೀಠವೆಂಬ ಅಪೂರ್ವಗೌರವಕ್ಕೆ ಪಾತ್ರವಾಗಿರುವ ಪೀಠವು ಇದಾಗಿದೆ. ಈ ಪೀಠದ ಮೂಲ ಸಂಸ್ಥಾಪಕರಾದ ಶ್ರೀಶಂಕರಾಚಾರ್ಯರು ತಮ್ಮ ತಪಃಫಲವನ್ನೂ ಸಿದ್ಧಿಯನ್ನೂ ಇಲ್ಲಿಗೆ ಧಾರೆಯೆರೆದಿರುವದರಿಂದಲೇ ಎಂಥೆಂಥ ರಾಜಕೀಯವಿಪ್ಲವಗಳಲ್ಲಾಗಲಿ, ಕಾನೂನು ಗಳ ಗದಾಪ್ರಹಾರಗಳಿಂದಾಗಲಿ ಅಚ್ಚಳಿಯದೆ ತನ್ನ ಗೌರವಕೀರ್ತಿಪ್ರತಿಷ್ಠೆಗಳನ್ನೂ ಸಂಪ್ರದಾಯಪರಂಪರೆಯನ್ನೂ ಕಾಪಾಡಿಕೊಂಡು ಈಗಲೂ ಈ ಪೀಠವು ಧರ್ಮಪೀಠವಾಗಿ ವಿರಾಜಮಾನವಾಗಿದೆ. ಇಲ್ಲಿ ಆಗಿ ಹೋಗಿರುವ ಗುರುವರ್ಗ ದವರೆಲ್ಲರೂ ಮಹಾತಪಸ್ವಿಗಳೂ ಸಿದ್ಧಪುರುಷರೂ ಆಗಿರುತ್ತಾರೆ. ಇತ್ತೀಚೆಗಂತೂ ಭಾರತದ ವಿವಿಧ ಭಾಗಗಳ ಪ್ರಮುಖನಗರಗಳಲ್ಲೆಲ್ಲ ಈ ಪೀಠದ ಶಾಖೆಗಳು ಸ್ಥಾಪಿತವಾಗಿದ್ದು ಅಪಾರವಾದ ಆಸ್ತಿಯನ್ನೂ ಶಿಷ್ಯಕೋಟಿಯನ್ನೂ ಈ ಪೀಠವು ಸಂಪಾದಿಸಿಕೊಂಡಿದೆ. ಇಂಥ ಸ್ಥಳವನ್ನು ಪ್ರಾರಂಭಕ್ಕೆ ಆಚಾರ್ಯರು ಆರಿಸಿಕೊಂಡ ಬಗ್ಗೆ ಈ ಕಥೆಯಿದೆ:-

ಆಚಾರ್ಯರು ಶಿಷ್ಯ ಸಮೇತರಾಗಿ ಸಂಚಾರಕ್ರಮದಿಂದ ಶೃಂಗಗಿರಿಕ್ಷೇತ್ರಕ್ಕೆ ಬಂದಾಗ ತುಂಗಾನದಿಯ ದಡದಲ್ಲಿ ಒಂದು ಆಶ್ಚರ್ಯವನ್ನು ಕಂಡರು. ಏನೆಂದರೆ

ಉರಿಬಿಸಿಲಿನ ಹವೆಯಲ್ಲಿ ಒಂದು ಗರ್ಭಿಣಿಯಾದ ಕಪ್ಪೆಯು ಹೆರಿಗೆಗೆ ಕಾಲವಾಗಿರಲು ಬಳಲುತ್ತಾ ಮರಿಯನ್ನು ಈಯುತ್ತಿತ್ತು. ಇದರ ಸಂಕಟವನ್ನು ನೋಡಲಾರದೆ ಒಂದು ನಾಗರಹಾವು ಆ ಕಾಲಕ್ಕೆ ತನ್ನ ಹೆಡೆಯನ್ನು ಬಿಚ್ಚಿ ಕಪ್ಪೆಗೆ ನೆರಳನ್ನು ಒದಗಿಸಿತ್ತು. 'ಸ್ವಭಾವದಿಂದ ವೈರಿಗಳಾದ ಹಾವು ಕಪ್ಪೆಗಳು ತಮ್ಮ ವೈರವನ್ನು ತ್ಯಜಿಸಿ ಅನ್ಯೋನ್ಯವಾಗಿ ಸಹಾಯಬುದ್ಧಿಯಿಂದ ವರ್ತಿಸುತ್ತಿರುವದು ಕ್ಷೇತ್ರಮಹಿಮೆಯೇ ಸರಿ ; ಯಾವ ಮತಕ್ಕೂ ವಿರೋಧವಲ್ಲದ ಅದ್ವೈತಸಿದ್ಧಾಂತವನ್ನು ಪ್ರಚಾರಮಾಡಲು ಪೀಠವೊಂದನ್ನು ಸ್ಥಾಪಿಸುವದಕ್ಕೆ ಇದು ಸೂಕ್ತವಾದ ಸ್ಥಳವಾಗಿದೆ'- ಎಂದು ಆಚಾರ್ಯರು ಆಲೋಚಿಸಿ ಇಲ್ಲಿಯೇ ನಿಂತರು. ಹೀಗೆ ಇಲ್ಲಿ ಒಂದಾನೊಂದು ಕಾಲಕ್ಕೆ ನಡೆದ ಘಟನೆಯು ಮಠ ಸ್ಥಾಪನೆಗೆ ನಾಂದಿಯಾಯಿತೆಂದು ತಿಳಿದುಬರುತ್ತದೆ. ಈಗಲೂ ಈ ಘಟನೆಯನ್ನು ನೆನಪಿಗೆ ತರುವ ಒಂದು ಕಲ್ಲಿನ ಕೆತ್ತನೆಯ ಸ್ಮಾರಕವು ಶ್ರೀಮಠದ ಹತ್ತಿರದಲ್ಲಿ ಹರಿಯುತ್ತಿರುವ ತುಂಗಾನದಿಯ ಮೆಟ್ಟಿಲುಗಳ ಒಂದು ಭಾಗದಲ್ಲಿ ಇದೆ. ಈಗ ಆಚಾರ್ಯರು ಶ್ರೀಶಾರದದೇವಿಯನ್ನು ಸ್ಥಾಪಿಸಿದ ವಿಚಾರವನ್ನು ತಿಳಿಯೋಣ.

## ಶ್ರೀಶಾರದಾಂಬಾಪ್ರತಿಷ್ಠೆ :

ಆಚಾರ್ಯರು ಕೆಲವು ಕಾಲ ಶೃಂಗಗಿರಿಕ್ಷೇತ್ರದ ಭೂಮಿಯನ್ನೆಲ್ಲ ಸಂಚರಿಸಿದರು. ಸಮೀಪದ ಋಷ್ಯಶೃಂಗಪರ್ವತದಲ್ಲಿಯೂ ಕೆಲವು ಕಾಲ ನಿಂತು ತಪಸ್ಸುಮಾಡಿದರು. ತ್ರೇತಾಯುಗದ ರಾಮಾಯಣಕಾಲದಿಂದಲೂ ಪ್ರಸಿದ್ಧರಾಗಿರುವ ವಿಭಾಂಡಕಪುತ್ರರಾದ ಋಷ್ಯಶೃಂಗರು ಈಗಲೂ ಈ ಪರ್ವತದಲ್ಲಿ ತಪಸ್ಸು ಮಾಡಿಕೊಂಡಿರುತ್ತಾರೆಂದು ಪ್ರತೀತಿಯಿದೆ. ಆಚಾರ್ಯರಿಗೂ ಈ ವಿಚಾರವು ತಿಳಿದಿದ್ದು ಇಂಥ ಬ್ರಹ್ಮಚರ್ಯನಿಷ್ಠರಾದ ಋಷಿಗಳ ತಪೋಭೂಮಿಯೇ ಬ್ರಹ್ಮವಿದ್ಯಾಸಂಪ್ರದಾಯಪರಂಪರೆಯನ್ನು ಬೆಳೆಸಲು ತಕ್ಕದ್ದೆಂದೂ ಬ್ರಹ್ಮಚರ್ಯ ಪರಿಪಾಲನೆಯಿಂದಲೇ ಆತ್ಮ ಜ್ಞಾನಸಿದ್ಧಿಯು ಸುಲಭ ಸಾಧ್ಯವೆಂದೂ ಆತ್ಮಜ್ಞಾನವನ್ನು ದೇವೇಂದ್ರನಿಗೆ ಉಪದೇಶಿಸಿದ ಉಮೆಯು ವಾಗ್ದೇವಿಯಾಗಿ ತಮಗೆ ವರಪ್ರದಾನಮಾಡಿರುವದರಿಂದ ಉಮಾ, ಲಕ್ಷ್ಮೀ, ಸರಸ್ವತೀ- ಎಂಬ ತ್ರಿವಿಧ ರೂಪಧಾರಿಣಿಯಾದ ಶಾರದೆಯನ್ನು ಇಲ್ಲಿಯೇ ಪ್ರತಿಷ್ಠಾಪಿಸುವದು ಯೋಗ್ಯವೆಂದೂ ಭಾವಿಸಿದರು. ಅದಕ್ಕೆ ಪೂರ್ವಭಾವಿಯಾಗಿ ಕೆಲವು ಕಾಲ ತಮ್ಮ ಶಿಷ್ಯರಿಗೆ ಮುಖ್ಯವಾದ ಪ್ರಸ್ಥಾನತ್ರಯಭಾಷ್ಯಗಳನ್ನೆಲ್ಲ ಪಾಠಹೇಳಿದರು. ವೇದಾಂತ ತತ್ತ್ವಪ್ರವಚನ, ತದ್ವಿಚಾರ, ತದರ್ಥಾನು ಸಂಧಾನಗಳಿಂದ ವಾತಾವರಣವನ್ನೆಲ್ಲ ಬ್ರಹ್ಮವಿದ್ಯಾಮಯವಾಗಿ ಪರಿವರ್ತಿಸಿದರು. ಜೀವೇಶ್ವರಭೇದವನ್ನಳಿದ ನಿರ್ವಿಶೇಷ ನಿರ್ಗುಣಪರಬ್ರಹ್ಮತತ್ತ್ವವನ್ನು ಶಿಷ್ಯರಿಗೆ ಶ್ರುತಿಯುಕ್ತಿಅನುಭವಗಳ ಬಲದಿಂದ ಪದವಾಕ್ಯಪ್ರಮಾಣ ಬದ್ಧವಾಗಿ ತಿಳಿಸಿ ಶಿಕ್ಷಣವನ್ನು ನೀಡಿದರು. ಸಾಕ್ಷಾದ್

ಬೃಹಸ್ಪತಿಯಂತೆ ವಿರಾಜಮಾನರಾಗಿದ್ದ ಆಚಾರ್ಯರು ಶುದ್ಧ ಸತ್ತ್ವರೂ ವೇದಾಂತವಿಜ್ಞಾನಸುನಿಶ್ಚಿತಾರ್ಥರೂ ಪರಮಹಂಸಪರಿವ್ರಾಜಕರೂ ಆಗಿ ಈ ಕ್ಷೇತ್ರವನ್ನು ಬೆಳಗಿದರು. ಒಂದಾನೊಂದು ಶುಭಮುಹೂರ್ತದಲ್ಲಿ ಭಾರತೀದೇವಿಯನ್ನು ಸಂಸ್ಥಾಪಿಸಲು ಸಂಕಲ್ಪಿಸಿ ಸುಂದರವಾದ ಒಂದು ದೇವಾಲಯವನ್ನೂ ವಿಮಾನವನ್ನೂ ನಿರ್ಮಾಣ ಮಾಡಿಸಿದರು. ಬ್ರಹ್ಮಾದಿದೇವತೆಗಳಿಂದಲೂ ಪೂಜಿತಳಾದ ಶಾರದಾಂಬೆಯನ್ನು ಶ್ರೀಚಕ್ರಪುರಮಧ್ಯದಲ್ಲಿ ಸ್ಥಾಪಿಸಿದರು. ದೇವಿಯ ನಿತ್ಯಾರ್ಚನೆಗೂ ಪಕ್ಷ, ಮಾಸ, ಋತು, ಸಂವತ್ಸರಗಳಲ್ಲಿ ಆಯಾ ವಿಶೇಷಸಂದರ್ಭಕ್ಕೆ ನೆರವೇರಬೇಕಾದ ವಿಶೇಷಾರ್ಚನೆಗಳಿಗೂ ಏರ್ಪಾಡುಮಾಡಿದರು. ಆಚಾರ್ಯರ ಸಿದ್ಧಾಂತವು ಅದ್ವೈತವಾದರೂ ವ್ಯವಹಾರದಲ್ಲಿ ಶಿಷ್ಯಜನರಿಗೆ ಬುದ್ಧಿಭೇದವುಂಟಾಗಬಾರದೆಂದು ಭಾವಿಸಿ ಲೋಕಸಂಗ್ರಹಬುದ್ಧಿಯಿಂದ ವೇದದ ಕರ್ಮಕಾಂಡದ ಆದೇಶದಂತೆ ದೇವಿಯ ಪೂಜಾವಿಧಾನಗಳನ್ನೂ ಜಪಹೋಮಾರ್ಚನಾದಿ ಕ್ರಮಗಳನ್ನೂ ಹಬ್ಬ ಹರಿದಿನಗಳ ಆಚರಣೆಯನ್ನೂ ವಿಶೇಷವಾಗಿ ಶರನ್ನವರಾತ್ರಿಯಲ್ಲಿ ದೇವಿಗೆ ವಿಶೇಷ ಪೂಜಾಪದ್ಧತಿಯನ್ನೂ ನಡೆಯಿಸುವ ವ್ಯವಸ್ಥೆ ಮಾಡಿ ಶಿಷ್ಯರಿಗೆ ಇವುಗಳ ಜವಾಬ್ದಾರಿಯನ್ನು ವಹಿಸಿಕೊಟ್ಟರು. ತಾವು ಭಾರತಿಯ ಉಪಾಸಕರೆಂಬುದನ್ನು ಮುಂದಿನ ಪರಂಪರೆಯವರು ಮರೆಯದೆ ಯಾವಾಗಲೂ ನೆನೆಯುತ್ತಿರಲು ಅನುಕೂಲವಾಗುವಂತೆ ಸಂನ್ಯಾಸಿಶಿಷ್ಯರುಗಳ ಯೋಗಪಟ್ಟದ ಹೆಸರಿನ ಕೊನೆಯಲ್ಲಿ 'ಭಾರತೀ' ಎಂಬ ಶಬ್ದವನ್ನೂ ಜೋಡಿಸುವಂತೆ ಸೂಚಿಸಿದರು. ಈಗಲೂ ಇದೇ ಸಂಪ್ರದಾಯವು ಜಾರಿಯಲ್ಲಿದೆ. ದೇವಿಯ ಪ್ರೀತ್ಯರ್ಥವಾಗಿ ವೈದಿಕತಾಂತ್ರಿಕ ವಿಧಿಗಳ ಸಮರಸದಿಂದ ಪೂಜಾಕ್ರಮಗಳನ್ನೂ ಪಾರಾಯಣ, ಹೋಮ, ಸುವಾಸಿನೀಪೂಜಾ, ಅನ್ನದಾನಾದಿ ಉಪಚಾರಗಳನ್ನೂ ಪ್ರತಿವರ್ಷವೂ ಕೈಗೊಳ್ಳುವಂತೆ ಏರ್ಪಡಿಸಿದರು. ಈ ಎಲ್ಲಾ ವ್ಯವಸ್ಥೆಗಾಗಿಯೂ ಶಿಷ್ಯಕೋಟಿಯ ಉಪಯೋಗಕ್ಕಾಗಿಯೂ 'ಶಾರದಾಪೀಠ'ವೆಂಬ ಹೆಸರಿನಿಂದ 'ಮಠ'ವನ್ನು ಸ್ಥಾಪಿಸಿದರು. ಆಚಾರ್ಯರಿಂದ ಸ್ಥಾಪಿಸಲ್ಪಟ್ಟಿರುವ ದೇವಿಯು 'ಶಾರದಾಂಬಾ' ಎನಿಸಿ ಈಗಲೂ ಶೃಂಗಗಿರಿವಾಸಿನಿಯಾಗಿ ಭಕ್ತಾನುಗ್ರಹವನ್ನು ಮಾಡುತ್ತಾ ಇದ್ದಾಳೆಂದು ಈ ಕೆಳಗಿನ ಪದ್ಯದಿಂದ ತಿಳಿಯಬಹುದು.

**ಯಾ ಶಾರದಾಂಬೇತ್ಯಭಿಧಾಂ ವಹಂತೀ**
**ಕೃತಾಂ ಪ್ರತಿಜ್ಞಾಂ ಪರಿಪಾಲಯಂತೀ ।**
**ಅದ್ಯಾಪಿ ಶೃಂಗೇರಿಪುರೇ ವಸಂತೀ**
**ಪ್ರದ್ಯೋತತೇಽಭೀಷ್ಟವರಾನ್ ದಿಶಂತೀ ॥**

''ಯಾವ ದೇವಿಯು ಶಾರದಾಂಬೆಯೆಂಬ ಹೆಸರನ್ನು ಸ್ವೀಕರಿಸಿ ತಾನು ಕೊಟ್ಟ ವಚನವನ್ನು ಪರಿಪಾಲಿಸುತ್ತಾ ಈಗಲೂ ಶೃಂಗೇರಿಪುರದಲ್ಲಿ ವಾಸಿಸುತ್ತಾ

ಇಷ್ಟಾರ್ಥಗಳನ್ನು ನೀಡುತ್ತಿರುವಳೋ ಆ ದೇವಿಯನ್ನು (ಭಜಿಸುವೆನು)'- ಎಂದಭಿಪ್ರಾಯ.

## ಶೃಂಗೇರಿಯಲ್ಲಿ ಶಿಷ್ಯಸ್ವೀಕಾರ :

ಆಚಾರ್ಯರು ಶೃಂಗೇರಿಯಲ್ಲಿ ವಾಸವಾಗಿದ್ದಾಗ ಒಬ್ಬ ಶಿಷ್ಯನು ಅವರಿಗೆ ದೊರಕಿದ್ದನು. ಎಲ್ಲರೊಡನೆ ಆತನಿಗೂ ಭಾಷ್ಯಪಾಠಾದಿಗಳನ್ನು ಆಚಾರ್ಯರು ಅನುಗ್ರಹಿಸುತ್ತಿದ್ದರು. ಆ ಶಿಷ್ಯನಿಗೆ ಪಾಠಕ್ಕಿಂತಲೂ ಗುರುಸೇವೆಯಲ್ಲಿಯೇ ಹೆಚ್ಚಿನ ಪ್ರೇಮವಿತ್ತು. ಆತನು ಬಹಳಮಟ್ಟಿಗೆ ಗುರುಸಮೀಪದಲ್ಲಿಯೇ ಇದ್ದುಕೊಂಡು ಪಾದಸಂವಾಹನ- ಎಂದರೆ ಕಾಲುಗಳನ್ನು ಒತ್ತುವದು, ಬಟ್ಟೆಗಳನ್ನು ಒಗೆದು ಮಡಿಮಾಡಿಕೊಡುವದು, ಆಹ್ನಿಕಸ್ನಾನಾದಿಗಳಿಗೆ ಏರ್ಪಡಿಸಿಟ್ಟು ಸಹಾಯ ಮಾಡುವದು, ರಾತ್ರೆಯಲ್ಲಿಯೂ ಗುರುಸನ್ನಿಧಿಯಲ್ಲೇ ಇದ್ದು ಅಗತ್ಯವಾದ ಸಮಯೋಚಿತವಾದ ಸೇವೆಯನ್ನು ಸಲ್ಲಿಸುವದು- ಹೀಗೆ ಮಾಡುತ್ತಿದ್ದನು. ಅವನಿಗೆ ಪಾಠಗಳೇನೂ ಅಷ್ಟಾಗಿ ಹಿಡಿಯಲಿಲ್ಲ. ಇದು ಉಳಿದ ಶಿಷ್ಯರಿಗೂ ತಿಳಿದಿತ್ತು. ಈತನು ದಡ್ಡಶಿಷ್ಯನೆಂದೂ ಬೆಟ್ಟದಂತೆ ಜಡನೆಂದೂ ಭಾವಿಸಿ ಇತರ ಶಿಷ್ಯರುಗಳು 'ಗಿರಿ' ಎಂದೇ ಇವನನ್ನು ಸಂಬೋಧಿಸುತ್ತಿದ್ದರು. ಈತನು ಗುರುವಿನ ಸಮೀಪದಲ್ಲಿದ್ದಾಗ ಆಕಳಿಸುತ್ತಿರಲಿಲ್ಲ; ಕೈಕಾಲುಗಳನ್ನು ಚಾಚುತ್ತಿರಲಿಲ್ಲ. ಬಹಳವಾಗಿ ಮಾತನಾಡುತ್ತಿರಲಿಲ್ಲ. ಗುರುಗಳು ಕುಳಿತಾಗ ನಿಂತಿರುತ್ತಿದ್ದನು. ಅವರಿಗೆ ಎಂದೂ ಬೆನ್ನು ತೋರಿಸಿ ನಡೆಯುತ್ತಿರಲಿಲ್ಲ. ಅವರು ಹೊರಟರೆ ಹಿಂದುಗಡೆಯೇ ಹೋಗುತ್ತಿದ್ದನು. ಏನಾದರೂ ಹೇಳುತ್ತಿದ್ದರೆ ವಿನಯದಿಂದ ಕೇಳುತ್ತಿದ್ದನು. ಗುರುಗಳಿಗೆ ಅಹಿತವಾದದ್ದೇನನ್ನೂ ಮಾಡುತ್ತಿರಲಿಲ್ಲ. ಇದರಿಂದ ಸಹಜವಾಗಿಯೇ ಗುರುಗಳಿಗೆ ಇವನಲ್ಲಿ ಪ್ರೇಮವುಂಟಾಗಿತ್ತು.

ಒಂದು ದಿನ ಶಿಷ್ಯರುಗಳೆಲ್ಲರೂ ಪಾಠಕ್ಕೆ ಸಿದ್ಧರಾಗುತ್ತಿರುವಲ್ಲಿ ಗಿರಿಯು ಇನ್ನೂ ಹಾಜರಾಗಿರಲಿಲ್ಲ. ಅವನ ವಿಷಯಕ್ಕೆ ಉದಾಸೀನಬುದ್ಧಿಯುಳ್ಳವರಾಗಿದ್ದ ಕೆಲವು ಶಿಷ್ಯರು ಗುರುಗಳು ಪೀಠವನ್ನಲಂಕರಿಸಿದ ಕೂಡಲೆ ಶಾಂತಿ ಪಾಠವನ್ನಾರಂಭಿಸಿಬಿಟ್ಟರು. ಆಚಾರ್ಯರು ''ಸ್ವಲ್ಪ ತಡೆಯಿರಿ; ಗಿರಿಯೂ ಬರಲಿ'' ಎಂದರು. ಆ ಸಮಯದಲ್ಲಿ ಅವನು ಇನ್ನೂ ಗುರುಗಳ ವಸ್ತ್ರಗಳನ್ನು ಒಗೆಯುತ್ತಾ ನದಿಯ ತೀರದಲ್ಲಿದ್ದನು. ಶಿಷ್ಯರಲ್ಲಿ ಕೆಲವರು ''ಗುರುಗಳೆ, ಗಿರಿಯು ಪಾಠಕ್ಕೆ ಹಾಜರಾದರೂ ಆಗದಿದ್ದರೂ ಏನೂ ವ್ಯತ್ಯಾಸವಾಗಲಾರದು. ಅವನಿಗೆ ಪಾಠಗಳನ್ನು ಗ್ರಹಿಸುವ ಸಾಮರ್ಥ್ಯವೆಲ್ಲಿದೆ? ಇಂಥವನು ಎಲ್ಲಿದ್ದರೇನು?'' ಎಂದುಬಿಟ್ಟರು. ಇದು ಗುರುಗಳ ಮನಸ್ಸಿಗೆ ನೋವುಂಟುಮಾಡಿತು. ಆಗ ಗುರುಗಳು ಉಳಿದ ಶಿಷ್ಯರ ಅಹಂಕಾರವನ್ನು ಹಿಮ್ಮೆಟ್ಟಿಸುವದಕ್ಕೂ ಹಾಗೂ ಶಿಷ್ಯನ ಮೇಲಿನ ಕರುಣೆಯಿಂದಲೂ

ಶಾರದಾದೇವಿಯನ್ನು ಹೃದಯದಲ್ಲಿ ನೆನೆದು ತಮ್ಮ ಪ್ರಿಯಶಿಷ್ಯನಿಗೆ ಹದಿನಾಲ್ಕು ವಿದ್ಯೆಗಳೂ ಹೊಳೆಯಲೆಂದು ಅನುಗ್ರಹಿಸಿ ಬಿಟ್ಟರು. ಕೂಡಲೆ ನದಿಯ ತೀರದಲ್ಲಿಯೇ ಇದ್ದ ಆ ಶಿಷ್ಯನು ವಿದ್ಯಾವರ್ಚಸ್ಸಿನಿಂದ ಶೋಭಿಸಿದನು. ಅವನಿಗೆ ತತ್ತ್ವವು ಹೃದಯದಲ್ಲಿ ಸ್ಫುರಿಸಿತು. ಎಲ್ಲಾ ವಿದ್ಯೆಗಳಲ್ಲಿಯೂ ನೈಪುಣ್ಯವೂ ಉಂಟಾಗಿಬಿಟ್ಟತು. ಕೂಡಲೆ ತನ್ನ ಗುರುವನ್ನು ಆತನು ಸಂಸ್ಕೃತಕವಿತಾಮಯವಾದ ಬ್ರಹ್ಮವಿದ್ಯಾಪ್ರತಿಪಾದಕವಾದ ಪದ್ಯಗಳಿಂದ ಸ್ತುತಿಸುತ್ತಾ ಬಳಿಸಾರಿದನು. ಆ ಪದ್ಯಗಳು ಛಂದಶ್ಶಾಸ್ತ್ರನಿಯಮದಂತೆ 'ತೋಟಕ' ವೆಂಬ ವೃತ್ತಬದ್ಧವಾಗಿದ್ದವು. ಒಂದೆರಡು ಪದ್ಯಗಳನ್ನು ನೋಡಿರಿ:

**ಭಗವನ್ನುದಧೌ ಮೃತಿಜನ್ಮಜಲೇ**
**ಸುಖದುಃಖಝಷೇ ಪತಿತಂ ವ್ಯಥಿತಮ್ ।**
**ಕೃಪಯಾ ಶರಣಾಗತಮುದ್ಧರ ಮಾ-**
**ಮನುಶಾಧ್ಯುಪಸನ್ನಮನನ್ಯಗತಿಮ್ ॥**

**ವಿಸೃಜಾನ್ನಮಯಾದಿಷು ಪಂಚಸು ತಾ-**
**ಮಹಮಸ್ಮಿ ಮಮೇತಿ ಮತಿಂ ಸತತಮ್ ।**
**ದೃಶಿರೂಪಮನಂತಮಜಂ ವಿಗುಣಂ**
**ಹೃದಯಸ್ಥಮವೇಹಿ ಸದಾಹಮಿತಿ॥**

''ಪೂಜ್ಯನೆ, ಜನನಮರಣಗಳೆಂಬ ನೀರಿನಿಂದಲೂ ಸುಖದುಃಖಗಳೆಂಬ ತಿಮಿಂಗಿಲಗಳಿಂದಲೂ ತುಂಬಿರುವ (ಸಂಸಾರ) ಸಮುದ್ರದಲ್ಲಿ ಜಾರಿಬಿದ್ದಿರುವ ದುಃಖಿತನಾದ ಹಾಗೂ ಶರಣಾಗತನಾಗಿ ಗುರುಪಾದಮೂಲಗಳಿಗೆ ಬಂದಿರುವ ನನ್ನನ್ನು ಉದ್ಧಾರಮಾಡು. ಎಲೈ ಮನವೆ, ಅನ್ನಮಯಾದಿ ಐದುಕೋಶಗಳಲ್ಲಿ ನಾನು ನನ್ನದು- ಎಂಬ ಅಹಂಕಾರವನ್ನು ಬಿಡು. ಅನಂತವೂ ಅಜವೂ ನಿರ್ಗುಣವೂ ಆಗಿರುವ, ದೃಗ್ರೂಪವಾಗಿ ಯಾವಾಗಲೂ ಹೃದಯದಲ್ಲಿಯೇ ಇರುವ ಆತ್ಮನೇ ನಾನೆಂದು ಎಂದೆಂದೂ ತಿಳಿಯುವವನಾಗು''- ಎಂದು ಈ ಪದ್ಯಗಳ ಭಾವಾರ್ಥ. ಹೀಗೆ ಅಮೃತರೂಪವಾದ ವಾಕ್ಯಗಳಿಂದ ಗುರುಗಳನ್ನೂ ಪರತತ್ತ್ವವನ್ನೂ ಸ್ತುತಿಸುತ್ತಾ ಆಚಾರ್ಯರ ಸಮೀಪಕ್ಕೆ ಬಂದ ಶಿಷ್ಯನನ್ನು ಕಂಡು ಉಳಿದ ಪದ್ಮಪಾದಾದಿ ಶಿಷ್ಯರುಗಳೆಲ್ಲರೂ ಆಶ್ಚರ್ಯಭರಿತರಾದರು. ಗುರುಭಕ್ತಿಯು ಎಂಥ ಪವಾಡವನ್ನು ಮಾಡಬಲ್ಲದು- ಎಂಬುದನ್ನು ಅರಿತುಕೊಂಡರು. ''ಹೇಗೆ ಭೂಮಿಯನ್ನು ಪಿಕಾಸಿಯಿಂದ ಅಗೆಯುವವನು ಅಗೆದಂತೆಲ್ಲ ನೀರನ್ನು ಪಡೆಯುವನೋ ಹಾಗೆ ಗುರುವಿನಲ್ಲಿರುವ ವಿದ್ಯೆಯನ್ನು ಗುರುಸೇವಾ ಪರಾಯಣನಾದ ಶಿಷ್ಯನು ಆಳವಾಗಿಯೇ ಒಳಹೊಕ್ಕು ಪೂರ್ಣವಾಗಿ ಪಡೆದುಕೊಂಡುಬಿಡುವನು'' ಎಂಬ ಮನುಸ್ಮೃತಿಕಾರರ ಉಪದೇಶವೂ ಪದ್ಮಪಾದರಿಗೆ ನೆನಪಾಗಿ ಬಿಟ್ಟಿತು. ಹೀಗೆ

ಗುರುಕೃಪಾಪಾತ್ರನಾಗಿ ಕೃತಾರ್ಥನಾದ ಶಿಷ್ಯನಿಗೆ - ಅವನು ರಚಿಸಿದ್ದ ಪದ್ಯಗಳ ವೃತ್ತವು ನೆನಪಿಗೆ ಬಂದು- **ತೋಟಕಾಚಾರ್ಯ**ನೆಂದೇ ಅವನನ್ನು ಗುರುಗಳು ಕರೆಯಲಾರಂಭಿಸಿದರು. ಈ ಶಿಷ್ಯನ ಸೇರ್ಪಡೆಯಿಂದ ಆಚಾರ್ಯರ ಪ್ರಧಾನಶಿಷ್ಯರು ನಾಲ್ಕು ಜನರಾದರು. ಈ ನಾಲ್ವರನ್ನು ಕುರಿತು ಶಂಕರವಿಜಯಕಾರರು ವರ್ಣಿಸಿರುವ ಈ ಪದ್ಯವನ್ನು ನೋಡಿರಿ :

**ಪುಮರ್ಥಾಶ್ಚತ್ವಾರಃ ಕಿಮುತ ನಿಗಮಾ ಋಕ್‌ಪ್ರಭೃತಯಃ**
**ಪ್ರಭೇದಾ ವಾ ಮುಕ್ತೇಃ ವಿಮಲತರಸಾಲೋಕ್ಯಮುಖರಾಃ ।**
**ಮುಖಾನ್ಯಾಹೋ ಧಾತುಶ್ಚಿರಮಿತಿ ವಿಮೃಶ್ಯಾಥ ವಿಬುಧಾಃ**
**ವಿದುಃ ಶಿಷ್ಯಾನ್ ಹಸ್ತಾಮಲಕಮುಖರಾನ್ ಶಂಕರಗುರೋಃ ॥**

ಶ್ರೀಶಂಕರಜಗದ್ಗುರುಸಾರ್ವಭೌಮರ ಅಂತೇವಾಸಿಗಳಾಗಿದ್ದ ನಾಲ್ಕು ವಿನೇಯರನ್ನು ಕಂಡ ವಿದ್ವಾಂಸರುಗಳು ಹಿಗೆ ಚಿಂತಿಸುತ್ತಿದ್ದರು. ಈ ನಾಲ್ವರು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ- ಪುರುಷಾರ್ಥಾಭಿಮಾನಿ ದೇವತೆಗಳಿರಬಹುದೆ? ಅಥವಾ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದಗಳೆಂಬ ನಾಲ್ಕು ವೇದಪುರುಷರುಗಳಿರಬಹುದೆ? ಅಥವಾ ವಿಮಲವಾದ ಮೋಕ್ಷಸಾಮ್ರಾಜ್ಯದ ಪ್ರಭೇದಗಳಾದ ಸಾಯುಜ್ಯ, ಸಾಮಿಪ್ಯ, ಸಾರೂಪ್ಯ, ಸಾಲೋಕ್ಯ- ಎಂಬ ನಾಲ್ಕು ವಿಧಗಳಾಗಿರಬಹುದೆ? ಅಥವಾ ಚತುರ್ಮುಖ ಬ್ರಹ್ಮನ ನಾಲ್ಕು ದಿಕ್ಕುಗಳಿಗೂ ತಿರುಗಿರುವ ನಾಲ್ಕು ಮುಖಗಳಿರಬಹುದೆ? ಆಹಾ! ಇವು ಯಾವವೂ ಇರಲಾರವು. ಜಗದ್ಗುರು ಶ್ರೀಶಂಕರಭಗವತ್ಪಾದರವರ ಶಿಷ್ಯಾಗ್ರೇಸರರುಗಳಾದ (೧) ಪದ್ಮಪಾದ (ಸನಂದನ) (೨) ಸುರೇಶ್ವರ (೩) ಹಸ್ತಾಮಲಕ (೪) ತೋಟಕ (ಗಿರಿ) ರುಗಳೇ ಇವರು- ಎಂದು ತಿಳಿದು ಆನಂದಭರಿತರಾಗುತ್ತಿದ್ದರಂತೆ.

## ಆಚಾರ್ಯರ ಮಾತೃಭಕ್ತಿ :

ಅನಂತರ ಆಚಾರ್ಯರು ಕೆಲವು ಕಾಲ ಶ್ರೀ ಸುರೇಶ್ವರಾದಿಶಿಷ್ಯರೊಡಗೂಡಿ ಶೃಂಗೇರಿಯಲ್ಲಿದ್ದರು. ಆಗ ಒಮ್ಮೆ ಕಾಲಟಿಯಲ್ಲಿದ್ದ ತಮ್ಮ ತಾಯಿಯು ದೇಹ ತ್ಯಾಗ ಮಾಡುವ ಸ್ಥಿತಿಯಲ್ಲಿದ್ದಾಳೆಂಬುದು ಜ್ಞಾನದೃಷ್ಟಿಯಿಂದ ಗೊತ್ತಾಯಿತು. ಸಂನ್ಯಾಸಸ್ವೀಕಾರಕಾಲಕ್ಕೆ ತಾವು ತಾಯಿಗೆ ನೀಡಿದ್ದ ವಾಗ್ದಾನವನ್ನು ಸ್ಮರಿಸಿಕೊಂಡರು. ಕೂಡಲೆ ತಮ್ಮ ಯೋಗಶಕ್ತಿಯಿಂದ ಆಕಾಶಮಾರ್ಗವಾಗಿ ಹೊರಟು ತಾಯಿಯು ಇರುವ ಜಾಗಕ್ಕೆ ಬಂದು ಸೇರಿದರು. ತಾಯಿಯ ಪಾದಗಳಿಗೆ ವಂದಿಸಿದರು. **ಸಂನ್ಯಾಸಿಯಾದವನು ತನ್ನ ಮಾತೃವಿಗೆ ಮಾತ್ರ ನಮಸ್ಕರಿಸತಕ್ಕದ್ದೆಂದು ಸ್ಮೃತಿಗಳು ತಿಳಿಸುತ್ತವೆ. ಏಕೆಂದರೆ ಮಾತೃಋಣವು ಬಹು ದೊಡ್ಡದು. ಆಕೆಯ ಅನುಗ್ರಹದಿಂದಲೇ ಈ ಪಾಂಚಭೌತಿಕದೇಹವು ನಮಗೆ ದೊರಕಿರುತ್ತದೆ. ಆಚಾರ್ಯರು ತಾವು ಮಾತೃಭಕ್ತಿಯನ್ನು ಆಚರಿಸಿ ಆ**

**ಮೂಲಕ ಲೋಕಕ್ಕೆಲ್ಲ ಆದರ್ಶರಾಗಿರುತ್ತಾರೆ.** ಆದ್ದರಿಂದ ತಮ್ಮ ಪ್ರತಿಜ್ಞಾ ವಚನದಂತೆ ದರ್ಶನವನ್ನು ನೀಡಿದಾಗ ಆಕೆಗೆ ನೆಮ್ಮದಿಯಾಯಿತು. ''ತಾಯೇ, ನೀನು ದುಃಖವನ್ನು ಬಿಡು, ನಿನಗೇನು ಸೇವೆಯನ್ನು ಸಲ್ಲಿಸಲಿ?'' ಎಂದರು. ಆಗ ಆಕೆಯು ''ಮಗು, ಈ ಸ್ಥಿತಿಯಲ್ಲಿ ನಾನು ನಿನ್ನನ್ನು ಕಂಡದ್ದು ಪುಣ್ಯವಿಶೇಷವೇ ಸರಿ; ಇನ್ನು ನಾನು ಈ ಗಳಿತವಾದ ಶರೀರದಿಂದ ಬದುಕಲಾರೆನು ; ಇದನ್ನು ತ್ಯಾಗಮಾಡಿಬಿಡುವೆನು. ನಂತರ ನೀನು ಶಾಸ್ತ್ರಾನುಸಾರವಾಗಿ ಸಂಸ್ಕಾರಮಾಡಿ ನನ್ನನ್ನು ಪುಣ್ಯಲೋಕಗಳಿಗೆ ಸೇರಿಸಿಬಿಡು'' ಎಂದಳು. ಆಗ ಆಚಾರ್ಯರು ಆತ್ಮನಿಗೆ ಹುಟ್ಟು ಸಾವುಗಳಿಲ್ಲವೆಂದೂ ಆತ್ಮನು ನಿತ್ಯಶುದ್ಧನಿರ್ವಿಶೇಷ ಸ್ವರೂಪವೂ ಪರಬ್ರಹ್ಮವೂ ಆಗಿರುವನೆಂಬುದನ್ನು ಶ್ರುತಿವಾಕ್ಯಗಳ ಅನುಸಾರವಾಗಿ ಬೋಧಿಸಿದರು. ಅದು ಆಕೆಗೆ ರುಚಿಸಲಿಲ್ಲ. 'ಮಗು, ನನ್ನ ಮನಸ್ಸು ನಿರ್ಗುಣಬ್ರಹ್ಮದಲ್ಲಿ ನೆಲೆಗೊಳ್ಳಲು ಸಮರ್ಥವಾಗಿಲ್ಲ; ಸಗುಣವಾದ ಭವದ್ರೂಪವನ್ನೇ ತಿಳಿಸು' ಎಂದಳು. ದಯಾಳುಗಳಾದ ಅವರು ಕೂಡಲೆ ಅಷ್ಟಮೂರ್ತಿಯಾದ ಪರಶಿವನನ್ನು ಸ್ತೋತ್ರಮಾಡಿದರು. ಉದಾಹರಣೆಗಾಗಿ ಈ ಕೆಳಗಿನ ಪದ್ಯವನ್ನು ನೋಡಿರಿ.

**ಮಹಾದೇವ ದೇವೇಶ ದೇವಾಧಿದೇವ**
**ಸ್ಮರಾರೇ ಪುರಾರೇ ಯಮಾರೇ ಹರೇತಿ ।**
**ಬ್ರುವಾಣಃ ಸ್ಮರಿಷ್ಯಾಮಿ ಭಕ್ತ್ಯಾ ಭವಂತಂ**
**ತತೋ ಮೇ ದಯಾಶೀಲ ದೇವ ಪ್ರಸೀದ ॥**

ಹೀಗೆ ಸ್ತುತಿಸಿದಾಗ ಮಹಾದೇವನು ಪ್ರಸನ್ನನಾಗಿ ಕೈಲಾಸದಿಂದ ತನ್ನ ದೂತರನ್ನು ಕಳುಹಿಸಿದನು. ಅವರುಗಳ ಭಯಂಕರವಾದ ವೇಷಭೂಷಣಗಳನ್ನೂ ಆಕಾರಗಳನ್ನೂ ಕಂಡು ಗಾಬರಿಗೊಂಡವಳಾಗಿ ಆರ್ಯಾಂಬೆಯು ತಾನು ಅವರುಗಳೊಡನೆ ಹೋಗಲಾರೆನೆಂದಳು. ಆಗ ಆಚಾರ್ಯರು ಅವರನ್ನು ಗೌರವಪೂರ್ವಕವಾಗಿ ಬೀಳ್ಕೊಟ್ಟು ಶ್ರೀಮಹಾವಿಷ್ಣುವನ್ನು ಸ್ತುತಿಸಿದವರಾದರು. ತಾಯಿಗೂ ಸಹ ಶ್ರೀ ಮಹಾವಿಷ್ಣುವನ್ನು ಚಿತ್ತದಲ್ಲಿ ಧ್ಯಾನಿಸುವಂತೆ ತಿಳಿಸಿದರು. ಅಂತ್ಯಕಾಲದಲ್ಲಿ ಮಾನವನು ಸ್ಮರಿಸಬೇಕಾದ ಭಗವಂತನ ದಿವ್ಯ ರೂಪಾಕಾರಗಳನ್ನು ಮತ್ತೆ ಮತ್ತೆ ನೆನಪುಮಾಡಿಕೊಟ್ಟರು. ''ತಾಯೆ, ಲೋಕಬಂಧುವೂ ಲೋಕನಾಥನೂ ಆದ ಮಾಧವನು ಕ್ಷೀರಸಮುದ್ರದಲ್ಲಿ ಆದಿಶೇಷನ ಹಾಸಿಗೆಯ ಮೇಲೆ ಮಲಗಿರುವನು. ಲಕ್ಷ್ಮೀದೇವಿಯ ವಕ್ಷಸ್ಥಲದಲ್ಲಿ ತನ್ನ ಪಾದಗಳನ್ನಿಟ್ಟಿರುವನು. ನೀಲಾದೇವಿ-ಭೂದೇವಿಯರು ಆತನಿಗೆ ಚಾಮರಗಳಿಂದ ಸೇವೆಗೈಯುತ್ತಿರುವರು. ಗರುಡನು ಎದುರಿಗೆ ವಿನೀತನಾಗಿ ಕೈಮುಗಿದು ನಿಂತಿರುವನು. ಆ ಭಗವಂತನು ತನ್ನ ಕೈಗಳಲ್ಲಿ ಶಂಖಚಕ್ರಗದೆ ಪದ್ಮಗಳನ್ನು ಧರಿಸಿರುವನು. ಕೌಸ್ತುಭವೆಂಬ ರತ್ನದಿಂದ ಅಲಂಕೃತನಾಗಿರುವನು. ತಮಾಲಪುಷ್ಪದಂತೆ ಕೋಮಲಾಂಗನಾಗಿರುವನು. ರತ್ನಕಿರೀಟವನ್ನು ಧರಿಸಿರುವನು. ಯೋಗಿಗಳಿಗೆ ಗಮ್ಯನಾಗಿರುವನು ; ಹೀಗೆಂದು ಧ್ಯಾನಮಾಡು

ವವಳಾಗು'' ಎಂದು ಉಪದೇಶಿಸಿದರು. ಆಗ ಆಕೆಯು ಯೋಗಿಯಂತೆ ಧ್ಯಾನವನ್ನು ಅಳವಡಿಸಿಕೊಂಡು ಭೌತಿಕದೇಹವನ್ನು ಬಿಟ್ಟಳು. ವಿರಾಜಮಾನವಾದ ವಿಮಾನವು ಬಂದಿತು. ವಿಷ್ಣುದೂತರು ಆಕೆಯನ್ನು ಅದರಲ್ಲಿ ಕುಳ್ಳಿರಿಸಿಕೊಂಡು ಅರ್ಚಿರ್ದೇವತೆ, ಅಹರ್ದೇವತೆ, ಶುಕ್ಲಪಕ್ಷದೇವತೆ, ವಾಯು, ಸೂರ್ಯ, ಚಂದ್ರ, ವಿದ್ಯುತ್, ವರುಣಾದಿಲೋಕಗಳನ್ನು ಕ್ರಮವಾಗಿ ದಾಟಿಸಿಕೊಂಡು ವೈಕುಂಠಕ್ಕೆ ಕರೆದು ಕೊಂಡುಹೋದರು. ಹೀಗೆ ಆರ್ಯಾಂಬೆಯು ಸದ್ಗತಿಯನ್ನು ಹೊಂದಿದಳು.

ಅನಂತರ ಮಾತೃವಿನ ಶರೀರಸಂಸ್ಕಾರಕ್ಕೆ ಸಹಾಯಮಾಡಲು ಆಚಾರ್ಯರು ತಮ್ಮ ಪೂರ್ವಾಶ್ರಮದ ಬಂಧುಗಳನ್ನು ಕರೆದರು. ಅವರಲ್ಲಿ ಕೆಲವರು ಸಂನ್ಯಾಸಿ ಯಾದವನು ಮೃತಸಂಸ್ಕಾರಕರ್ಮವನ್ನು ಮಾಡಲು ಅಧಿಕಾರಿಯಾಗಲಾರನೆಂದು ಹೀಯಾಳಿಸಿದರು. ಇದರಿಂದ ಆಚಾರ್ಯರಿಗೆ ನೋವಾಯಿತು. ಆ ಬಂಧು ವರ್ಗದವರು ಅಂತ್ಯಸಂಸ್ಕಾರಕ್ಕೆ ಅಗ್ನಿಯನ್ನೂ ಕೊಡದೆ ಹೋದರು. ತಾಯಿಯ ಬಲಗೈಯನ್ನೇ ಕಡೆದು ಬೆಂಕಿಯನ್ನು ಉತ್ಪತ್ತಿಮಾಡಿ ಮನೆಯ ಹತ್ತಿರವೇ ಚಿತೆಯನ್ನು ಜೋಡಿಸಿ ಶರೀರವನ್ನು ಅದರ ಮೇಲಿಟ್ಟು ದಹನ ಮಾಡಿದರು. ಕೋಪದಿಂದ ಕೇರಳೀಯದ್ವಿಜರಿಗೆ ಕೆಲವು ಶಾಪಗಳನ್ನು ಕೊಟ್ಟರು. ಇದರಿಂದ ತಿಳಿದುಬರುವ ದೇನೆಂದರೆ : ಸಾಮಾನ್ಯರಾದವರು ಮಹಾತ್ಮರ ನಡೆವಳಿಕೆಗಳನ್ನು ದೂಷಿಸಬಾರದು. ಅವರುಗಳನ್ನು ಪರೀಕ್ಷಿಸಲು ಹೋಗಬಾರದು. ಎಲ್ಲರಿಗೂ ಅನ್ವಯಿಸುವ ಶಾಸ್ತ್ರವಿಧಿಗಳನ್ನೇ ಅವರುಗಳಿಗೂ ಅನ್ವಯಿಸಲು ಪ್ರಯತ್ನಿಸಬಾರದು. ಶಾಸ್ತ್ರ ವಿಚಾರಗಳಲ್ಲಿ ಕುತರ್ಕಗಳನ್ನೂ ವಾದವಿವಾದಗಳನ್ನೂ ಅಂಥವರ ಮುಂದೆ ಮಂಡಿಸಬಾರದು. ಅಂತೂ ಆಚಾರ್ಯರು ತಾವು ಮಾತುಕೊಟ್ಟಿದ್ದ ಪ್ರಕಾರ ಮಾತೃಯಜ್ಞವನ್ನು ನಡೆಯಿಸಿ ಕೃತಾರ್ಥರಾದರು.

ಆಚಾರ್ಯರು ಮತ್ತೆ ಶೃಂಗೇರಿಗೆ ದಯಮಾಡಿಸಲಿಲ್ಲವಾದ್ದರಿಂದ ಶಿಷ್ಯರುಗಳೇ ಹೊರಟು ಬಂದು ಗುರುಗಳೊಡನೆ ಕೂಡಿಕೊಂಡರು. ಮುಂದೆ ದಿಗ್ವಿಜಯಕಾರ್ಯಕ್ಕಾಗಿ ಆಚಾರ್ಯರು ಶಿಷ್ಯಪರಿವೃತ್ತರಾಗಿ ಕನ್ಯಾಕುಮಾರಿಗೆ ಬಿಜಯಮಾಡಿಸಿ ಅಲ್ಲಿಂದ ಉತ್ತಾರಾಭಿಮುಖವಾಗಿ ತಮ್ಮ ದಿಗ್ವಿಜಯಯಾತ್ರೆಯನ್ನು ಶುಭಮುಹೂರ್ತದಲ್ಲಿ ಆರಂಭಮಾಡಲು ಸಿದ್ಧರಾದರು.

---

# ತೃತೀಯಪುಷ್ಪ

## ೧. ದಿಗ್ವಿಜಯವರ್ಣನೆ

### ಆಚಾರ್ಯರು ದಿಗ್ವಿಜಯಾರಂಭಮಾಡಿದ್ದು :

ಭಗವತ್ಪಾದ ಶ್ರೀ ಶಂಕರಾಚಾರ್ಯರು ತಮ್ಮ ನಾಲ್ಕು ಜನ ಪ್ರಮುಖ ಶಿಷ್ಯರೊಡಗೂಡಿ ಹಾಗೂ ಇನ್ನು ಕೆಲವು ಪ್ರಶಿಷ್ಯರೊಡಗೂಡಿ ಕನ್ಯಾಕುಮಾರಿಯಿಂದ ಕಾಶ್ಮೀರದವರೆಗಿನ ಹಾಗೂ ದ್ವಾರಕೆಯಿಂದ ಕಾಮರೂಪದೇಶದ ಪೂರ್ವಗಡಿಯ ವರೆಗಿನ ಭರತಖಂಡವನ್ನೆಲ್ಲ ಸಂಚರಿಸಿ ಅದ್ವೈತವೇದಾಂತ ಸಿದ್ಧಾಂತವನ್ನು ಆಯಾ ಮತಾಚಾರದೇಶಾಚಾರಗಳೊಡನೆ ಸಮನ್ವಯಗೊಳಿಸಿ ತತ್ತ್ವವು ಎಂದೆಂದೂ ಏಕಮೇವಾದ್ವಿತೀಯವೆಂದೂ ಅದು ಎಲ್ಲಾ ಮತ - ಜಾತಿ - ಕುಲಧರ್ಮಗಳ ಎಲ್ಲೆಕಟ್ಟನ್ನೂ ಮೀರಿ ಸಾರ್ವತ್ರಿಕಾನುಭವಾರೂಢವಾಗಿ ನೆಲೆಗೊಂಡಿರುವದೆಂದೂ ಅದು ಅದ್ವಿತೀಯವಾದುದರಿಂದ ಯಾವದರೊಡನೆಯೂ ವಿರೋಧ ವಿಲ್ಲದ್ದಾಗಿರುವದಾಗಿದೆ -ಎಂದೂ ಜನರಿಗೆ ತಿಳಿಯಿಸಿಕೊಟ್ಟು ಉದ್ಧಾರಮಾಡಿದರು. ಈ ಸಂದರ್ಭದಲ್ಲಿ ಅವರು ಅನೇಕ ಮತಾನುಯಾಯಿಗಳೊಡನೆ ವಿಚಾರ ವಿನಿಮಯಮಾಡಿಕೊಳ್ಳಬೇಕಾಯಿತು. ಇಂಥ ವಾದಿಗಳು ವೈದಿಕ, ಅವೈದಿಕ, ಪೌರಾಣಿಕ, ತಾಂತ್ರಿಕ - ಹೀಗೆ ನಾನಾ ಸಂಪ್ರದಾಯದವರಾಗಿದ್ದರು. ಇವರುಗಳನ್ನು ಗೆಲ್ಲುವದೆಂದರೆ ದಮನಮಾಡಿ ಬಾಯಿ ಮುಚ್ಚಿಸುವದೆಂಬ ಅಭಿಪ್ರಾಯವನ್ನು ಆಚಾರ್ಯರು ಸ್ವೀಕರಿಸಿರಲಿಲ್ಲ. ಮತ್ತೇನೆಂದರೆ: ಇವರೆಲ್ಲರ ವಿಚಾರಸರಣಿಯನ್ನೂ ಕೇಳಿ ತಿಳಿದುಕೊಂಡು ಅಂಥ ಆಚಾರವಿಚಾರ ಮಾರ್ಗಗಳಲ್ಲಿ ಇರಬಹುದಾದ ದೋಷಗಳನ್ನು ಮಾತ್ರ ನಿವಾರಿಸಿ ಗುಣಗಳನ್ನೆಲ್ಲ ಉಳಿಸಿಕೊಂಡು ಮುಂದುವರೆದು ಆಯಾ ಮತಧರ್ಮಕ್ಕಿಂತಲೂ ವ್ಯಾಪಕವೂ ನಿತ್ಯವೂ ಶಾಶ್ವತವೂ ಆದ ತತ್ತ್ವಗಳನ್ನು ಸಿದ್ಧಾಂತರೂಪವಾಗಿ ತಿಳಿಯಿಸಿಕೊಟ್ಟು **ಹೃದಯಪರಿವರ್ತನೆ ಮಾಡುವದೇ ದಿಗ್ವಿಜಯವೆಂದು** ಭಾವಿಸಿದ್ದರು. ಏಕೆಂದರೆ ಬ್ರಹ್ಮನಿಷ್ಠರಿಗೆ ಶತ್ರುಗಳಾಗಲಿ, ಪ್ರತಿವಾದಿಗಳಾಗಲಿ, ಜಯಪರಾಜಯಗಳಾಗಲಿ ಎಲ್ಲಿದ್ದಾವು ? ಹೀಗೆ ವಿದ್ಯಾಪಕ್ಷ ಪಾತಿಗಳಾದ ಆಚಾರ್ಯರು ಶಾಸ್ತ್ರಾರ್ಥಕ್ಕಿಂತಲೂ ಅನುಭವಾರ್ಥವೇ ಹೆಚ್ಚಿನದೆಂದು ತಿಳಿಸಿಕೊಡುತ್ತಾ ಪಂಡಿತರುಗಳು, ವಿದ್ವನ್ಮಣಿಗಳು, ಶಾಸ್ತ್ರನಿಷ್ಣಾತರುಗಳನ್ನು ಅವರವರ ಯೋಗ್ಯತಾನುಸಾರವಾಗಿ ಪರೀಕ್ಷಿಸಿ ನಿಜಮರ್ಮವನ್ನು ಉಪದೇಶಿಸಿ ಕೃತಾರ್ಥ

ರನ್ನಾಗಿ ಮಾಡಿದರು. ಇಂಥ ದಿಗ್ವಿಜಯಯಾತ್ರೆಯು ಕೇವಲ ಶಂಕರಾಚಾರ್ಯರ ದಿಗ್ವಿಜಯವಾಗಿರದೆ ಭರತಖಂಡದಲ್ಲಿನ ಪ್ರಾಚೀನಋಷಿಗಳು ಕಂಡುಹಿಡಿದು ಲೋಕಕ್ಕೆಲ್ಲ ಉಣಬಡಿಸಿದ್ದ ಅಧ್ಯಾತ್ಮವಿದ್ಯೆಯ ದಿಗ್ವಿಜಯಯಾತ್ರೆಯಾಗಿದ್ದಿತು. ಆದ್ದರಿಂದಲೇ ಈಗಲೂ ಇಡಿಯ ಭರತಖಂಡದಲ್ಲೆಲ್ಲ ಶ್ರೀ ಶಂಕರಾಚಾರ್ಯರವರ ವೇದಾಂತಸಿದ್ಧಾಂತದ ವ್ಯಾಪ್ತಿಯು ಎದ್ದು ಕಾಣುತ್ತಿದೆ. ಈಚೆಗೆ ವಿದೇಶಗಳನ್ನೂ ಹೊಕ್ಕು ಅದು ಸರ್ವಧರ್ಮಗಳ ತಿರುಳಾಗಿ ಮಾನವತೆಗೇ ಕಿರೀಟಪ್ರಾಯವಾಗಿ ಮೆರೆಯುತ್ತಿದೆ.

## ಶಾಕ್ತಮತದವರೊಡನೆ ಸಂವಾದ :

ಈಗ ಇಂಥ ದಿಗ್ವಿಜಯಯಾತ್ರೆಯ ವಿವರವನ್ನು ನೋಡೋಣ. ಭಾರತ ದೇಶದ ದಕ್ಷಿಣದ ತುದಿಯಾದ ಕನ್ಯಾಕುಮಾರಿ, ರಾಮಸೇತು - ಮುಂತಾದ ಸ್ಥಳಗಳಲ್ಲಿ 'ಶಾಕ್ತ'ರೆಂಬ ಮತಧರ್ಮದವರು ಹೆಚ್ಚಾಗಿದ್ದರು. ಅವರಲ್ಲಿಯೂ ಒಳಪಂಗಡಗಳಿತ್ತು. ಉದಾಹರಣೆಗಾಗಿ ಕೆಲವನ್ನು ನೋಡೋಣ. (೧) 'ಆದಿಶಕ್ತಿಯು ಶಂಭುವಿನ ಗುಣರೂಪಳು. ಆದರೆ ಶಂಭುವಿಗಿಂತಲೂ ಸಮರ್ಥಳು. ಆಕೆಯೇ ಸಮಸ್ತ ಸೃಷ್ಟ್ಯಾದಿಕಾರ್ಯಗಳನ್ನೂ ಮಾಡುವಳು. ಆಕೆಯು ಮಾತಿಗೆ ನಿಲುಕುವವಳಲ್ಲ. ಆದ್ದರಿಂದ ಸೇವಾದಿಗಳನ್ನು ಮಾಡುವ ಜೀವನು ಆಕೆಯ ಅಂಶರೂಪರಾದ ಭವಾನಿ, ಮಹಾಲಕ್ಷ್ಮೀ, ಶಾರದಾ, ವಿದ್ಯಾ- ಮುಂತಾದವರಲ್ಲಿ ಭಕ್ತನಾಗಿ ತನ್ನ ಇಷ್ಟಾನುಸಾರ ಒಬ್ಬ ದೇವತೆಯನ್ನು ಆರಾಧಿಸಬೇಕು. ಆ ದೇವಿಯ ಪಾದಗಳನ್ನು ಚಿನ್ನದಿಂದ ಮಾಡಿಸಿ ಕೊರಳಲ್ಲಿ ಧರಿಸಬೇಕು. ಅಥವಾ ಪದ್ಮ, ಪುಸ್ತಕಾದಿದೇವೀಹಸ್ತಗಳಲ್ಲಿರುವ ಯಾವದಾದರೂ ಚಿಹ್ನಾಂಕನದಿಂದ ಕೂಡಿರಬೇಕು. ದೇವಿಯನ್ನು ಧ್ಯಾನಿಸಿ, ಪೂಜಿಸಿ, ವಂದಿಸಿ, ಮುಕ್ತಿಯನ್ನು ಹೊಂದಬೇಕು. ಬೇರೆ ಯಾವ ದೇವತೆಗಳೂ ಮುಕ್ತಿಯನ್ನು ಕೊಡಲಾರರು. ಶಿವನು ಕೂಡ ಸ್ವತಂತ್ರವಾಗಿ ಮುಕ್ತಿಯನ್ನೀಯಲಾರನು. ಏಕೆಂದರೆ ದೇವಿಯು ಸ್ವಾಧೀನವಲ್ಲಭಳು ;(ಗಂಡನನ್ನು ವಶಮಾಡಿಕೊಂಡಿರುವವಳು) ಇಂಥ ಪರಾಶಕ್ತಿಯ ಉಪಾಸಕರೂ, ಭಕ್ತರೂ ಆದ ನಾವುಗಳು ನಿಮ್ಮ ಸಿದ್ಧಾಂತವನ್ನು ಒಪ್ಪುವುದು ಹೇಗಾದೀತು'? ಎಂದು ಆಚಾರ್ಯರನ್ನು ಕೇಳಿದರು. ಆಗ ಆಚಾರ್ಯರು ಹೀಗೆಂದರು : ''ಭಕ್ತರೆ, ಕೇಳಿರಿ ; ನಿಮ್ಮ ನಂಬುಗೆಯೂ ಆಚಾರಗಳೂ ಕೆಲವು ಮಟ್ಟಿಗೆ ಸರಿಯಾಗಿವೆ.'ಸ್ವಾಧೀನವಲ್ಲಭ'ಳು ಎಂಬುದಕ್ಕೆ ನೀವು ಅರ್ಥ ಮಾಡಿರುವದು ಸರಿಯಲ್ಲ. ಉಪನಿಷತ್ ಪ್ರತಿಪಾದ್ಯವಾದ ಸದ್ಬ್ರಹ್ಮವೇ ಪರಾದೇವತೆಯು. ಅದಕ್ಕೆ ಲಿಂಗವೇನೂ ಇಲ್ಲ. ಆ ಬ್ರಹ್ಮವನ್ನು ಸತ್ (ನಪುಂಸಕಲಿಂಗ) ಪರಾದೇವತಾ (ಸ್ತ್ರೀಲಿಂಗ) ಆತ್ಮಾ (ಪುಲ್ಲಿಂಗ) ಹೀಗೆ ಎಲ್ಲಾ ಲಿಂಗಗಳ ಶಬ್ದಗಳಿಂದಲೂ ವೇದಾಂತದಲ್ಲಿ ಕರೆದಿದೆ. ಹೀಗಿರುವಲ್ಲಿ ಪರಾದೇವತೆಯು ಶಿವನಲ್ಲ - ಶಿವನು ಅಂಬಿಕೆಯ ಅಧೀನನು - ಎಂಬ ದ್ವೈತವಾದವು ಹೇಗಾದೀತು ?

ಇರುವದೊಂದೇ ತತ್ತ್ವವು. ಆದ್ದರಿಂದ ಸ್ವಾಧೀನವಲ್ಲಭಾ ಎಂಬುವಳು ರುದ್ರಶಕ್ತಿಯೆಂದೇ ತಿಳಿಯಬೇಕು. ಆಕೆಯು ತನ್ನ ಆತ್ಮನೇ ಆದ ಶಿವನನ್ನು ಕಂಡುಕೊಂಡಿರುವ ಬ್ರಹ್ಮವಿದಳೆಂದು ಅದರರ್ಥವು. ಬ್ರಹ್ಮವೇತ್ತಳಿಗೆ ಬ್ರಹ್ಮವು ತನಗಿಂತ ಬೇರೆಯಾಗಿರುವದಿಲ್ಲ. ಬ್ರಹ್ಮವನ್ನು ಅನಾತ್ಮವಾಗಿ ತಿಳಿಯುವದು ಬ್ರಹ್ಮವಿದ್ಯೆಯೂ ಅಲ್ಲ. ಆದ್ದರಿಂದ ನೀವು ಆರಾಧಿಸುತ್ತಿರುವದು ಬ್ರಹ್ಮವೇ ಹೊರತು ಬೇರೊಂದು ತತ್ತ್ವವಲ್ಲ. ಆದರೆ ಇದನ್ನು ಅರಿತುಕೊಳ್ಳಲು ಅಂತಃಕರಣ ಶುದ್ಧ್ಯಾದಿಗಳು ಬೇಕೇಹೊರತು ಬಾಹ್ಯಚಿಹ್ನೆಗಳಲ್ಲ. ಇನ್ನು ಮುಂದೆ ನೀವು ಇಂಥ ಚಿಹ್ನೆಗಳನ್ನು ಧರಿಸಬೇಕಾಗಿಲ್ಲ. ದೇವತೆಗಳ ಚಿಹ್ನೆಗಳನ್ನು ಮಾನವನು ಧರಿಸಬಾರದೆಂತ ಶಾಸ್ತ್ರವಿದೆ. ನೀವುಗಳು ವೇದಸ್ಮೃತಿಗಳಲ್ಲಿರುವ ಸದಾಚಾರಪಾಲನೆಯ ಮೂಲಕ ತತ್ತ್ವವನ್ನು ತಿಳಿಯಲು ಪ್ರಯತ್ನಿಸಿರಿ'' - ಎಂದು ಉಪದೇಶಿಸಿದರು. ಆಗ ಶಾಕ್ತರು ಆಚಾರ್ಯರಿಗೆ ವಂದಿಸಿ ಅವರ ಶಿಷ್ಯರಾದರು.

## ವಾಮಾಚಾರಮತದವರೊಡನೆ ಸಂವಾದ :

ಆದರೆ ಶಾಕ್ತರಲ್ಲಿಯೇ (2) ವಾಮಾಚಾರಮತದವರೆಂಬ ಕೆಲವರಿದ್ದರು. ಅವರುಗಳು ಆಚಾರ್ಯರ ಬಳಿಗೆ ಬಂದು ''ಸಂಯಮೀಂದ್ರರೆ, ನೀವು ಜ್ಞಾನಶಕ್ತಿರೂಪಳಾದ ದೇವಿಯ ತತ್ತ್ವನ್ನರಿಯದೆ ವೇಷಧಾರಿಗಳಾಗಿ ಬಂದಿದ್ದೀರಿ. ಏಕೆಂದರೆ ಅದ್ವೈತವೆಂಬುದಿಲ್ಲವೇ ಇಲ್ಲ. ಅದು 'ಬಂಜೆ ಮಗ' ಎಂಬಂತೆ ಹಾಸ್ಯಾಸ್ಪದವಾದ ಮಾತು. ಪ್ರಳಯದಲ್ಲಿಯೂ ಆದಿಶಕ್ತಿಯು ಇದ್ದುಕೊಂಡೇ ಇರುವಳು. ಈಶ್ವರನೂ ಆಕೆಯ ವಲ್ಲಭನೆನಿಸಿ ನಿತ್ಯನಾಗಿರುವನು. ಹೀಗಿರುವಲ್ಲಿ ದ್ವೈತವಲ್ಲದೆ ಅದ್ವೈತವೆಲ್ಲಿ ಬಂತು ? ಬ್ರಹ್ಮ, ಭೃಗು - ಮುಂತಾದವರೂ ಶಿವನ ಬೀಜ ಶಕ್ತಿಯಿಂದ ದೇವಿಯನ್ನು ಪ್ರತಿಪಾದಿಸುತ್ತಿರುವರು. ಆಕೆಯೇ ಜಗಜ್ಜನನಿಯು. ಅವಳ ಸೇವಾತತ್ಪರರಿಗೆ ಮುಕ್ತಿಯು ಅಂಗೈನಲ್ಲಿಯೇ ಇದ್ದುಕೊಂಡಿರುವದು. ಅವಳಿಲ್ಲದೆ ಈಶ್ವರನು ಏನೂ ಮಾಡಲಾರನು. ಇಂಥ ದೇವಿಯ ಆರಾಧಕರಿಗೆ ವಿಧಿನಿಷೇಧಶಾಸ್ತ್ರಗಳಾವುವೂ ಇರುವದಿಲ್ಲ. ನಾವು ಹಾಗೆಯೇ ಆಚರಿಸುವೆವು. ಆದ್ದರಿಂದ ಇನ್ನು ಮುಂದೆ ನೀವು ಸಂನ್ಯಾಸವನ್ನು ಕೈಬಿಟ್ಟು ನಮ್ಮನ್ನು ಅನುಸರಿಸಬೇಕು'' ಎಂದರು. ಆಗ ಆಚಾರ್ಯರು ''ಶಕ್ತಿದೇವಿಯ ಉಪಾಸಕರೆ, ಕೇಳಿರಿ. ದ್ವೈತವು ನಿಜವೆ? ಎಂಬಿದನ್ನು ಗಟ್ಟಿಮಾಡಿಕೊಳ್ಳಿ, ಸತ್ಯವಾಗಿದ್ದರೆ ಅದು ನಿದ್ರೆಯಲ್ಲೇಕೆ ಇಲ್ಲವಾಗುತ್ತದೆ? ಹಾಗೆಂದು ಶ್ರುತಿಯೂ 'ಯತ್ರ ಸುಪ್ತಃ' ಎಂಬ ಮಂತ್ರದಲ್ಲಿ ಹೇಳುತ್ತಿದೆಯಲ್ಲವೆ ? ಆತ್ಮನಿಗಿಂತ ಬೇರೆ ಯಾವದೂ ಇಲ್ಲವೆಂದು ಶ್ರುತಿಯು ಅನುಭವಾನುಸಾರವಾಗಿ ತಿಳಿಸುತ್ತಿದೆ. ಆತ್ಮನೊಬ್ಬನೇ ತನ್ನ ಶಕ್ತಿವಿಶೇಷಗಳಿಂದ ಬಹುರೂಪವಾಗಿ ತೋರುತ್ತಿರುವನು. ಪ್ರಕೃತಿಯೆಂದರೆ ಅವನ ಶಕ್ತಿಯೇ. ಅದು ಆ ಈಶ್ವರನ ಇಚ್ಛೆಗೊಳಪಟ್ಟು ಸೃಷ್ಟ್ಯಾದಿಗಳನ್ನು ನಿರ್ವಹಿಸುತ್ತದೆ.

ಅದಕ್ಕೆ ಸ್ವತಂತ್ರವಾದ ಅಸ್ತಿತ್ವವಿಲ್ಲ. ತೋರಿಕೆಯು ಮಾತ್ರ ಉಂಟು. ಆದ್ದರಿಂದಲೇ ಅದನ್ನು ಮಾಯೆಯೆಂದೂ ಕರೆಯುವರು. ಮಾಯಾತೀತವಾದ ನಿರ್ಗುಣಬ್ರಹ್ಮವೇ ಮುಕ್ತಿಸ್ವರೂಪವು. ಆದ್ದರಿಂದ ನೀವುಗಳು ಪ್ರಕೃತಿಯನ್ನು ಸ್ವತಂತ್ರವೆಂದು ತಿಳಿಯಬಾರದು. ಅದರ ಆರಾಧನೆಯೂ ಸಹ ಪರಬ್ರಹ್ಮದ ಪ್ರಾಪ್ತಿಗೆ ಸಾಧನ ವಾಗುವಂತೆ ಇರಬೇಕು. ಆಗ ಶಾಸ್ತ್ರೀಯವಾದ ವಿಧಿನಿಷೇಧಗಳನ್ನೂ ಬ್ರಹ್ಮಪ್ರಾಪ್ತಿಯ ವರೆಗೆ ಅನುಸರಿಸಬೇಕಾಗುವದು. ಏಕೆಂದರೆ ದುಶ್ಚರಿತರಿಗೂ ಅಶಾಂತರಿಗೂ, ಅಸಮಾಹಿತರಿಗೂ ಬ್ರಹ್ಮವು ದಕ್ಕಲಾರದು. ನೀವುಗಳು ಅಸದಾಚಾರಗಳನ್ನು ತ್ಯಜಿಸಿ ಈವರೆಗಿನ ಶಾಸ್ತ್ರೋಲ್ಲಂಘನೆಗೆ ಪ್ರಾಯಶ್ಚಿತ್ತಗಳನ್ನಾಚರಿಸಿ ಶುದ್ಧರಾಗಿ ಇನ್ನುಮುಂದೆ ದಕ್ಷಿಣಾಚಾರಗಳಿಂದ ದೇವಿಯನ್ನಾರಾಧಿಸಿ ಮಾಯೆಯಿಂದ ಬಿಡುಗಡೆಮಾಡ ಬೇಕೆಂದೂ ವಿದ್ಯಾಪ್ರದಾನಮಾಡಿ ಮುಕ್ತಿಯನ್ನು ಕರುಣಿಸುವಂತೆಯೂ ಬೇಡಿಕೊಳ್ಳಿರಿ'' ಎಂದು ಉಪದೇಶಿಸಿದರು. ಆಗ ವಾಮಾಚಾರಮತದವರೆಲ್ಲ ತಮ್ಮ ಮೂಢ ಸಂಪ್ರದಾಯಗಳನ್ನು ತ್ಯಜಿಸಿ ಆಚಾರ್ಯರ ಅನುಯಾಯಿಗಳಾದರು.

## ಶೈವಮತದವರೊಡನೆ ಸಂವಾದ :

ಹೀಗೆ ಆಚಾರ್ಯರು ಶಾಕ್ತರನ್ನೆಲ್ಲ ಅದ್ವೈತಿಗಳನ್ನಾಗಿ ಪರಿವರ್ತಿಸಿ ರಾಮಸೇತುತೀರ್ಥವನ್ನೂ ರಾಮೇಶ್ವರನನ್ನೂ ಸಂದರ್ಶಿಸಿದರು. ಪವಿತ್ರ ಗಂಗಾಜಲ ದಿಂದಲೂ ಬಿಲ್ವಪತ್ರೆಗಳಿಂದಲೂ ರಾಮೇಶ್ವರನನ್ನು ಪೂಜಿಸಿದರು. ಆ ಸಮಯದಲ್ಲಿ ಶೈವರೊಡನೆ ತತ್ತ್ವ ವಿಚಾರದಲ್ಲಿ ಸಂವಾದಮಾಡಿದರು. (೩) ಅಲ್ಲಿದ್ದ ಅದ್ವೈತ ವಿರೋಧಿಗಳಾದ ಶೈವರು ತಮ್ಮ ವಾದವನ್ನು ಹೀಗೆ ಮುಂದಿಟ್ಟರು. ಭುಜಗಳಲ್ಲಿ ಲಿಂಗಚಿಹ್ನೆ, ಹಣೆಯಲ್ಲಿ ತ್ರಿಶೂಲಚಿಹ್ನೆ, ಡಮರುಗಚಿಹ್ನೆಗಳುಳ್ಳ ಪಾಶುಪತರೆಂಬ ಮತದವರೂ ಈ ಗುಂಪಿನಲ್ಲಿದ್ದರು. ''ಯತಿಗಳೆ, ನಮ್ಮ ಮತಧರ್ಮವನ್ನು ಕೇಳಿರಿ; ಶ್ರುತಿಯಲ್ಲಿ 'ಋತಂ ಸತ್ಯಂ..... ವಿರೂಪಾಕ್ಷಂ' ಎಂದು ಶಿವನನ್ನೇ ಸ್ತುತಿಸಲಾಗಿದೆ. ಜಗತ್ಕಾರಣನು ಶಂಭುವೇ ಎಂದು ಶ್ರುತಿಗಳಲ್ಲಿ ಹೇಳಿದೆ. 'ವಾಸುದೇವ'ನೆಂದರೂ ಶಿವನೇ, ಹೇಗೆಂದರೆ : ಜಗತ್ತೆಲ್ಲ ಅವನಲ್ಲೇ ವಾಸವಾಗಿದೆ ; ಜಗತ್ತಿನ ಪಾಲಕನು ವಿಷ್ಣುವಾದರೂ ಆತನು ಪ್ರಲಯದಲ್ಲಿರಲಿಲ್ಲ. ಎಲ್ಲರೂ ಆ ಶಿವನ ತೇಜಸ್ಸಿನಲ್ಲಿ ಆಗ ಒಂದಾಗಿಬಿಟ್ಟಿದ್ದರು. ಆ ಶಿವನನ್ನು ಬಲ್ಲವರಾರೂ ಇಲ್ಲ. ಆ ಶಿವನೇ ರುದ್ರನು. ಅವನನ್ನು ನಾವು ವಿಭೂತಿ, ರುದ್ರಾಕ್ಷಿಗಳನ್ನು ಧರಿಸಿ ಪಂಚಾಕ್ಷರೀ ಮಂತ್ರಗಳಿಂದ ಆರಾಧಿಸುವೆವು. ರುದ್ರನಿಂದಲೇ ದೇವತೆಗಳೆಲ್ಲರೂ ಸೃಷ್ಟರಾಗಿದ್ದಾರೆ. ನವಗ್ರಹಗಳನ್ನೂ ರುದ್ರನೇ ಸೃಷ್ಟಿಸಿ ಸ್ಥಾಪಿಸಿದ್ದಾನೆ. ಆತನ ಪದವಿಗಳನ್ನು ಸೂರ್ಯಾದಿಗಳೂ ಬೆಳಗಲಾರರು. ನರರಿಗೆಲ್ಲ ಗಮ್ಯನಾದ ನಾರಾಯಣನೆಂಬುವನೂ ಅವನೇ. ಅವನ ಉಪಾಸಕರಾದ ನಾವು ಶೈವರೆನಿಸಿರುವೆವು'' ಎಂದರು. ಆಗ ಆಚಾರ್ಯರು ''ಬಹಳ ಸಂತೋಷ. ಪರಬ್ರಹ್ಮವನ್ನು ಶಿವನೆಂದೂ, ರುದ್ರನೆಂದೂ

ಕರೆದಿದ್ದರೆ ತಪ್ಪಿಲ್ಲ. ಆದರೆ ಲಿಂಗಧಾರಣವು ವೈದಿಕಶಾಸ್ತ್ರಸಂಮತವಲ್ಲ. ವಿಪ್ರನ ದೇಹದಲ್ಲಿ ಹೊಕ್ಕುಳಿನಿಂದ ಮೇಲಕ್ಕೆ ಸೋಮಪರಾದ ದೇವತೆಗಳು ವಾಸಿಸುತ್ತಾರೆಂದು ಸ್ಮೃತಿಯಿದೆ. ಎಲ್ಲಾ ದೇವತೆಗಳೂ ವೇದವಿದನಾದ ಬ್ರಾಹ್ಮಣನಲ್ಲಿ ವಾಸವಾಗಿದ್ದಾರೆಂದು ಶ್ರುತಿವಾಕ್ಯವೂ ಇದೆ. ಬ್ರಹ್ಮಜ್ಞನಾದವನು ಶಿವವೇ ಎಂದೂ ವೇದವು ಹೇಳುತ್ತದೆ. ಆದ್ದರಿಂದ ವೇದಮತಾನುಸಾರಿಗಳಾಗಿ ನೀವು ಶಿವನನ್ನು ಪರಬ್ರಹ್ಮವೆಂದರಿತು ನಿಮ್ಮ ಆತ್ಮರೂಪದಿಂದ ಆರಾಧಿಸಿ ಮುಕ್ತರಾಗಿರಿ'' - ಎಂದು ಉಪದೇಶಿಸಿದರು. ಇದೇ ಸಂದರ್ಭದಲ್ಲಿ ಇನ್ನೂ ಕೆಲವು ರೀತಿಯ ಆಚಾರಗಳುಳ್ಳ ಶೈವಮತಾನುಯಾಯಿಗಳು ಆಚಾರ್ಯರನ್ನು ಸಂಧಿಸಿ ತಮ್ಮ ಸಂಶಯಗಳನ್ನು ಪರಿಹರಿಸಿಕೊಂಡರು.

## ಭಾಗವತಮತದವರೊಡನೆ ಸಂವಾದ :

ಆಚಾರ್ಯರು ರಾಮೇಶ್ವರದಿಂದ ಅನಂತಶಯನಕ್ಷೇತ್ರಕ್ಕೆ ಬಂದರು. ಅಲ್ಲಿ ವಿಷ್ಣುಪೂಜಾಪರರಾದ (೪) ವೈಷ್ಣವಮತದವರಿದ್ದರು. ಅವರಲ್ಲಿಯೇ ಭಾಗವತರು, ಪಾಂಚರಾತ್ರರು, ವೈಖಾನಸರು - ಎಂಬ ಪ್ರಭೇದಗಳಿದ್ದವು. ಭಾಗವತರು ''ಭಗವಂತನಾದ ವಾಸುದೇವನು ವ್ಯೂಹಚತುಷ್ಟಯಗಳಿಂದ ಜಗತ್ತನ್ನು ವ್ಯಾಪಿಸಿರುವನು; ಜೀವನು ಉಪಾಸಕನು. ವಾಸುದೇವನು ಉಪಾಸ್ಯನು. ಮುಕ್ತಿಯಾಗುವವರೆಗೂ ಭೇದವು ಸತ್ಯವು ; ಮುಕ್ತನಾದಮೇಲೆ ಅಭೇದವೇ ಸರಿ. ಆದ್ದರಿಂದ ವಾಸುದೇವನನ್ನು ಪುಷ್ಪ, ಉದಕಾಂಜಲಿ, ಸ್ತುತಿ, ನಮಸ್ಕಾರ, ಸ್ವಾಧ್ಯಾಯ, ನಿತ್ಯಕರ್ಮಗಳಿಂದ ಆರಾಧಿಸಬೇಕು. ಆತನ ದಯೆಯಿಂದ ಮುಕ್ತಿಯು ಸಾಧ್ಯ - ಎಂದು ನಮ್ಮ ಮತವು'' - ಎಂದರು. ಪಾಂಚರಾತ್ರರೂ ವಿಷ್ಣುಭಕ್ತಿಯನ್ನು ಪ್ರತಿಪಾದಿಸಿ ತಮಗೆ ಪಾಂಚರಾತ್ರಾಗಮವು ಪ್ರಮಾಣವೆಂಬ ವಾದವನ್ನು ಮುಂದಿಟ್ಟರು. ವೈಖಾನಸರು ತಮ್ಮ ಗುರುಗಳಾದ ವಿಖನಸಾಚಾರ್ಯರ ಉಪದೇಶದಂತೆ ಭಗವದರ್ಚನೆಯೇ ಸರ್ವಾರ್ಥಸಾಧಕವೂ ಮುಕ್ತಿಪ್ರದವೂ ಆಗಿರುವದೆಂದೂ ನಾನಾ ವಿಧಿಪ್ರಕಾರಗಳ ಭಗವದರ್ಚನೆ, ಕ್ರಿಯಾಯೋಗವೇ ಪರಮವೆಂದೂ ವಾದಿಸಿದರು. ಆಚಾರ್ಯರು ಇವರ ವಾದಗಳಿಗೆ ಸಮಂಜಸವಾದ ಉತ್ತರಗಳನ್ನು ಹೀಗೆ ನೀಡಿದರು : ''ವೈಷ್ಣವಶಿರೋಮಣಿಗಳೇ, ನಿಮ್ಮೆಲ್ಲರಿಗೂ ನಾರಾಯಣನು ಪರಮದೇವನು - ಎಂಬಿದು ತಿಳಿಯಿತು. ಆ ನಾರಾಯಣನನ್ನೇ ಪರಬ್ರಹ್ಮವೆಂದು ವೇದಗಳಲ್ಲಿ ಕರೆದಿದೆ. ಆದರೆ ಆತನು ವ್ಯೂಹಚತುಷ್ಟಯನಾಗಿ ಹುಟ್ಟುವನೆಂಬುದು ಸರಿಯಲ್ಲ. ಉತ್ಪತ್ತಿವಾದವನ್ನೊಪ್ಪಿದರೆ ಅನಿತ್ಯತ್ವಾದಿದೋಷಗಳು ಬರುವವು. ಜೀವರುಗಳೆಲ್ಲರೂ ಅವನ ಅಂಶರೆಂಬುದೂ ವ್ಯವಹಾರದೃಷ್ಟಿಯಿಂದ ಸರಿ ; ಆದರೆ ಪರಮಾರ್ಥವಾಗಿ ಅವನಿಗಿಂತ ಬೇರೆ ಜೀವರುಗಳಾರೂ ಇಲ್ಲ. ಇನ್ನು ಜೀವನು ಅಜ್ಞಾನದಿಂದ ನಾರಾಯಣನಿಗಿಂತ ಭಿನ್ನನಾಗಿರುವನೇ ಹೊರತು ನಿಜವಾಗಿ ಭಿನ್ನನಲ್ಲ. ಆದ್ದರಿಂದ

ಭೇದಬುದ್ಧಿಯನ್ನು ಮಾತ್ರ ನೀಗಿಕೊಂಡರೆ ಸಾಕು. ಅಭೇದವು ಹೊಸದಾಗಿ ಉಂಟಾಗಬೇಕಾದ್ದಿಲ್ಲ. ಹಾಗೆ ಉಂಟಾಗಬೇಕೆಂದಾದರೆ ಮೋಕ್ಷವು ಅನಿತ್ಯವಾದೀತು. ಪಾಂಚರಾತ್ರಾಗಮವು ಭಗವದರ್ಚನಾದಿಗಳಿಗೂ ಆಚಾರಗಳಿಗೂ ಪ್ರಮಾಣ ವೆನಿಸಿದರೂ ಬ್ರಹ್ಮಸ್ವರೂಪನಿರ್ಧಾರಣೆಗೆ ಉಪನಿಷತ್ತುಗಳು ಮಾತ್ರವೇ ಪ್ರಮಾಣ ಗಳು. ಆಗಮಗಳು ಭಗವದಾರಾಧನೆಯನ್ನೇ ಪರಮವೆಂದೂ ಕ್ರಿಯಾಯೋಗವೇ ಅತ್ಯುತ್ತಮವೆಂದೂ ಹೇಳಿದ್ದರೆ ಅದು ಸಗುಣೋಪಾಸಕರ ಮಟ್ಟದಿಂದ ಸರಿ- ಎಂದು ತಿಳಿಯಿರಿ. ಇನ್ನು ನಿರ್ಗುಣಬ್ರಹ್ಮವಿದರಿಗೆ ಭೇದವೇ ಇಲ್ಲವಾದ್ದರಿಂದ ಕ್ರಿಯೆಯು ಸಂಭವಿಸಲಾರದು. ವೈಕುಂಠಾದಿಲೋಕಗಳು ಸಗುಣೋಪಾಸಕರಾದ ಜ್ಞಾನಿಗಳ ಮೋಕ್ಷವೆನಿಸುವದು. ನಿರ್ಗುಣಚಿಂತಕರಿಗೆ ಜೀವನ್ಮುಕ್ತಿಯೇ ಕಡೆಯ ಮಜಲಾಗಿರುವದು. ಆದ್ದರಿಂದ ಸಾಧಕನು ಆರಂಭಕ್ಕೆ ವಿಷ್ಣು ಪೂಜಾಸ್ತುತಿನಮಸ್ಕಾರ -ವರ್ಣಾಶ್ರಮಧರ್ಮಪರಾಯಣನಾಗಿದ್ದು ಸಕಾಮನಾದರೆ ಸಗುಣೋಪಾಸನೆ ಯಿಂದಲೂ ನಿಷ್ಕಾಮನಾದರೆ ನಿರ್ಗುಣತತ್ತ್ವ ಜ್ಞಾನನಿಷ್ಠೆಯಿಂದಲೂ ಕೃತಾರ್ಥನಾಗ ಬೇಕು. ಸಕಾಮನಿಗೆ ಕ್ರಮಮುಕ್ತಿಯೂ ನಿಷ್ಕಾಮನಿಗೆ ಜೀವನ್ಮುಕ್ತಿಯೂ ಲಭಿಸುವವು. ಹೀಗೆ ನಿಮ್ಮ ತಿಳಿವಳಿಕೆಯನ್ನು ಸರಿಪಡಿಸಿಕೊಳ್ಳಿರಿ'' ಎಂದು ಉಪದೇಶಿಸಿದರು. ಇಂಥ ಉದಾತ್ತವಾದ ಉಪದೇಶಕ್ಕೆ ತಲೆದೂಗಿ ಎಲ್ಲರೂ ಆಚಾರ್ಯರ ಶಿಷ್ಯರಾದರು.

## ಅಗ್ನಿಪೂಜಕರೊಡನೆ ಸಂವಾದ:

ಅನಂತರ ಆಚಾರ್ಯರು ಯಾತ್ರಾಕ್ರಮದಿಂದ ಸುಬ್ರಹ್ಮಣ್ಯಕ್ಷೇತ್ರಕ್ಕೆ ಬಂದರು. ಅಲ್ಲಿ ಕುಮಾರಧಾರಾತೀರ್ಥದಲ್ಲಿ ಸ್ನಾನಮಾಡಿ ಷಣ್ಮುಖನನ್ನು ಪೂಜಿಸಿದರು. ಬೇರೆಬೇರೆಯ ಸ್ಥಳಗಳಿಂದ ಯಾತ್ರಾರ್ಥಿಗಳಾಗಿ ಬಂದಿದ್ದ ಕೆಲವು ಬ್ರಾಹ್ಮಣರು ಆಚಾರ್ಯರನ್ನು ಕಂಡು ತಮ್ಮ ಮತಗಳನ್ನು ಅವರ ಮುಂದೆ ಮಂಡಿಸಿದರು. (೫) ''ಯತಿವರ್ಯರೆ, ನಾವು ದ್ವಿಜರು. ಶ್ರೌತಸ್ಮಾರ್ತ ಕರ್ಮತತ್ಪರರು. ಅಗ್ನಿಯೇ ನಮಗೆ ದೇವರು. ಎಲ್ಲಾ ದೇವತೆಗಳೂ ಅಗ್ನಿ ಮುಖರೇ ಆಗಿರುವರು. ಆತನ ಆರಾಧನೆಯಿಂದ ಪಾಪಗಳು ಪರಿಹಾರವಾಗುವವು. ಆದ್ದರಿಂದ ದ್ವಿಜರೆಲ್ಲರೂ ಅಗ್ನ್ಯಾರಾಧಕರಾಗಬೇಕು. ಆತನೇ ಸದ್ಗತಿಪ್ರದನು- ಎಂದು ನಮ್ಮ ಅಭಿಪ್ರಾಯ'' ಎಂದರು. ಆಚಾರ್ಯರು ''ನೀವು ಹೇಳುವದು ಸರಿ ; ಆದರೆ ಅಗ್ನಿಶಬ್ದಕ್ಕೆ 'ಅತ್ತೀತ್ಯಗ್ನಿಃ' ಎಂಬರ್ಥವೂ ಇದೆ. ಜಗತ್ತೆಲ್ಲವನ್ನೂ ಪ್ರಲಯಕಾಲದಲ್ಲಿ ನುಂಗಿ ಅಡಗಿಸಿಟ್ಟುಕೊಳ್ಳುವವನು ಪರಬ್ರಹ್ಮನೇ ಹೊರತು ಅಗ್ನಿದೇವತೆಯಲ್ಲ, ಏಕೆಂದರೆ ಪ್ರಲಯದಲ್ಲಿ ಅಗ್ನಿಯೂ ಇರುವದಿಲ್ಲ. ಪುನಃ ಸೃಷ್ಟಿಕಾಲಕ್ಕೆ ಅಗ್ನಿಯನ್ನು ಹೊರಗೆಡಹುವವನೂ ಪರಮಾತ್ಮನೇ. ಹೀಗಿರುವುದರಿಂದ ನೀವು ಅಗ್ನಿಯಲ್ಲಿ ಮಾಡುವ ಸಮಸ್ತ ದೇವತಾಕಾರ್ಯಗಳನ್ನೂ ಯಜ್ಞರೂಪಿಯಾದ ಭಗವಂತನಿಗೆ ಅರ್ಪಿಸಿ ಆತನ ಕೃಪೆಯಿಂದ ಜ್ಞಾನವನ್ನು ಪಡೆದು ಮುಕ್ತಿಯನ್ನು ಹೊಂದಿರಿ'' ಎಂದು ಉಪದೇಶಿಸಿದರು. ಆಗ ಆ ಬ್ರಾಹ್ಮಣರೆಲ್ಲರೂ ಆಚಾರ್ಯರ ಶಿಷ್ಯರಾದರು.

## ಸೂರ್ಯನ ಆರಾಧಕರೊಡನೆ ಸಂವಾದ :

ಆಗ ಮತ್ತೆ ಕೆಲವು ಪಂಡಿತರು ಆಚಾರ್ಯರನ್ನು ಭೇಟಿಮಾಡಿ ಹೀಗೆಂದರು : (೬) ''ಪೂಜ್ಯರೆ, ನಾವು ಸೂರ್ಯಾರಾಧಕರು; ವೇದದಲ್ಲಿ ಸೂರ್ಯನೇ ಶ್ರೇಷ್ಠನೆಂದು ಹೊಗಳಿದೆ. ಸೂರ್ಯಮಂಡಲಾಂತರ್ಗತನಾದ ಹಿರಣ್ಮಯಪುರುಷನ ಉಪಾಸನೆಯನ್ನೂ ಅಲ್ಲಿ ತಿಳಿಸಿರುತ್ತದೆ. 'ಆದಿತ್ಯರಲ್ಲಿ ವಿಷ್ಣುವು ನಾನು' ಎಂದು ಗೀತೆಯಲ್ಲಿ ಭಗವಂತನೂ ಹೇಳಿರುತ್ತಾನೆ. ಆದ್ದರಿಂದ ಸೂರ್ಯಾರಾಧನೆಯೇ ಪುರುಷಾರ್ಥ ಸಾಧನವು. ನಮ್ಮ ಮತವು ಸರಿಯಷ್ಟೆ?'' ಎಂದರು. ಆಗ ಆಚಾರ್ಯರು ''ನಿಮ್ಮ ಮತವೇನೋ ಸರಿ; ಆದರೆ ಅದೇ ಕಡೆಯ ಮಜಲೆಂದು ತಿಳಿಯಬೇಡಿರಿ. ಏಕೆಂದರೆ ಶ್ರುತಿಯಲ್ಲಿ ಸೂರ್ಯನು ಸಹ ಬ್ರಹ್ಮದ ಭಯದಿಂದ ಉದಯಿಸುತ್ತಾನೆ. ಎಂದಿದೆ. 'ಆ ಬ್ರಹ್ಮವನ್ನು ಸೂರ್ಯನಾಗಲಿ ಚಂದ್ರನಾಗಲಿ ಬೆಳಗಲಾರನು' ಎಂದೂ ಹೇಳಿದೆ. ಸೂರ್ಯನು ಕಾಲಾತ್ಮನಾದರೂ ಪ್ರಲಯದಲ್ಲಿ ದೇಶಕಾಲಗಳೆಲ್ಲವೂ ಬ್ರಹ್ಮದಲ್ಲೇ ಲಯವಾಗಿ ಬಿಡುವವು. ಆದ್ದರಿಂದ ಸೂರ್ಯನಿಗೂ ಸೂರ್ಯನಾದ ಬ್ರಹ್ಮವು ಎಲ್ಲಕ್ಕಿಂತ ಮಿಗಿಲಾದುದು. ಆ ಬ್ರಹ್ಮವೊಂದೇ ಪರಮಾರ್ಥಸತ್ಯವು. ಅದನ್ನೇ ಅರಿತುಕೊಳ್ಳಿರಿ. ಬ್ರಹ್ಮದ ಜ್ಞಾನದಿಂದ ಮುಕ್ತರಾಗಿರಿ'' ಎಂದು ಉಪೇದಶಿಸಿದರು. ಆಗ ಅವರೆಲ್ಲರೂ ಶರಣಾಗತರಾಗಿ ಆಚಾರ್ಯರಿಗೆ ಶಿಷ್ಯರಾದರು.

## ಗಾಣಾಪತ್ಯರೊಡನೆ ಸಂವಾದ :

ಆಚಾರ್ಯರು ತಮ್ಮ ದಿಗ್ವಿಜಯಯಾತ್ರೆಯನ್ನು ಮುಂದುವರೆಸಿ 'ಗಣವರ' ಎಂಬ ಪಟ್ಟಣಕ್ಕೆ ಬಂದರು. ಅಲ್ಲೊಂದು 'ಗಣಪತ್ಯಾಶ್ರಮ' ವೆಂಬ ಪೂಜ್ಯಸ್ಥಾನವಿದ್ದಿತು. ಅದು ಕೌಮುದೀನದಿಯ ತೀರದಲ್ಲಿತ್ತು. ಆಚಾರ್ಯರು ಆ ನದಿಯಲ್ಲಿ ಸ್ನಾನಮಾಡಿ ವಿಘ್ನೇಶ್ವರನನ್ನು ಪೂಜಿಸಿ ವಂದಿಸಿದರು. (೭) ಅಲ್ಲಿದ್ದ ಕೆಲವು ಗಣಪತಿಯ ಉಪಾಸಕರು ಆಚಾರ್ಯರನ್ನು ಬಳಿಸಾರಿ ಇಂತೆಂದರು : ''ಪೂಜ್ಯರೆ, ನಿಮ್ಮ ಮತದಂತೆ ಬ್ರಹ್ಮವು ಅದ್ವೈತವೂ ನಿರ್ಗುಣವೂ ಆಗಿರುವದು. ಅದು ಹೇಗೆ ತಾನೆ ಸಾಮಾನ್ಯರ ಬುದ್ಧಿಗೆ ಹಿಡಿದೀತು? ನಾವಾದರೋ ಭಗವಂತನನ್ನು ಗಣಪತಿಯೆಂದು ಆರಾಧಿಸುವೆವು. ಅವನೇ ವೇದವೇದಾಂತವೇದ್ಯನು. ಮೋಕ್ಷಪ್ರದನೂ ಆಗಿರುವನು. ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ಅವನೇ ನಿರ್ವಹಿಸುವನು. ಆ ದೇವದೇವನು ಮೂಲಾಧಾರಚಕ್ರದಲ್ಲಿ ನೆಲಸಿರುವನು. ಆತನನ್ನು ವೇದಮಂತ್ರಗಳೂ ಸ್ತೋತ್ರ ಮಾಡವವು. ಅವನು ಆರು, ಹನ್ನೆರಡು, ಮೂವತ್ತೆರಡು ವಿಧನಾಗಿದ್ದರೂ ಒಬ್ಬನೇ. ಅವನಿಗೆ ನಿಯಾಮಕರಾರೂ ಇಲ್ಲ. ಅವನನ್ನೇ ನಾವು ಪರಮನೆಂದು ತಿಳಿದಿರುವೆವು; ಹೀಗೆ ನಮ್ಮ ಮತವಿದೆ'' ಎಂದರು. ಆಗ ಆಚಾರ್ಯರು ''ಹಾಗೇ ಒಪ್ಪಿಕೊಳ್ಳೋಣ. ಪರಮಾತ್ಮನನ್ನೇ ನೀವು ಗಣಪತಿಯೆಂದು ಕರೆದಿರುವಿರಿ. ಏಕೆಂದರೆ ಜಗತ್ತಿನ ಸೃಷ್ಟಿಸ್ಥಿತಿಲಯವ್ಯಾಪಾರಗಳು ಆ ಭಗವಂತನನ್ನು ಹೊರತು ಉಳಿದ ಯಾವ

ದೇವತೆಗಳಿಗೂ ಸಾಧ್ಯವಾಗಲಾರದು. ಒಬ್ಬ ದೇವನನ್ನು ಶಿವ, ವಿಷ್ಣು, ಗಣಪತಿ, ಸೂರ್ಯ, ದೇವಿ- ಎಂದು ಐದು ಪ್ರಭೇದಗಳಿಂದ ಪೂಜಿಸಿದರೆ ತಪ್ಪಲ್ಲ. ಆದರೆ ಆಯಾ ದೇವತೋಪಾಸನೆಯ ಸಲುವಾಗಿ ಶಾಸ್ತ್ರದಲ್ಲಿ ಹೇಳಿರುವ ನಾಮ ರೂಪಾದ್ಯಾಕಾರಗಳನ್ನು ಮನಸ್ಸಿನಿಂದ ಚಿಂತಿಸಬೇಕೇ ಹೊರತು ಬಹಿರಂಗವಾಗಿ ದೇವತಾಚಿಹ್ನೆಗಳನ್ನೂ ವೇಷಗಳನ್ನೂ ಧರಿಸಿ ಅನುಕರಣಮಾಡಬಾರದು. ಇದು ಆ ದೇವತೆಯನ್ನೇ ಅಣಕಿಸಿಕೊಂಡಂತಾಗುವದು. ವೇದವಿರುದ್ಧವಾದ ಈ ಮತಾಚಾರ ಡಂಭಾಚಾರಗಳನ್ನು ಬಿಟ್ಟು ಶ್ರೌತಸ್ಮಾರ್ತಕರ್ಮನಿಷ್ಠರಾಗಿ ಬಾಳಿರಿ. ಇದರಿಂದ ನಿಮಗೆ ಶ್ರೇಯಸ್ಸಾಗಲಿದೆ'' ಎಂದು ತಿಳಿಸಿದರು. ಆಗ ಗಾಣಾಪತ್ಯರೆಲ್ಲರೂ ಆಚಾರ್ಯರಿಗೆ ವಂದಿಸಿ ತಮ್ಮ ಮತಾಚಾರಗಳನ್ನು ವೈದಿಕಧರ್ಮಕ್ಕೆ ಅನುಗುಣವಾಗಿ ತಿದ್ದಿಕೊಂಡರು.

## ಕಾಂಚೀಕ್ಷೇತ್ರಕ್ಕೆ ಬಂದದ್ದು, ಭೇದವಾದಿಗಳೊಡನೆ ಸಂವಾದ :

ಆಚಾರ್ಯರು ತಮ್ಮ ಶಿಷ್ಯರೊಡನೆ ಗಾಣಾಪತ್ಯಕ್ಷೇತ್ರದಿಂದ ಕಾಂಚೀನಗರಿಗೆ ಬಂದರು. ಅಲ್ಲಿದ್ದ ತಾಂತ್ರಿಕರನ್ನು ತಡೆದು ವೇದಸಂಮತವಾದ ಮಾರ್ಗದಿಂದ ಭಗವತೀಜಗದಂಬೆಯ ಪೂಜಾನುಷ್ಠಾನಪದ್ಧತಿಗಳನ್ನು ಜಾರಿಗೆ ತಂದರು. ಈ ಕ್ಷೇತ್ರದಲ್ಲಿ ಭಗವಂತನು ಪೃಥ್ವೀಲಿಂಗರೂಪದಿಂದ ಆವಿರ್ಭವಿಸಿರುವನು. ಈ ಸ್ಥಳದಲ್ಲಿ ಆಚಾರ್ಯರು ಶಿವಾಲಯವನ್ನು ನಿರ್ಮಿಸಿ ಶಿವಕಾಂಚೀ ಎಂಬ ಪಟ್ಟಣವನ್ನು ನಿರ್ಮಿಸಿದರು. ಅದಕ್ಕೆ ಪೂರ್ವಭಾಗದಲ್ಲಿ ಶ್ರೀವರದರಾಜಸ್ವಾಮಿಯೆಂಬ ಹೆಸರಿನಿಂದ ಆವಿರ್ಭೂತನಾಗಿದ್ದ ಮಹಾವಿಷ್ಣುವನ್ನು ಸಂದರ್ಶಿಸಿ ಅಲ್ಲಿ ವಿಷ್ಣುಕಂಚಿ ಎಂಬ ಮತ್ತೊಂದು ಪಟ್ಟಣವನ್ನು ನಿರ್ಮಿಸಿದರು. ಆ ದೇಶನಿವಾಸಿಗಳಾದ ಕೆಲವರು ಆಚಾರ್ಯರನ್ನು ಕುರಿತು ಹೀಗೆಂದರು : ''ಪೂಜ್ಯರೆ, (೮) ದೇಹಾತ್ಮಭೇದವು ಪ್ರತ್ಯಕ್ಷಸಿದ್ಧವಾಗಿರವದರಿಂದಲೇ ಪರಲೋಕಾದಿಗಳಲ್ಲಿಯೂ ಆಯಾ ಜೀವರುಗಳ ಕರ್ಮಾನುಗುಣವಾಗಿ ಫಲವಾಗುವದು ಯುಕ್ತವಾದ್ದರಿಂದ ದೇಹವು ನಾಶವಾದ ಮೇಲೂ ಭೇದವೇ ಸತ್ಯವೆಂದಾಯಿತಲ್ಲವೆ? ಹೀಗಿರುವಲ್ಲಿ ಅದ್ವೈತವು ಹೇಗೆ ಸಿದ್ಧವಾಯಿತು?'' ಈ ಪ್ರಶ್ನೆಗೆ ಉತ್ತರವಾಗಿ ಆಚಾರ್ಯರು ಹೀಗೆಂದರು: ''ನಿಜ; ವ್ಯವಹಾರದಲ್ಲಿ ಭೇದವೇ ಸರಿ; ಆದರೆ ನೀವು ವ್ಯವಹಾರವನ್ನು ಮೀರಿದ ಪರಮಾರ್ಥತತ್ತ್ವವನ್ನು ಅರಿಯದೆ ಇಷ್ಟೇ ಸರಿ- ಎನ್ನುತ್ತಿರುವಿರಿ. ಇದು ಅಲ್ಪವಾಯಿತು. ಪ್ರತ್ಯಕ್ಷಕ್ಕೆ ನಿಲುಕದ ತತ್ತ್ವವನ್ನು ಶಬ್ದಪ್ರಮಾಣದಿಂದ ತಿಳಿಯಬೇಕು. ಅಂಥ ಶಬ್ದವು ವೇದರೂಪವಾದ ಅಪೌರುಷೇಯಶ್ರುತಿಯೆನಿಸಿ 'ಎಲ್ಲವೂ ಆತ್ಮನೇ ಆಗಿರುವಲ್ಲಿ ಯಾವನು ಏನನ್ನು ಎಲ್ಲಿ ಬೇರೆಯಾಗಿ ಕಂಡಾನು?' ಎಂದು ದ್ವೈತವನ್ನು ನಿಂದೆಮಾಡಿದೆ. ದೇವತೆಗಳು ಎಷ್ಟು ಮಂದಿ? ಎಂಬ ಪ್ರಶ್ನೆಗೂ ಬೇರೆ ಬೇರೆಯ ಉತ್ತರಗಳನ್ನು ನೀಡಿ ಕಡೆಯಲ್ಲಿ 'ದೇವನೊಬ್ಬನೇ' ಎಂಬ ಸಿದ್ಧಾಂತವನ್ನು

ಮಂಡಿಸಿರುತ್ತದೆ. ಆ ದೇವನೇ 'ಬಹು ಸ್ಯಾಂ' (ನಾನು ಬಹುವಾಗುವೆನು) ಎಂದು ಸಂಕಲ್ಪಿಸಿ ಪ್ರಪಂಚವಾಗಿ ತೋರಿಕೊಂಡು ಎಲ್ಲಾ ವಸ್ತುಗಳಲ್ಲಿಯೂ ತಾನೇ ಒಳಹೊಕ್ಕಿರುವನು. ಆದ್ದರಿಂದ ಆತ್ಮನೂ ಬ್ರಹ್ಮವೂ ಒಂದೇ; ಹಾಗೆಂದೇ ಐಕ್ಯಜ್ಞಾನವನ್ನು ಮಾಡಿಕೊಳ್ಳಬೇಕು. ಇದೇ ಪರಮಪುರುಷಾರ್ಥಸಾಧನವು' ಎಂದು ಉಪದೇಶಿಸಿದರು. ಇದರಿಂದ ಪ್ರಭಾವಿತರಾದ ಅವರುಗಳು ಆಚಾರ್ಯರ ಶಿಷ್ಯರಾದರು. ಮುಂದೆ ಆಚಾರ್ಯರು ತಿರುಪತಿಕ್ಷೇತ್ರಕ್ಕೆ ಹೋಗಿ ಅಲ್ಲಿ ವೆಂಕಟಾಚಲಪತಿಯನ್ನು ಸಂದರ್ಶಿಸಿ ವಿದರ್ಭದೇಶಕ್ಕೆ ಬಂದರು. ಅಲ್ಲಿದ್ದ ಭೈರವತಂತ್ರವಾದಿಗಳನ್ನೂ ಜಯಿಸಿ ಮುಂದೆ ಕಾಪಾಲಿಕರನ್ನು ಜಯಿಸುವದಕ್ಕಾಗಿ ಉಜ್ಜಯಿನಿ- ಎಂಬ ಪುರವನ್ನು ಪ್ರವೇಶಿಸಿದರು.

## ಕಾಪಾಲಿಕರನ್ನು ಜಯಿಸಿದ್ದು :

ವಿದರ್ಭದೇಶದ ಕೆಲವು ಭಾಗಗಳಲ್ಲಿ ಆಗ ನೆಲೆಸಿದ್ದ ಕಾಪಾಲಿಕಮತದವರಲ್ಲಿ ಕ್ರಕಚನೆಂಬವನು ಪ್ರಸಿದ್ಧನಾಗಿದ್ದನು. ಅವನನ್ನು ಹಿಂಬಾಲಿಸಿದ್ದ ಒಂದು ದೊಡ್ಡ ಗುಂಪು ಇತ್ತು. (೯) ಕಾಪಾಲಿಕರ ಮತವೇನೆಂದರೆ : 'ಮಹಾದೇವನು ಶ್ಮಶಾನವಾಸಿಯು. ನರಕಪಾಲವನ್ನೂ ಆತನು ಧರಿಸಿದ್ದಾನೆ. ಭಸ್ಮವನ್ನು ಲೇಪಿಸಿ ಕೊಂಡಿದ್ದಾನೆ. ಆದ್ದರಿಂದ ಆತನನ್ನು ಒಲಿಸಿಕೊಳ್ಳಲು ಉಪಾಸಕರಾದವರೂ ನರಕಪಾಲ- ಭಸ್ಮಾದಿಗಳನ್ನು ಧರಿಸಬೇಕು. ರಕ್ತಸಿಕ್ತವಾದ ತಲೆಬುರುಡೆಗಳೆಂಬ ಕಮಲಗಳಿಂದ ಭೈರವಾರ್ಚನೆ ಮಾಡಬೇಕು. ಆಗ ಉಮಾಸಹಿತನಾದ ದೇವನು ಪ್ರತ್ಯಕ್ಷನಾಗಿ ವರಗಳನ್ನು ಕೊಡುವನು' ಎಂದು ಹೇಳುತ್ತಿದ್ದರು. ಆಚಾರ್ಯರು ಅವರ ಮತವನ್ನು ಖಂಡಿಸಿ ''ವೈದಿಕಧರ್ಮಕ್ಕೆ ವಿರುದ್ಧವಾದ ಆಚಾರಗಳನ್ನು ಕೈಗೊಳ್ಳಬಾರದು; ಭಸ್ಮಧಾರಣೆಯು ಗ್ರಾಹ್ಯವಾದರೂ ಕಪಾಲಧಾರಣಾದಿಗಳು ಕೂಡದು. ಪರಮೇಶ್ವರನು ದಯಾಮಯನಾದ್ದರಿಂದ ಸಾತ್ತ್ವಿಕ ವಸ್ತುಗಳನ್ನು ಉಪಯೋಗಿಸಿ ಭಕ್ತಿಯಿಂದ ಅರ್ಚನೆ ಮಾಡಿದರೂ ಆತನು ಅನುಗ್ರಹಿಸುತ್ತಾನೆ. ನೀವುಗಳು ಇನ್ನು ಮುಂದೆ ದುರಾಚಾರಗಳನ್ನು ಬಿಟ್ಟು ಸದಾಚಾರ ಸಂಪನ್ನರಾಗಿರಿ'' ಎಂದು ತಿಳಿಸಿದರು. ಆದರೂ ಕಾಪಾಲಿಕರು ಕೇಳಲಿಲ್ಲ. ಆಗ ಆ ದೇಶದ ರಾಜನು ಆಚಾರ್ಯರ ಮತವನ್ನು ಎತ್ತಿ ಹಿಡಿದು ಕಾಪಾಲಿಕರನ್ನು ರಾಜಸಭೆಯಿಂದ ಓಡಿಸಿದನು. ಇದರಿಂದ ಕುಪಿತರಾದ ಅವನ ಗುಂಪಿನವರು ಸಿಡಿದೆದ್ದು ಹಿಂಸೆಯನ್ನಾರಂಭಿಸಿದರು. ರಾಜನು ತನ್ನ ಸೈನ್ಯದ ಸಹಾಯದಿಂದ ಅವರನ್ನು ದಮನ ಮಾಡಿದನು. ಆದರೂ ನಾಯಕನಾದ ಕ್ರಕಚನು ಉಳಿದ ಕಾಪಾಲಿಕರನ್ನು ಸಂಘಟಿಸಿ ವೈದಿಕ ಮತಾವಲಂಬಿಗಳಿಗೆ ತೊಂದರೆಯನ್ನು ಕೊಡಲಾರಂಭಿಸಿದನು. ಅಂಥ ವಿರೋಧಿಗಳನ್ನೆಲ್ಲ ಆಚಾರ್ಯರು ತಮ್ಮ ಹುಂಕಾರದಿಂದ ಭಸ್ಮೀಭೂತರನ್ನಾಗಿ ಮಾಡಿದರು. ಪುನಃ ಕ್ರಕಚನು ಇಷ್ಟದೈವವಾದ ಭೈರವನನ್ನೇ ಮಂತ್ರಬಲದಿಂದ ಬೇಡಿದನು. ಆಗ ಭೈರವನು 'ತತ್ತ್ವಜ್ಞಾನಿ

ಗಳಾದವರೆಲ್ಲರೂ ನನ್ನ ಆತ್ಮಸ್ವರೂಪರು; ಅವರು ಎಂದಿಗೂ ನಾಶವಾಗಲಾರರು. ನೀನು ಅಂಥ ತತ್ತ್ವವಿದರನ್ನು ದ್ವೇಷಿಸಿದುದಕ್ಕಾಗಿ ನಿನ್ನನ್ನೇ ಶಿಕ್ಷಿಸುವೆನು' ಎನ್ನುತ್ತಾ ಕ್ರಕಚನನ್ನೇ ಸಂಹಾರಮಾಡಿ ಅಂತರ್ಧಾನನಾದನು. ಆಗ ಆಚಾರ್ಯರ ಮಹಿಮೆಯನ್ನು ಕಂಡು ಎಲ್ಲರೂ ಬೆರಗಾದರು. ಮತ್ತು ಈ ಮಹನೀಯರು ಮಹಾದೇವನ ಪ್ರತಿನಿಧಿಗಳೇ ಸರಿ- ಎಂದು ಭಾವಿಸಿ ಪೂಜಿಸಿ ಇವರ ಅನುಯಾಯಿ ಗಳಾದರು.

## ಸುಗತರೊಡನೆ ಸಂವಾದ :

(೧೦) ಸುಗತನೆಂಬ ಮತಾಚಾರ್ಯನು ಶ್ರೀಶಂಕರಾಚಾರ್ಯರನ್ನು ಕಂಡು ಹೀಗೆಂದನು : ''ಸ್ವಾಮಿ, ಜಗತ್ತು ಜೀವರುಗಳಿಂದ ತುಂಬಿದೆ. ಪ್ರತಿ ಜೀವಕ್ಕೂ ತಾನು ಬದುಕಬೇಕೆಂಬ ಆಶೆಯಿದೆ. ಹೀಗಿರುವಲ್ಲಿ ಕೆಲವು ಜೀವರು ಉಳಿದ ಜೀವರುಗಳಿಗೆ ಹಿಂಸೆ ಮಾಡಬಾರದು ಅಹಿಂಸೆಯೇ ಪರಮಧರ್ಮವೆಂದು ಶಾಸ್ತ್ರಗಳಲ್ಲಿ ಹೇಳಿದೆ. ನಾನು ಎಲ್ಲಾ ಪ್ರಾಣಿಗಳಲ್ಲಿಯೂ ದಯಾಪರನಾಗಿದ್ದೇನೆ. ಹಿಂಸಾರೂಪವಾದ ಯಜ್ಞವು ಅನುಷ್ಠೇಯವಲ್ಲವೆಂದೇ ನನ್ನ ಮತವು. ಇದಕ್ಕೆ ತಮ್ಮ ಉತ್ತರವೇನು?'' ಎಂದನು. ಆಗ ಆಚಾರ್ಯರು 'ಅಯ್ಯಾ ನಿನ್ನ ಮಾತು ಸ್ವಲ್ಪಮಟ್ಟಿಗೆ ಸರಿ; ನಮ್ಮ ವೇದಶಾಸ್ತ್ರಗಳಲ್ಲಿಯೂ 'ನ ಹಿಂಸ್ಯಾತ್ ಸರ್ವಾ ಭೂತಾನಿ' (ಯಾವ ಪ್ರಾಣಿಗಳನ್ನೂ ಹಿಂಸಿಸಕೂಡದು) ಎಂಬ ಧರ್ಮೋಪದೇಶವಿದ್ದೇ ಇದೆ. ಆದರೆ 'ಅನ್ಯತ್ರ ತೀರ್ಥೇಭ್ಯಃ' (ಯಜ್ಞಯಾಗಾದಿಗಳಂಥ ಪುಣ್ಯ ಕರ್ಮಗಳನ್ನು ಹೊರತು ಉಳಿದ ಸಂದರ್ಭದಲ್ಲಿ ಪ್ರಾಣಿಹಿಂಸೆ ಮಾಡಬಾರದು) ಎಂದು ವಿವರಣೆಯಿದೆ. ಹಾಗಿಲ್ಲವಾದರೆ ನೂರಕ್ಕೆ ನೂರು ಅಹಿಂಸೆಯೆಂಬುದು ಹೊಂದುವದೇ ಇಲ್ಲ. ಏಕೆಂದರೆ ಮನುಷ್ಯಜೀವನವು ಹಿಂಸೆಯಿಲ್ಲದೆ ಸಾಗುವದೇ ಇಲ್ಲ. ಪೈರುಗಳನ್ನು ಕಟಾವು ಮಾಡುವದು, ದನಗಳಿಂದ ಹಾಲು, ತುಪ್ಪಗಳನ್ನು ಸಂಗ್ರಹಿಸುವದು. ಪದಾರ್ಥಗಳನ್ನು ಬೇಯಿಸುವದು- ಇವೆಲ್ಲವೂ ಹಿಂಸೆಯೇ ಎಂದು ಕುಳಿತರೆ ಬದುಕವದು ಹೇಗಾದೀತು? ಆದ್ದರಿಂದ ದೇವತೆಗಳ ತೃಪ್ತಿಗಾಗಿ ಮಾಡುವ ಯಜ್ಞವು ಹಿಂಸಾಯುಕ್ತವಾದರೂ ಧರ್ಮವೇ ಆಗಿದೆ. ಯುದ್ಧವು ಹೆಚ್ಚಿನ ಹಿಂಸಾರೂಪದ್ದಾಗಿದ್ದರೂ ಅರ್ಜುನನಿಗೆ ಅದು ಸ್ವಧರ್ಮವಾಗಿದ್ದುದರಿಂದ ಯುದ್ಧವನ್ನು ಮಾಡು ಎಂದೇ ಭಗವಂತನು ತಿಳಿಸಿದನು. ಹೀಗೆ ಬ್ರಾಹ್ಮಣಾದಿಗಳಿಗೆ ಸ್ವಧರ್ಮವಾಗಿರುವ ಯಜ್ಞ ಯಾಗಾದಿಗಳನ್ನು ಹಿಂಸೆಯೆಂದು ತಪ್ಪಾಗಿ ಭಾವಿಸಿ ಕೈ ಬಿಡಬಾರದು. ಹಾಗೆ ಬಿಟ್ಟರೆ ಅಂಥವರು ಕರ್ಮ ಭ್ರಷ್ಟರಾಗುವರು. ಹೇಗೆ ಡಾಕ್ಟರಾದವನು ರೋಗಚಿಕಿತ್ಸೆಗಾಗಿ ಸೂಜಿಯಿಂದ ಚುಚ್ಚಿದರೂ ದೇಹವನ್ನು ಕೊಯ್ದರೂ ಅದು ಹಿಂಸೆಯೆನಿಸಲಾರದೋ ಹಾಗೆಯೇ ಯಜ್ಞಾದಿಗಳಲ್ಲಿಯೂ ತಿಳಿಯಬೇಕು. ಅಹಿಂಸೆ ಎಂಬುದಕ್ಕೆ ಅಲ್ಪಹಿಂಸೆ ಎಂದರ್ಥ ಮಾಡಬೇಕು. ಇದಲ್ಲದೆ ಯಜ್ಞವು ಸಮೃದ್ಧಿಗಾಗಿ ಮಾಡಲ್ಪಡುವದು. ಬೀಜವನ್ನು

ಬಿತ್ತುವದು ಪೈರುತೆಗೆಯುವದಕ್ಕೇ ಹೊರತು ಬೀಜವು ನಷ್ಟವಾಯಿತಲ್ಲ ಎನ್ನಬಾರದು; ಹಾಗೆಯೇ ಯಜ್ಞದಲ್ಲಿ ಅರ್ಪಿಸಿದ ಆಹುತಿಗಳಿಂದ ಪರ್ಜನ್ಯಾದಿಗಳು ಉಂಟಾಗಿ ಲೋಕಕ್ಕೆ ಸುಭಿಕ್ಷವಾಗುತ್ತದೆ. ಆದ್ದರಿಂದ ವೈದಿಕಮತವೇ ಸರಿಯಾದದ್ದು' ಎಂದು ತಿಳಿಸಿ ಸುಗತರನ್ನೆಲ್ಲ ಪರಿವರ್ತನಮಾಡಿದರು.

## ಕ್ಷಪಣಕರೊಡನೆ ಸಂವಾದ :

(೧೧) ಸಮಯನೆಂಬ ಹೆಸರಿನ ಕ್ಷಪಣಕನೊಬ್ಬನು ಆಚಾರ್ಯರನ್ನು ಸಂಧಿಸಿ ಹೀಗೆಂದನು : ''ಯತಿಗಳೆ, ನನ್ನ ಎರಡೂ ಕೈಗಳಲ್ಲಿರುವ ಗೋಳಯಂತ್ರ (Globe) ವನ್ನೂ ತುರೀಯಂತ್ರ (ನೇಯ್ಗೆಯ ಯಂತ್ರ) ವನ್ನು ನೋಡಿರಿ. ಭಗವಂತನು ಸೂರ್ಯಚಂದ್ರರೆಂಬ ಗೋಳಗಳನ್ನು ತಿರುಗಿಸುತ್ತಾ ಪ್ರಪಂಚವನ್ನೆಲ್ಲ- ಹತ್ತಿಯ ದಾರದಿಂದ ಬಟ್ಟೆಯನ್ನು ನೇಯುವಂತೆ ಕಾಲಮಯವಾಗಿ ವಸ್ತುಗಳನ್ನು ಸಂಘಟಿಸಿದ್ದಾನೆ. ಇದೇ ಆತನ ಮಹಿಮೆಯು. ಕಾಲಪುರುಷನೇ ಭಗವಂತನು. ಸಮಯ ಅಥವಾ ಕಾಲನ ಪ್ರಸಾದದಿಂದ ನಾನು ಭವಿಷ್ಯವನ್ನು ಹೇಳಬಲ್ಲೆನು. ಶುಭಾಶುಭಗಳನ್ನೂ ಸೂಚಿಸಬಲ್ಲೆನು. ಇದೇ ನನ್ನ ಮತವು. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು?'' ಎಂದನು. ಆಚಾರ್ಯರು ಸಮಾಧಾನದಿಂದ ''ಅಯ್ಯಾ ನೀನು ಹೇಳುವದು ಸರಿ; ಕಾಲದೇವತೆ ಸೂರ್ಯಚಂದ್ರರ ಚಲನರೂಪದಿಂದ ಪ್ರಾಣಿಗಳ ಆಯುಷ್ಯವನ್ನು ಅಳೆಯುತ್ತಿರುವದೂ ನಿಜ. ಆದರೇನು? ಕಾಲಾತೀತವಾದ ಬ್ರಹ್ಮವು ಕಾಲಕ್ಕೂ ಕಾಲವೆನಿಸಿ ಮೃತ್ಯುವಿಗೆ ಮೃತ್ಯುವಾಗಿದೆ. ಅದರ ಶಕ್ತಿಯಿಂದಲೇ ದೇಶಕಾಲಗಳು ತೋರಿಕೊಳ್ಳುವವು. ನೀನು ನುಡಿಯುವ ಭವಿಷ್ಯವು ಕಾಲಕ್ಕೊಳಪಟ್ಟ ವಸ್ತುಗಳಿಗೆ ಸೇರಿದ್ದು. ಆದರೆ ಬ್ರಹ್ಮವು ಭೂತಭವಿಷ್ಯದ್ವರ್ತಮಾನಗಳಿಗೂ ಪ್ರಭುವೆನಿಸಿದೆ. ಬ್ರಹ್ಮದ ಭವಿಷ್ಯವನ್ನು ನೀನೇನು ನುಡಿಯಬಲ್ಲೆ? ಏಕೆಂದರೆ ಅದು ಭವಿಷ್ಯತ್ತಲ್ಲ. ಭೂತವೂ ಅಲ್ಲ; ನಿತ್ಯವರ್ತಮಾನಸ್ವರೂಪವಾಗಿದೆ. ಇದನ್ನು ತಿಳಿಯುವವನಾಗು. ನಿನ್ನ ಭವಿಷ್ಯ ಕಥನವು ಆಮೇಲಾಗಲಿ'' ಎಂದರು. ಆಗ ಆತನು ನಾಚಿಕೊಂಡು ಹಿಂದಿರುಗಿದನು.

## ಜೈನಮತದವರೊಡನೆ ಸಂವಾದ :

(೧೨) ದಿಗಂಬರ ಪಂಥದ ಜೈನಾಚಾರ್ಯನೊಬ್ಬನು ಆಚಾರ್ಯರನ್ನು ಕಂಡು ಹೀಗೆಂದನು. ''ಜಿನನೆಂಬ ದೇವನೊಬ್ಬನಿರುವನು; ಅವನು ಸರ್ವಪ್ರಾಣಿಗಳ ಹೃದಯನಿವಾಸಿಯು ಮತ್ತು ಮುಕ್ತಿಪ್ರದನು. ಜೀವನು ಶುದ್ಧನೇನೋ ನಿಜ. ಆದರೆ ದೇಹವು ಅಶುದ್ಧವು. ಆದ್ದರಿಂದ ದೇಹವಾಸಿಯಾದ ಇವನು ಸ್ನಾನಾದಿಗಳಿಂದ ಶುದ್ಧನಾಗಲಾರನು. ಹೀಗಿರುವಲ್ಲಿ ಸ್ನಾನವನ್ನೇಕೆ ಮಾಡಬೇಕು? ಜಿನದೇವನ ಧ್ಯಾನವೊಂದೇ ಮುಕ್ತಿ ಸಾಧನವಲ್ಲವೆ?'' ಎಂದನು. ಆಗ ಆಚಾರ್ಯರು

''ಮಹಾತ್ಮರೆ, ಆತ್ಮನು ಶುದ್ಧನೆಂಬ ಸಿದ್ಧಾಂತವೇನೋ ಸರಿ. ಆದರೆ ಅದೇ ಆತ್ಮನೇ ದೇಹ ಸಂಬಂಧದಿಂದ ಜೀವನೆಂದೂ ಬದ್ಧನೆಂದೂ ವ್ಯವಹರಿಸಲ್ಪಟ್ಟಿರುವನು. ದೇಹವು ಅಶುದ್ಧವಾಗುತ್ತಿರುವದರಿಂದಲೇ ಆಗಾಗ್ಗೆ ಶುಚಿ ಮಾಡಬೇಕು. ಅದಕ್ಕೇ ಸ್ನಾನ, ಮಡಿ, ಆಚಾರಗಳನ್ನು ವೈದಿಕಧರ್ಮದಲ್ಲಿ ಹೇಳಿದೆ. ಜೀವನಿಗೆ ಸ್ಥೂಲಶರೀರದ ಜೊತೆಗೆ ಸೂಕ್ಷ್ಮ, ಕಾರಣ ಶರೀರಗಳೆಂಬ ಉಪಾಧಿಗಳೂ ಇವೆ. ಆದರೆ ಇವೆಲ್ಲ ಅವಿದ್ಯಾಕಲ್ಪಿತವಾದವುಗಳು; ಬ್ರಹ್ಮವಿದ್ಯೆಯಿಂದ ಅವಿದ್ಯೆಯು ನಾಶವಾಗಲು ಈ ಉಪಾಧಿಗಳನ್ನೆಲ್ಲ ಕಳಚಿಕೊಂಡ ಜೀವನು ಸನಾತನದೇವನೆನಿಸುವನು. ಹೀಗಿರುವದೇ ಅವನ ಸ್ವರೂಪವು; ಇದೇ ಮುಕ್ತಿಯು; ಈ ಮರ್ಮವನ್ನರಿತು ಉದ್ಧಾರವಾಗಿರಿ'' ಎಂದಾಗ ಜಿನವಾದಿಯು ಸುಮ್ಮನಾಗಿ ಬಿಟ್ಟನು.

## ಬೌದ್ಧಮತದವರೊಡನೆ ಸಂವಾದ :

(೧೩) ಶಬಲನೆಂಬ ಬೌದ್ಧಾನುಯಾಯಿಯು ಒಮ್ಮೆ ಆಚಾರ್ಯರನ್ನು ಸಂಧಿಸಿ ಹೀಗೆಂದನು : 'ಅಯ್ಯ ಯತಿಯೆ, ನಿನ್ನ ನಿರ್ಗುಣಬ್ರಹ್ಮವಾದವೂ ಶೂನ್ಯವಾದವೂ ಒಂದೇ. ಮನುಷ್ಯನ ಕೋಡಿನಂತೆ ತುಚ್ಛವೇ ಸರಿ. ಇದನ್ನು ಜನರಿಗೆ ಬೋಧಿಸುವದೇನಿದೆ? ಪ್ರಪಂಚವೆಲ್ಲ ಮಿಥ್ಯೆಯಾದ್ದರಿಂದಲೇ ಯಾವದೂ ಸತ್ಯವಲ್ಲ; ಸತ್ಯವೆಂಬುದೇ ಇಲ್ಲ. ಸರ್ವವೂ ಕ್ಷಣಿಕ; ಸರ್ವವೂ ದುಃಖಮಯವೇ. ವಸ್ತು ಹುಟ್ಟಿದಂತೆ ತೋರುತ್ತದೆಯೇ ಹೊರತು ನಿಜವಾಗಿ ಇಲ್ಲ. ಸಾದೃಶ್ಯದಿಂದ ಅದೇ-ಎಂಬ ಭ್ರಾಂತಿಯಾಗಿದೆ. ಹರಿಯುತ್ತಲೇ ಇರುವ ನದಿಯನ್ನು ಅದೇ ನದಿ ಎಂದು ಭ್ರಾಂತಿಯಿಂದ ವ್ಯವಹರಿಸುವದಿಲ್ಲವೆ? ಹೀಗಿರುವಲ್ಲಿ ಆತ್ಮನೆಂಬುದೆಲ್ಲಿದೆ? ಎಲ್ಲವೂ ನಿರಾತ್ಮವೇ; ಶೂನ್ಯವೇ ಸರಿ. ಇದೇ ನಮ್ಮ ಸಿದ್ಧಾಂತವು. ನಿನ್ನ ಉತ್ತರವೇನು?' ಎಂದನು. ಆಗ ಆಚಾರ್ಯರು ಹೀಗೆಂದರು ''ತೋರುತ್ತಿರುವ ಜಗತ್ತು ಮಿಥ್ಯೆಯೆಂಬುದೇನೋ ಸರಿ. ಆದರೆ ಅದರ ನಾಸ್ತಿತ್ವವನ್ನು ಯಾವ ಸಾಕ್ಷಿಯ ಬಲದಿಂದ ನಿರ್ಧರಿಸಲಾಗುವದೋ ಅದು ತಾನೇ ಹೇಗೆ ಶೂನ್ಯವೆನಿಸೀತು? 'ಶೂನ್ಯವೇ ಸಿದ್ಧಾಂತವು' ಎಂದು ಹೇಳುವವನಾದರೂ ಉಳಿದಿರಬೇಕಲ್ಲವೆ? ಅವನೇ ಆತ್ಮನು. ನಿಸ್ಸಾಕ್ಷಿಕವಾಗಿ ಶೂನ್ಯವೂ ಸಿದ್ಧವಾಗಲಾರದು; ಅದು 'ನನ್ನ ತಾಯಿ ಬಂಜೆ, ಎಂದಂತೆ ಅನುಭವವಿರುದ್ಧವು. ಇನ್ನು ಸಾಕ್ಷಿಯು ಅಬಾಧಿತನಾಗಿಯೇ ಉಳಿದುಕೊಂಡನಾದರೆ ಶೂನ್ಯವಾದದ ಹಾನಿಯೇ ಆಯಿತು. ಆದ್ದರಿಂದ ಸರ್ವಕ್ಕೂ-ಎಂದರೆ ಶೂನ್ಯಕ್ಕೂ ಸಾಕ್ಷಿಯಾಗಿರುವ ಆತ್ಮನು ''ಅಸ್ತಿ'' ಇದ್ದೇ ಇರುವನು. ಅದೇ ಬ್ರಹ್ಮವು. ಆತ್ಮನು ಬ್ರಹ್ಮವೇ ಎಂಬುದು ಪ್ರಾಕೃತರಿಗೆ ತಿಳಿದಿಲ್ಲವಾಗಿ ಅದನ್ನು ಉಪದೇಶಿಸುವದಕ್ಕೇ ಶಾಸ್ತ್ರವು ಹೊರಟಿದೆ. **ಬ್ರಹ್ಮವನ್ನು ಬಿಟ್ಟು ಉಳಿದ ತೋರಿಕೆಗಳಾವುವೂ ಸತ್ಯವಲ್ಲ - ಎಂಬುದು ಸರಿ. ಬ್ರಹ್ಮವು ತೋರುವ ವಸ್ತುವಲ್ಲ. ಎಂದೆಂದಿಗೂ ಇರುವ ವಸ್ತು. ಇದ್ದದ್ದು ಎಂದೆಂದೂ**

**ಇಲ್ಲವಾಗುವದಿಲ್ಲ; ಹಾಗೆಯೇ ಇಲ್ಲದ್ದು ಯಾವಾಗಲೂ ಇದೆ-ಎನಿಸುವದೂ ಇಲ್ಲ. ಇದೇ ತತ್ತ್ವವು.** ಸದ್ಬ್ರಹ್ಮವೇ ಜಗತ್ಕಾರಣವಾಗಿದ್ದು ನಮ್ಮ ಸಿದ್ಧಾಂತವು ಸತ್ಕಾರ್ಯವಾದವನ್ನು ಸಮರ್ಥಿಸುವದು. ಇಲ್ಲವಾದರೆ ಅಸತ್ತಿನಿಂದ ಸತ್ತು ಹುಟ್ಟುವದಾದರೂ ಹೇಗೆ? ಜಗತ್ತೆಲ್ಲವೂ ಸದನ್ವಿತವಾಗಿರುವದರಿಂದಲೇ ಸತ್ತೊಂದೇ ಪರಮಾರ್ಥವು. ಅದೇ ಜಗತ್ತಾಗಿಯೂ ತೋರಿಕೊಂಡಿದೆ- ಎಂಬಿದೇ ಯುಕ್ತಿಯುಕ್ತವಾಗಿದೆ. ಹೀಗೆ ಬ್ರಹ್ಮವಾದಿಗಳಾದ ನಾವು ಬ್ರಹ್ಮದ ದೃಷ್ಟಿಯಿಂದ ಜಗತ್ತೆಲ್ಲವೂ ಬ್ರಹ್ಮವೇ ಎಂದು ಒಪ್ಪುತ್ತೇವೆ; ಶೂನ್ಯವೆಂದು ಒಪ್ಪುವದಿಲ್ಲ. ನೀವು ಶೂನ್ಯವೇ ತತ್ತ್ವವೆನ್ನುವದಾದರೆ ನಿಮ್ಮ ಮತವೂ ಶೂನ್ಯವೇ (ಸೊನ್ನೆಯೇ) ಎಂದಾಯಿತಲ್ಲವೆ? ಇಲ್ಲದ ಮತವನ್ನು ಖಂಡನೆಯಾದರೂ ಏಕೆ ಮಾಡಬೇಕು? ಹೀಗೆ ನಿಮ್ಮ ಶೂನ್ಯವಾದವು **ಯುಕ್ತಿ ಅನುಭವಗಳಿಗೂ** ಹೊಂದುವದಿಲ್ಲವಾದ್ದರಿಂದ ತ್ಯಾಜ್ಯವೇ ಸರಿ; ಇಂಥ ವಾದವನ್ನು ಬಿಟ್ಟು ವೇದವಾದವನ್ನು ಸ್ವೀಕರಿಸಿ ಉದ್ಧಾರವಾಗುವವರಾಗಿರಿ'' ಎಂದರು. ಆಗ ಬೌದ್ಧನು ಪರಾಜಿತನಾಗಿ ಹಿಂದಿರುಗಿಬಿಟ್ಟನು.

## ಮಲ್ಲಾರಿ ಮತದವರೊಡನೆ ಸಂವಾದ :

(೧೪) ಅನುಮಲ್ಲಪುರವೆಂಬ ಗ್ರಾಮಕ್ಕೆ ಆಚಾರ್ಯರು ಬಂದವರಾಗಿ ಅಲ್ಲಿದ್ದ ಒಬ್ಬ ಭಕ್ತನನ್ನು ಕುರಿತು ನಿಮ್ಮಗಳ ಮತವೇನೆಂದು ಕೇಳಿದರು. ಆಗ ಆತನು ಹೀಗೆಂದನು: 'ಸ್ವಾಮಿ, ಮಲ್ಲಾಸುರನೆಂಬ ರಾಕ್ಷಸನನ್ನು ಸಂಹಾರ ಮಾಡಿದ ಭಗವಂತನಿಗೆ 'ಮಲ್ಲಾರಿ' ಎಂದು ಹೆಸರು. ಆತನನ್ನು ಹಾಗೂ ಅವನ ವಾಹನವಾದ ನಾಯಿಯನ್ನು ನಾವು ಪೂಜಿಸುವೆವು. ವಾದ್ಯನಾಟ್ಯಗಳಿಂದ ಸಂತೋಷಗೊಳಿಸುವೆವು. ಆತನ ಅನುಗ್ರಹದಿಂದ ಎಲ್ಲಾ ಸುಖಸಂಪತ್ತುಗಳನ್ನೂ ಪಡೆದುಕೊಳ್ಳುವೆವು. ವೇದದಲ್ಲಿಯೂ ''ಶ್ವಭ್ಯಃ ಶ್ವಪತಿಭ್ಯಶ್ಚ ವೋ ನಮಃ'' (ನಾಯಿಗಳಿಗೆ ಹಾಗೂ ಅವುಗಳ ಒಡೆಯರಾದವರಿಗೆ ನಮಸ್ಕಾರ) ಎಂದು ನಮ್ಮ ದೇವರನ್ನು ಸ್ತೋತ್ರ ಮಾಡಿದೆ. ನೀವು ಕೂಡ ಈ ಮತವನ್ನೇಕೆ ಸ್ವೀಕರಿಸಬಾರದು?' ಎಂದನು. ಆಗ ಆಚಾರ್ಯರು ''ಅಯ್ಯಾ ಭಕ್ತನೆ, ಪರಮೇಶ್ವರನ ಸರ್ವಾತ್ಮತ್ವವನ್ನು ಸ್ತುತಿಸುವದಕ್ಕಾಗಿ ಹೇಳಿರುವ ವಾಕ್ಯವನ್ನು ಅಕ್ಷರಶಃ ಸ್ವೀಕರಿಸಬಾರದು. ವ್ಯವಹಾರವಿರುವವರೆಗೂ ಭೇದವೂ ತಾರತಮ್ಯವೂ ಇದ್ದೇ ಇರುವದು. ಶಾಸ್ತ್ರಗಳು ಭೇದದೃಷ್ಟಿಯುಳ್ಳವನಿಗೆ ಉಪದೇಶಿಸುವಾಗ ಸಾಂಕರ್ಯವನ್ನು ಕೂಡದೆಂದೇ ಹೇಳುತ್ತದೆ. ಆದ್ದರಿಂದ ನೀವು ನಿಷಿದ್ಧ ಚಿಹ್ನೆಗಳನ್ನು ಧರಿಸಿ ನಾಟ್ಯ- ವಾದ್ಯಗಳಲ್ಲಿಯೇ ರತರಾಗಿ, ಸದಾಚಾರತ್ಯಾಗವನ್ನು ಮಾಡಬಾರದು. ಶ್ರುತಿಸ್ಮೃತಿವಾಕ್ಯಗಳನ್ನು ಒಂದಕ್ಕೊಂದು ವಿರೋಧವಾಗದಂತೆ ಅರ್ಥಮಾಡಬೇಕು. ರುದ್ರನು ಸರ್ವರೂಪನಾದರೂ ಪೂಜ್ಯವಾದ ಉಪಾಧಿಗಳಲ್ಲೇ ರುದ್ರನನ್ನು ಕಂಡುಕೊಳ್ಳವದನ್ನು ಕಲಿಯಬೇಕು. ನಿತ್ಯಕರ್ಮಗಳನ್ನು ಬಿಡಬಾರದು.

ಸದಾಚಾರಗಳಿಗೆ ವಿರುದ್ಧವಾದುದನ್ನೂ ಕೈಗೊಳ್ಳಬಾರದು. ಹೀಗೆ ನೀವು ತಿದ್ದಿಕೊಂಡಲ್ಲಿ ನಿಮ್ಮ ಮತವೂ ಅನುಷ್ಠೇಯವೇ ಆಗುವದು'' ಎಂದು ತಿಳಿಸಿ ಅವರನ್ನೆಲ್ಲ ಪರಿವರ್ತಿಸಿದರು.

## ವಿಷ್ವಕ್ಸೇನಮತದವರೊಡನೆ ಸಂವಾದ :

(೧೫) ಆಚಾರ್ಯರು ಶಿಷ್ಯರೊಡಗೂಡಿ 'ಮರುಂಧ' ಎಂಬ ಪಟ್ಟಣಕ್ಕೆ ಬಂದರು. ಅಲ್ಲಿ ವಿಷ್ವಕ್ಸೇನಮತಾನುಯಾಯಿಗಳು ಇದ್ದರು. ಅವರುಗಳು ಸಹ ವಾದ್ಯಘೋಷಸಮೇತವಾಗಿ ಬಹು ಪದ್ಯಗಳನ್ನು ಪಠಿಸುತ್ತಾ ಇದ್ದರು. ವಿಷ್ವಕ್ಸೇನ ಗೋಪುರವನ್ನು ನಿರ್ಮಿಸಿಕೊಂಡು ಅದರ ಪೂರ್ವಕ್ಕೆ ಪ್ರಪಾಶಾಲೆಯನ್ನು ಕಟ್ಟಿಸಿ ಅಲ್ಲಿ ದರ್ಭಾಸನದಲ್ಲಿ ಕುಳಿತು ಅಂಗುಷ್ಠಮಾತ್ರಪರಿಮಾಣನಾದ ಪರಪ್ರಭುವನ್ನು ಮನೋನ್ಮನೀಮುದ್ರೆಯಿಂದ ಆರಾಧಿಸುತ್ತಾ ಇದ್ದ ಅವರ ಆಚಾರ್ಯನು ಕಂಡುಬಂದನು. ಆತನು ಆಚಾರ್ಯರನ್ನು ಕುರಿತು ಹೀಗೆಂದನು : ''ಸ್ವಾಮಿ, ನಾವು ವಿಷ್ವಕ್ಸೇನಾರಾಧಕರು. ಆ ದೇವನು ವೈಕುಂಠದಲ್ಲಿರುವನು. ಶಂಖಚಕ್ರಗಳನ್ನು ಧರಿಸಿರುವನು. ನಾವು ಆ ಚಿಹ್ನೆಗಳನ್ನು ಧರಿಸಿರುವೆವು. ಆತನಿಗೆ ಸೇನಾಪತಿಯೆಂದೂ ಹೆಸರಿದೆ. ಅವನ ಭಕ್ತರಾದ ನಮಗೆ ಯಮನ ಭಯವಿಲ್ಲ. ದೇಹವು ಬಿದ್ದು ಹೋದಾಗ ಆ ವಿಷ್ವಕ್ಸೇನನ ಸೇವಕರೇ ಬಂದು ನಮ್ಮನ್ನು ವೈಕುಂಠಕ್ಕೆ ಕರೆದೊಯ್ಯುವರು. ಹೀಗೆ ನಾವು ಮುಕ್ತರಾಗುವೆವು' ಎಂದನು. ಅದಕ್ಕೆ ಆಚಾರ್ಯರು, ''ಅಯ್ಯಾ ಭಕ್ತಶಿರೋಮಣಿಗಳೆ, ಕೇಳಿರಿ. ಭಗವಂತನಿಗೆ ಭಕ್ತರಲ್ಲಿ ಭೇದವಿಲ್ಲ. ಆತನು ನಿಮಗೆ ವೈಕುಂಠಲೋಕವನ್ನು ಕರುಣಿಸುವಂತೆ ಉಳಿದ ದೇವತಾಭಕ್ತರಿಗೂ ಕರುಣಿಸುವನು. ಏಕೆಂದರೆ ದೇವತೆಗಳೆಲ್ಲರೂ ವಿಷ್ಣುವಿನ ಅಂಶವೇ ಆಗಿರುವರು. ಪರಂಪರೆಯಿಂದ ಎಲ್ಲಾ ದೇವತಾರಾಧಕರೂ ನಾರಾಯಣಲೋಕವನ್ನೇ ಸೇರುವರು; ಆದರೆ ಮುಕ್ತಿಯನ್ನು ನೇರಾಗಿ ದಯಪಾಲಿಸುವವನು ನಾರಾಯಣನೇ ಹೊರತು ವಿಷ್ವಕ್ಸೇನನಲ್ಲ. ಅಂಥ ನಾರಾಯಣನನ್ನೇ ನೀವು ವಿಷ್ವಕ್ಸೇನನೆಂಬ ಹೆಸರಿನಿಂದ ಆರಾಧಿಸುವಿರಾದರೆ ನಮ್ಮ ಆಕ್ಷೇಪವಿಲ್ಲ. ಆ ದಯಾಮಯನು ಭಕ್ತಿಯನ್ನು ಮೆಚ್ಚುವನೇ ಹೊರತು ಉಳಿದ ವೇಷಭೂಷಣಗಳನ್ನಲ್ಲ; ಅವನೊಬ್ಬನೇ- ಎಂಬಿದನ್ನೂ ಆ ಮಹಾದೇವನೇ ಉಪಾಸ್ಯನೆಂಬುದನ್ನೂ ನೀವು ಇನ್ನೂ ದೃಢವಾಗಿ ಆಗಮ- ವೇದಶಾಸ್ತ್ರಗಳ ಸಹಾಯದಿಂದ ವಿಚಾರಮಾಡಿ ಅರಿತು ಭಕ್ತಿಯನ್ನು ಮಾಡುವಿರಾದರೆ ಅಮೃತರೇ ಆಗುವಿರಿ ; 'ವರ್ಣಾಶ್ರಮಾಚಾರಗಳನ್ನು ಬಲ್ಲ ಮನುಷ್ಯನು ಮಾತ್ರವೇ ವಿಷ್ಣುವನ್ನು ಸಂತೋಷಗೊಳಿಸಬಲ್ಲನು'- ಎಂದು ವಿಷ್ಣುಪುರಾಣವಚನವೂ ಇದೆ. ಆದ್ದರಿಂದ ನೀವೆಲ್ಲರೂ ವೈದಿಕಾಚಾರಗಳನ್ನನುಸರಿಸಿ ವಿಷ್ಣುಭಕ್ತರಾಗಿ ವಿಷ್ವಕ್ಸೇನನನ್ನೂ ಆರಾಧಿಸಿ ಉದ್ಧಾರವಾಗಿರಿ.'' ಎಂದು ಬೋಧಿಸಿದರು. ಆಗ ಅವರುಗಳು ಆಚಾರ್ಯರ ಸಮನ್ವಯಸಿದ್ಧಾಂತಕ್ಕೆ ತಲೆಬಾಗಿದರು. ತಮ್ಮ ಮತಾಚಾರಗಳನ್ನು ವೈದಿಕಾನುಗುಣವಾಗಿ ಬದಲಾಯಿಸಿಕೊಂಡು ಕೃತಾರ್ಥರಾದರು.

## ಮನ್ಮಥಭಕ್ತರೊಡನೆ ಸಂವಾದ :

(೧೬) ಅನಂತರ ಕೆಲವು ಮನ್ಮಥಭಕ್ತರು ಬಂದು ಆಚಾರ್ಯರನ್ನು ಕುರಿತು ಹೀಗೆಂದರು : ''ಗುರುಗಳೆ, ನಮ್ಮ ಮತವನ್ನು ಕೇಳಿ; ಮನ್ಮಥ (ಕಾಮ)ನೇ ಭಗವಂತನು. ಅವನು ಎಲ್ಲರ ಹೃದಯದಲ್ಲಿರುವನು. ಸೃಷ್ಟಿಯನ್ನು ಮಾಡುವವನು ಅವನೇ. ಅವನು ದುಂಡನೆಯ ಆಕಾರದ ಎರಡು ಒಡವೆಗಳನ್ನು ಎದೆಯಲ್ಲಿ ಧರಿಸಿರುವನು. ಯಾವಾಗಲೂ ಸ್ತ್ರೀ ಸಮೂಹದಿಂದ ಸುತ್ತುವರೆಯಲ್ಪಟ್ಟಿರುವನು. ಸ್ತ್ರೀಸ್ಪರ್ಶಾದಿಗಳ ಮೂಲಕ ಸುಖವನ್ನೀಯುವನು, ಐದು ಕುಸುಮಬಾಣಗಳನ್ನು ಹಿಡಿದಿರುವನು. ಭಕ್ತರಾದ ನಾವು ಬಾಣಚಿಹ್ನೆಗಳನ್ನು ಧರಿಸಿರುವೆವು. ಅವನ ಭಕ್ತಿಯಿಂದ ಲೋಕದಲ್ಲಿ ಕಾಮಸುಖಗಳೆಲ್ಲವೂ ಲಭಿಸುವವು; ಕಾಮಗಳು ಪೂರ್ಣವಾದವೆಂದರೆ ಅದೇ ಮುಕ್ತಿಯು'' ಎಂದರು. ಆಗ ಆಚಾರ್ಯರು ''ಕೇಳಿರಿ; ನಿಮ್ಮ ಮಾತುಗಳೇನೋ ರಮಣೀಯವಾಗಿವೆ. ಆದರೆ ಪ್ರಮಾಣವಿಲ್ಲದ್ದಾಗಿವೆ. ವೇದಶಾಸ್ತ್ರಗಳು ಪರಸ್ತ್ರೀಯರ ಸಂಗವನ್ನೂ ಸ್ತ್ರೀ ಸಂಗಿಗಳ ಸಂಗವನ್ನೂ ತ್ಯಜಿಸಬೇಕೆಂದೇ ಬೋಧಿಸುತ್ತಿವೆ. ಮತ್ತು ಈ ಅನಂಗನು ವಿಷ್ಣುಪುತ್ರನಾಗಿದ್ದರೂ ಮೋಕ್ಷಪ್ರದನು ಅಲ್ಲ. ಈ ಪ್ರದ್ಯುಮ್ನನೆಂಬ ಮನ್ಮಥನು ನೇರಾಗಿ ಕರ್ತೃವೂ ಅಲ್ಲ. ಈತನು ಸಾಧಕರನ್ನು ಪ್ರಪಂಚದ ಕಡೆಗೆ ಸೆಳೆಯಬಲ್ಲನೇ ಹೊರತು ಮೋಕ್ಷದ ಕಡೆಗೆ ಸೆಳೆಯಲಾರನು. ಕಾಮನು ಜ್ಞಾನಿಗಳಿಗೆ ನಿತ್ಯವೈರಿಯೆಂದೇ ಪರಿಗಣಿಸಲ್ಪಟ್ಟಿರುವನು. ಕಾಮನು ಉಂಟುಮಾಡುವ ಸುಖವು ಕ್ಷಣಿಕವೂ ದುಃಖಸಂಮಿಶ್ರವೂ ಆಗಿರುವದು. ನಿತ್ಯಸುಖವನ್ನು ಕೊಡಲು ಈತನು ಸಮರ್ಥನಲ್ಲ. ಆದ್ದರಿಂದ ಇವನ ತಂದೆಯಾದ ನಾರಾಯಣನೇ ಉಪಾಸ್ಯನು. ಅವನೇ ಮುಕ್ತಿಪ್ರದನು. ಅವನನ್ನೇ ಭೋಗಮೋಕ್ಷಗಳೆರಡನ್ನೂ ಬಯಸುವವರು ಆರಾಧಿಸಬೇಕು.'' ಎಂದು ತಿಳಿಸಿದರು. ಆಗ ಮನ್ಮಥಭಕ್ತರು ಶಾಂತರಾಗಿ ಆಚಾರ್ಯರ ಮತವನ್ನೇ ಅವಲಂಬಿಸಿದರು.

## ಕುಬೇರೋಪಾಸಕರೊಡನೆ ಸಂವಾದ :

ಅನಂತರ ಆಚಾರ್ಯರು ಶಿಷ್ಯ ಸಮೇತರಾಗಿ ಉತ್ತರದಿಕ್ಕಿಗೆ ಹೊರಟವರಾಗಿ ಮಾಗಧಪುರ- ಎಂಬ ಊರಿಗೆ ಬಂದರು. ಅಲ್ಲಿದ್ದ (೧೭) ಕುಬೇರಮತವಾದಿಗಳು ಹೀಗೆಂದರು : ''ಯತಿವರ್ಯರೆ, ನಾವು ಕುಬೇರನ ಭಕ್ತರು; ನವನಿಧಿಗಳ ಚಿಹ್ನೆಗಳುಳ್ಳ ಪದಕಗಳನ್ನು ಧರಿಸಿದ್ದೇವೆ. ಕುಬೇರನು ನವನಿಧಿಗಳೊಡೆಯನು. ಆದ್ದರಿಂದಲೇ ಅವನ ಭಕ್ತರಿಗೆ ದಾರಿದ್ರ್ಯವಿರುವದಿಲ್ಲ. ಹೀಗೆ ಧನವಂತರಾದ ನಮಗೆ ಆನಂದವು ತಾನಾಗಿಯೇ ದೊರಕಲಿದೆ. ಅದೇ ಬ್ರಹ್ಮವು. ಇನ್ನು ಕರ್ಮಾನುಷ್ಠಾನವನ್ನು ಕೈಗೊಳ್ಳಬೇಕಾದರೂ ಧನವು ಬೇಕೇ ಬೇಕು. ಕರ್ಮದ ಮೂಲಕವೇ ಮುಂದೆ ಮುಕ್ತಿಯಾಗಲಿದೆ. ಇನ್ನು ಬ್ರಹ್ಮಾದಿದೇವತೆಗಳಿಗೂ ಧನವನ್ನು ಕೊಡುವವನೇ ಕುಬೇರನು. ಆದ್ದರಿಂದ ಅವನೇ ಲೋಕಸ್ವಾಮಿಯು. ಎಲ್ಲರೂ ತಮ್ಮ ಇಷ್ಟಸಿದ್ಧಿಗಾಗಿ ಧನವಿರುವವನನ್ನೇ ಸೇವಿಸಬೇಕು. ಅವನ ಸೇವೆಯನ್ನು ಮಾಡಿಕೊಂಡಿರುವ

ಯಕ್ಷಿಣಿಯೊಬ್ಬಳಿರುವಳು. ಆಕೆಯ ಉಪಾಸನೆಯಿಂದಲೂ ಮಹದೈಶ್ವರ್ಯ ಲಾಭ ವಾಗಲಿದೆ. ಯಾರು ಇಂಥ ಕುಬೇರೋಪಾಸನೆಯನ್ನು ಮಾಡದೆ ಮುಕ್ತಿಯನ್ನು ಬಯಸುವರೋ ಅಂಥವರು ಮಂದಭಾಗ್ಯರೇ ಸರಿ ; ನಮ್ಮ ಮತವು ಹೀಗಿದೆ ''- ಎಂದು ನುಡಿದರು. ಆಗ ಆಚಾರ್ಯರು'' ಸರಿ, ನಿಮ್ಮ ಮತವು ಗೊತ್ತಾಯಿತು. ಆದರೆ ಅದು ಪ್ರಮಾಣಹೀನವಾದದ್ದಾಗಿದೆ. ಕುಬೇರನು ಧನಕ್ಕೆ ಯಜಮಾನನಾಗಲಿ ; ಧನದಿಂದೇನೂ ಯಾವನೂ ತೃಪ್ತಿಯನ್ನು ಮಾತ್ರ ಹೊಂದಿರುವದಿಲ್ಲ. ಧನವುಳ್ಳವನಿಗೆ ಲೋಭವು ಬೆನ್ನಂಟಿರುವದು. ಅಂಥವನಿಗೆ ಧರ್ಮಬುದ್ಧಿಯೂ ಬರಲಾರದು. ಇನ್ನು ಮೋಕ್ಷದ ಸುದ್ಧಿಯೆಲ್ಲಿ ಬಂದೀತು? ಮುಮುಕ್ಷುಗಳು- ಯಾವ ಧನವು ಕೈ ಸೇರಿದ ಮೇಲೆ ಮತ್ತೆ ಬಿಟ್ಟು ಹೋಗುವದಿಲ್ಲವೋ ಅಂಥ ಧನವನ್ನೇ ಸೇವಿಸಬೇಕು. ಅನಾತ್ಮವಾದ ಧನವು ನಿಧನಕ್ಕೇ ಹೇತುವು. ಅದು ಅರ್ಥವೆನಿಸಿದ್ದರೂ ಅನರ್ಥವನ್ನೇ ಉಂಟುಮಾಡುತ್ತದೆ. ಧನವಂತರಿಗೆ ಮಕ್ಕಳಿಂದಲೂ ಭಯವು ತಪ್ಪಿದ್ದಲ್ಲ. ಧನಾರ್ಥಿ ಯಾದವನು ಕೂಡ ಕುಬೇರನನ್ನು ಭಜಿಸಬಾರದು. ಏಕೆಂದರೆ ಪ್ರತಿ ಯೊಬ್ಬನಿಗೂ ಧನಪ್ರಾಪ್ತಿಯು ಹಿಂದಿನ ಜನ್ಮದ ಪುಣ್ಯದಿಂದಲೇ ಆಗಲಿದೆ. ಬ್ರಹ್ಮನು ಹಿರಣ್ಯಗರ್ಭನೆನಿಸಿರುವದೂ ವಿಷ್ಣುವು ಲಕ್ಷ್ಮೀಪತಿಯೆನಿಸಿರವದೂ ನಿಜವಾದರೂ ಧನದಿಂದೇನೂ ಅವರುಗಳು ದೊಡ್ಡವರಾಗಿಲ್ಲ. ಅವರುಗಳು ಆತ್ಮ ಧನದಿಂದ ಧನವಂತರೆನಿಸಿದ್ದಾರೆ. ನೀವು ಈ ವಿಚಾರಗಳನ್ನು ಮನನಮಾಡಿ ಚಿಹ್ನಧಾರಣಾದಿ ಗಳನ್ನು ಬಿಟ್ಟು ಸದಾಚಾರನಿಷ್ಠರಾಗಿ ಪಂಚಾಯತನಪೂಜಾಪರರಾಗಿ ಶ್ರೇಯೋ ಭಾಗಿಗಳಾಗಿರಿ'' ಎಂದು ಉಪದೇಶಿಸಿದರು. ಆಗ ಅವರುಗಳೆಲ್ಲರೂ ಆಚಾರ್ಯರ ಶಿಷ್ಯರಾದರು.

## ಇಂದ್ರಭಕ್ತರೊಡನೆ ಸಂವಾದ :

ಅನಂತರ (೧೮) ಇಂದ್ರಭಕ್ತರು ಆಚಾರ್ಯರನ್ನು ಬಳಿಸಾರಿ ಹೀಗೆಂದರು: ''ಯತಿವರ್ಯರೆ, ಇಂದ್ರನು ದೇವತೆಗಳೊಡೆಯನು. ಬ್ರಹ್ಮಾದಿಶಬ್ದಗಳಿಂದ ವೇದದಲ್ಲಿ ಸ್ತುತಿಸಲ್ಪಟ್ಟಿರುವವನು ಇವನೇ. ಈತನು ಸರ್ವೇಶ್ವರನು. ಎಲ್ಲರಿಗೂ ಐಶ್ವರ್ಯವನ್ನು ಕೊಡುವವನು. ಈತನ ಮನೆಯಲ್ಲಿ ಪರಮೈಶ್ವರ್ಯವು ತುಂಬಿ ತುಳುಕಾಡುತ್ತಿರುವದು. ದೇವತೆಗಳೆಲ್ಲರೂ ಇವನನ್ನೇ ಸೇವಿಸುವರು. ಇವನು ಸರ್ವಾತ್ಮನು ; ನಿರ್ಲಿಪ್ತನು. ಹಾದಿತಪ್ಪಿದ ಯತಿಗಳನ್ನೆಲ್ಲ ಶಿಕ್ಷಿಸಿದನು. ಆದ್ದರಿಂದ ಇವನ ಉಪಾಸನೆಯು ಮುಕ್ತಿಪ್ರದವೆನಿಸಿರುವದು. ವೇದಗಳಲ್ಲಿ ಇವನ ಮಹಿಮೆ ಯನ್ನು ನಿರತಿಶಯವಾಗಿ ಕೊಂಡಾಡಿರುವರು. ಇಂಥ ಇಂದ್ರನಿಗಿಂತ ಹೆಚ್ಚಿನ ದೇವತೆಯು ಯಾವನಿದ್ದಾನು ?'' ಎಂದರು. ಆಗ ಆಚಾರ್ಯರು ''ಸರಿಯೆ; ಆದರೆ ವೇದಗಳಲ್ಲಿ ಇಂದ್ರಶಬ್ದದಿಂದ ಕೊಂಡಾಡಿರುವದು ಪರಬ್ರಹ್ಮವನ್ನೇ ಹೊರತು ವಜ್ರಧಾರಿ ಇಂದ್ರನನ್ನಲ್ಲ. ಏಕೆಂದರೆ ಬ್ರಹ್ಮವು ಸರ್ವಜ್ಞವೂ ಸರ್ವಶಕ್ತವೂ ಆದ ಜಗತ್ಕಾರಣವು. ಸೃಷ್ಟಿಯನ್ನೆಲ್ಲ ಮಾಡಿ ಎಲ್ಲಾ ವಸ್ತುಗಳನ್ನೂ ಅದು

ಒಳಹೊಕ್ಕಿರುವದು. ''ಇವನೇ ಬ್ರಹ್ಮನು, ಇವನೇ ಇಂದ್ರನು, ಇವನೇ ಪ್ರಜಾಪತಿಯು'' ಎಂದು ವೇದಗಳು ಹೊಗಳುತ್ತಿರುವವು. ಲೋಕಪಾಲಕರ ಲ್ಲೊಬ್ಬನಾದ ಇಂದ್ರನು ಸ್ವತಂತ್ರನು ಹೇಗಾದಾನು ? ಅವನು ಬ್ರಹ್ಮದ ಆಳ್ವಿಕೆಗೆ ಒಳಪಟ್ಟೇ ತನ್ನ ಕೆಲಸಗಳನ್ನು ನಿರ್ವಹಿಸುತ್ತಿರುವನು. ಆದ್ದರಿಂದ ಅವನೇನೂ ಸರ್ವದಾತೃವಲ್ಲ. ಬ್ರಹ್ಮವೇ ಎಲ್ಲರಿಗೂ ಎಲ್ಲವನ್ನೂ ಕೊಡುತ್ತದೆ. ಇನ್ನು ಚತುರ್ಮುಖಬ್ರಹ್ಮನ ಹದಿನಾಲ್ಕನೆಯ ಒಂದಂಶದಷ್ಟು ಕಾಲ ಮಾತ್ರವೇ ಅಧಿಕಾರದಲ್ಲಿರುವ ಇಂದ್ರನು ಪರಮೇಶ್ವರನು ಹೇಗಾದಾನು ? ಎಲ್ಲವೂ ಲಯವಾಗಲು ಬ್ರಹ್ಮವೊಂದೇ ಉಳಿದುಕೊಳ್ಳುವದು. ನೀವು ಈ ಬ್ರಹ್ಮವನ್ನು ಸರ್ವಶಕ್ತವೆಂದೂ ಸರ್ವವ್ಯಾಪಕವೆಂದೂ ಅರಿಯಬೇಕು. ಇದು ತಾನೊಂದೇ ಅದ್ವಿತೀಯವಾಗಿರುತ್ತದೆ. ಆತ್ಮನಾಗಿ ಇದನ್ನರಿಯುವದರಿಂದಲೇ ಮುಕ್ತಿಯು ದೊರಕುವದು' ಎಂದರು. ಆಗ ಇಂದ್ರವಾದಿಗಳು ಪರಾಜಿತರಾಗಿ ಆಚಾರ್ಯರ ಸಿದ್ಧಾಂತಾವಲಂಬಿಗಳಾದರು.

## ಯಮಪೂಜಕರೊಡನೆ ಸಂವಾದ :

ಸಂಚಾರಕ್ರಮದಿಂದ ಆಚಾರ್ಯರು 'ಯಮಪ್ರಸ್ಥ' ಎಂಬ ಪಟ್ಟಣಕ್ಕೆ ಬಂದರು. ಅಲ್ಲಿದ್ದ (೧೯) ಯಮಬ್ರಹ್ಮವಾದಿಗಳು ಹೀಗೆಂದರು : ''ಪೂಜ್ಯರೆ, ನಾವು ಯಮಭಕ್ತರು. ಲಯಕ್ಕೆ ಯಮನೇ ಕಾರಣ. ಆದ್ದರಿಂದ ನಾವು ಯಮನನ್ನು ಬ್ರಹ್ಮವೆಂದು ಚಿಂತಿಸುವೆವು. ಸೃಷ್ಟ್ಯಾದಿಗಳನ್ನೂ ಇವನೇ ರೂಪಾಂತರಗಳಿಂದ ಮಾಡುವನು. ವೇದದಲ್ಲಿ 'ಯಮಾಯ ಸೋಮಂ ಸುನುತ ಯಮಾಯ ಜುಹುತಾ ಹವಿಃ (ಯಮನಿಗಾಗಿ ಸೋಮರಸವನ್ನು ಹಿಂಡಿರಿ ; ಯಮನಿಗಾಗಿ ಹವಿಸ್ಸನ್ನು ಹೋಮ ಮಾಡಿರಿ) ಎಂದು ಯಮನನ್ನೇ ಯಜ್ಞಪತಿಯೆಂದೂ, ಯಜ್ಞಭೋಕ್ತೃ ವೆಂದೂ ಹೊಗಳಿದೆ. ಆತನಿಗೆ ಎರಡು ರೂಪಗಳಿವೆ. ಶುಕ್ಲ -ಕೃಷ್ಣ ಎಂಬ ಭೇದವುಳ್ಳ ಇವುಗಳಲ್ಲಿ ಶುಕ್ಲಮೂರ್ತಿಯು ಪರಬ್ರಹ್ಮವೆನಿಸಿರುವದು. ಅದರಿಂದ ಮಹತ್ತತ್ತ್ವಾದಿ ಗಳು ಹುಟ್ಟಲಾಗಿ ಮುಂದೆ ರುದ್ರನೂ ಬ್ರಹ್ಮಾದಿಗಳೂ ಆವಿರ್ಭೂತರಾದರು. ಇನ್ನೊಂದು ಮೂರ್ತಿಯಾದ ಕೃಷ್ಣರೂಪದಿಂದ ವಿಷ್ಣುವು ಹೊರಬಂದನು. ಅನಂತರ ಅಷ್ಟದಿಕ್ಪಾಲಕರು ಅವನಿಂದ ಹುಟ್ಟಿದರು. ಹೀಗೆ ಕೃಷ್ಣಶರೀರನಾದ ಯಮನು ಮುಂದೆ ಲೋಕಪಾಲನೆಗಾಗಿ ದಕ್ಷಿಣದಿಕ್ಕನ್ನು ಆಶ್ರಯಿಸಿ ಮಹಿಷಾರೂಢನಾಗಿ ನೆಲೆಸಿದನು. ಇಂದ್ರಾದಿದೇವತೆಗಳೆಲ್ಲರಲ್ಲಿಯೂ ಈ ಯಮನೇ ತನ್ನ ಅಂಶದಿಂದಿದ್ದು ಕೊಂಡಿರುವನು. ಇಂಥ ದೇವತೆಯನ್ನು ನಾವು ಚಿಂತಿಸುವೆವು. ಇದರಿಂದ ನಮ್ಮ ಅಜ್ಞಾನವು ನಾಶವಾಗುವದು. ಅದು ಹೋಗಲಾಗಿ 'ಯಮನೇ ಎಲ್ಲವೂ' ಎಂಬ ಜ್ಞಾನವುಂಟಾಗಲಿದೆ. ಶುಕ್ಲಯಮನನ್ನು ಪಡೆಯುವ ರೂಪದ ಮುಕ್ತಿಯು ಈ ಜ್ಞಾನದಿಂದ ಲಭಿಸುವದು. ನೀವುಗಳೂ ಮುಕ್ತಿಯನ್ನು ಬಯಸುವಿರಾದ್ದರಿಂದ ಯಮನ ಉಪಾಸನೆಯನ್ನೇಕೆ ಕೈಗೊಳ್ಳಬಾರದು ?'' ಎಂದರು.

ಆಗ ಆಚಾರ್ಯರು ಹೀಗೆಂದರು : ''ಯಮಬ್ರಹ್ಮೋಪಾಸಕರೆ, ಕೇಳಿರಿ ; ನೀವು ಹೇಳುತ್ತಿರುವ ವಾದವು ಶ್ರುತಿಪ್ರಮಾಣಸಿದ್ಧವಾಗಿಲ್ಲ ; ಕಠೋಪನಿಷತ್ತಿನಲ್ಲಿ ಯಮನ ವಿಚಾರವಾಗಿ ಹೀಗೆ ಹೇಳಿದೆ; ನಚಿಕೇತನೆಂಬ ಬಾಲಕನಿಗೆ ಯಮನು ಕೊಟ್ಟಿದ್ದ ಮೂರನೆಯ ವರಕ್ಕೆ ಉತ್ತರವಾಗಿ ಬ್ರಹ್ಮವಿದ್ಯೆಯನ್ನು ಉಪದೇಶಿಸುವಾಗ ಯಮನೇ ಹೀಗೆಂದಿರುವನು ; ಅಯ್ಯ ನಚಿಕೇತನೆ, ಕೇಳು. ಓಂ ಎಂಬುದೇ ಬ್ರಹ್ಮವು. ಅದು ಎಲ್ಲಾ ಶರೀರದಲ್ಲಿಯೂ ಇದ್ದುಕೊಂಡಿದ್ದರೂ ಅಶರೀರವಾಗಿರುವದು. ನಿತ್ಯವಾಗಿರುವದು. ಅದನ್ನರಿತವನು ಶೋಕಿಸುವದಿಲ್ಲ. ಆ ಬ್ರಹ್ಮಕ್ಕೆ ಮೃತ್ಯುವು ಉಪ್ಪಿನಕಾಯಿಯಾಗಿರುವನು' ಎಂದು ಹೇಳಿದ್ದಾನೆ. ವ್ಯಾವಹಾರಿಕವಾಗಿ ಯಮನೇ ಬ್ರಹ್ಮನಾಗಿದ್ದರೆ ಅವನು ತನಗೆ ತಾನೇ ಉಪ್ಪಿನಕಾಯಿಯಾಗಬಲ್ಲನೆ ? ತಾನೇ ತನಗೆ ಭಕ್ಷ್ಯವಾಗಬಲ್ಲನೆ ? ಆದ್ದರಿಂದ ಯಮನಿಗಿಂತಲೂ ಬ್ರಹ್ಮವು ದೊಡ್ಡದು. ಅದು ಸನಾತನವೂ ಪುರಾಣವೂ ಆಗಿರುವದು. ಅದೇ ವಿಷ್ಣು, ಬ್ರಹ್ಮ, ರುದ್ರಾದಿಶಬ್ದಗಳಿಂದ ಹೊಗಳಲ್ಪಟ್ಟಿರುವದು. ಇನ್ನು ಪುರಾಣಗಳಲ್ಲಿಯೂ ಹೀಗೆ ಹೇಳಿದೆ : ಶಿವನು ಯಮನನ್ನು ಹೊಡೆದೋಡಿಸಿ ಮಾರ್ಕಂಡೇಯನೆಂಬ ಭಕ್ತನನ್ನು ಯಮಪಾಶದಿಂದ ಬಿಡಿಸಿದನೆಂದು ಹೇಳಿದೆ. ಸುಂದರನೆಂಬೊಬ್ಬ ಪಾಪಿಯು ತನ್ನ ಹಣವನ್ನು ಕಾಯುವದಕ್ಕಾಗಿ ರಾತ್ರೆಯೆಲ್ಲ ಎಚ್ಚರವಾಗಿದ್ದನು. ಒಂದು ದಿನ ಶಿವರಾತ್ರಿಯಿದ್ದುದರಿಂದ ಅವನ ಜಾಗರಣೆಗೆ ಫಲವನ್ನು ನೀಡಿದ ಶಿವನು ಮುಂದೆ ಅವನು ಮರಣಕಾಲದಲ್ಲಿ ತನ್ನ ದೂತರನ್ನು ಕಳುಹಿಸಿ ಯಮದೂತರನ್ನು ಹೊಡೆದೋಡಿಸಿ ಅವನಿಗೆ ಮುಕ್ತಿಯನ್ನು ಕರುಣಿಸಿದನೆಂದು ತಿಳಿಸಿದೆ. - ಅಜಾಮಿಳನೆಂಬ ಭಕ್ತನನ್ನೂ ನಾರಾಯಣರೂಪಿಯಾದ ಬ್ರಹ್ಮವು ಯಮಪಾಶದಿಂದ ಬಿಡುಗಡೆ ಮಾಡಿಸಿ ಉದ್ಧಾರಮಾಡಿದ್ದು ಉಲ್ಲೇಖವಿದೆ. ಆದ್ದರಿಂದ ಲೋಕಪಾಲಕನಾದ ಯಮನು ಸರ್ವೇಶ್ವರನೆನಿಸಲಾರನು. ಇನ್ನು ನೀವು ಬಾಹ್ಯವಾದ ಮಹಿಷಾದಿ ಚಿಹ್ನೆಗಳನ್ನು ತ್ಯಜಿಸಿದವರಾಗಿ ಮೃತ್ಯುವಿಗೂ ಮೃತ್ಯುವೆನಿಸಿರುವ ಬ್ರಹ್ಮವನ್ನು ಅರಿತು ಉದ್ಧಾರವಾಗಿರಿ'' ಎಂದು ಉಪದೇಶಿಸಿದರು. ಆಗ ಅವರುಗಳೆಲ್ಲರೂ ಆಚಾರ್ಯರ ಅನುಯಾಯಿಗಳಾದರು.

## ವರುಣ - ವಾಯು - ಭೂಮ್ಯುಪಾಸಕರೊಡನೆ ಸಂವಾದ :

ಆಚಾರ್ಯರು ಮುಂದೆ ಪ್ರಯಾಣಮಾಡಿ ಗಂಗಾಯಮುನಾನದಿಗಳ ಸಂಗಮಸ್ಥಳವಾದ ಪ್ರಯಾಗಕ್ಷೇತ್ರಕ್ಕೆ ಬಂದರು. ಅಲ್ಲಿ ಪ್ರತಿವಾದಿಗಳು ಹೀಗೆಂದರು; ''ಪೂಜ್ಯರೆ (೨೦) ನಾವು ವರುಣಪೂಜಕರು ; ದೇವಾಧಿದೇವನಾದ ವರುಣನೇ ಸರ್ವೋತ್ತಮನೆಂದೂ ಅವನೇ ಮುಕ್ತಿಪ್ರದನಾದ್ದರಿಂದ ಉಪಾಸ್ಯನೆಂದೂ ನಾವು ನಂಬಿರುತ್ತೇವೆ''ಎಂದು ನುಡಿದರು (೨೧) ಮತ್ತೆ ಕೆಲವರು ''ಸ್ವಾಮಿ, ನಾವು ವಾಯುದೇವೋಪಾಸಕರು. ಪ್ರಾಣವೇ ಜೀವನಾಧಾರವು ; ಆದ್ದರಿಂದ ನಾವು ಪ್ರಾಣೋಪಾಸನೆಯಿಂದ ಮುಕ್ತಿಯನ್ನು ಪಡೆಯುವೆವು - '' ಎಂದರು. (೨೨) ಇನ್ನು

ಕೆಲವರು, 'ಯತಿಗಳೆ, ನಾವು ಭೂದೇವಿಯ ಉಪಾಸಕರು ; ಆಕೆಯು ಸರ್ವಾಶ್ರಯಳು, ಅವಳನ್ನೇ ನಾವು ಬ್ರಹ್ಮವೆಂದು ಚಿಂತಿಸುವೆವು' ಎಂದರು. (೨೩) ಮತ್ತೂ ಕೆಲವರು ''ನಾವು ತೀರ್ಥಬ್ರಹ್ಮೋಪಾಸಕರು, ಜಲರೂಪವಾದ ತೀರ್ಥವು ಎಲ್ಲರ ಜೀವನವೆನಿಸಿರುವದು ; ನೀರೇ ಸಮಸ್ತದೇವತೆಗಳು ಎಂದು ವೇದವೂ ಹೊಗಳಿದೆ. ಇದೇ ಬ್ರಹ್ಮವೆಂದು ನಾವು ಚಿಂತಿಸುವೆವು'' ಎಂದರು. ಇವರೆಲ್ಲರನ್ನೂ ಕುರಿತು ಆಚಾರ್ಯರು ಹೀಗೆಂದರು : ''ನೀವು ಮಾಡುತ್ತಿರುವ ಉಪಾಸನೆಗಳೆಲ್ಲವೂ ಆಯಾ ದೃಷ್ಟಿಯಿಂದ ಸರಿ ; ಆದರೆ ಯಾವ ಯಾವದನ್ನು ದೊಡ್ಡದೆಂದೂ ಅದು ಎಲ್ಲವೂ ಎಂದೂ ಹೊಗಳಿದೆಯೋ ಅದು ಸ್ತುತಿಮಾತ್ರವಾಗಿದ್ದು ಸಾಪೇಕ್ಷವೆನಿಸಿದೆ ; ಬ್ರಹ್ಮವು ಸಾತಿಶಯವಲ್ಲ, ನಿರತಿಶಯವಾದದ್ದು. ಅಂಥ ನಿರತಿಶಯವಾದ ವಸ್ತುವೇ ಈಶ್ವರನೆನಿಸುವದು. ಅದರ ಜ್ಞಾನವೇ ಮುಕ್ತಿಗೆ ಸಾಧನವು. ಅಂಥ ಬ್ರಹ್ಮವನ್ನರಿತು ಶ್ರೇಯೋವಂತರಾಗಿರಿ'' ಎಂದು ತಿಳಿಸಿದರು. ಆಗ ಅವರೆಲ್ಲರೂ ಆಚಾರ್ಯರ ಶಿಷ್ಯರಾದರು.

## ಶೂನ್ಯವಾದಿಗಳೊಡನೆ ಸಂವಾದ :

ಅನಂತರ (೨೪) ಶೂನ್ಯವಾದಿಗಳು ಆಚಾರ್ಯರನ್ನು ಸಂಧಿಸಿದರು. ಅವರ ನಾಯಕನು ಹೀಗೆಂದನು : ''ಪೂಜ್ಯರೆ, ನಮ್ಮ ಮತವು ಹೀಗಿದೆ :ನಾನು ಈಗ ಒಂದು ಆಶ್ಚರ್ಯವನ್ನು ಹಾದಿಯಲ್ಲಿ ಕಂಡೆನು ; ಏನೆಂದರೆ ಬಿಸಿಲುಗುದುರೆಯ ನೀರಿನಲ್ಲಿ ಸ್ನಾನಮಾಡಿ ಆಕಾಶಕುಸುಮಗಳನ್ನು ಮುಡಿದು ಮೊಲದ ಕೊಂಬಿನ ಬಿಲ್ಲನ್ನು ಹಿಡಿದಿದ್ದ ಬಂಜೆಯ ಮಗನೊಬ್ಬನು ಬರುತ್ತಿದ್ದನು. ಅವನನ್ನು ಕಂಡು ದೇವತೆಯೆಂದೇ ಭಾವಿಸಿ ನಮಸ್ಕರಿಸಿ ನಿಮ್ಮ ಬಳಿ ಬಂದೆನು. ಹೀಗಿದೆ ! ನಿಮ್ಮ ಮಿಥ್ಯಾವಾದ ಎನ್ನಬಹುದಲ್ಲವೆ?'' ಆಗ ಆಚಾರ್ಯರು ' ನಮ್ಮ ವಾದವು ಹಾಗಿರಲಿ; ನಿನ್ನ ಹೆಸರೇನು ?' ಎಂದರು. ಆಗ ಅವನು 'ನಿರಾಲಂಬನ - ಎಂದು ನನ್ನ ಹೆಸರು. ಕ್ಲೃಪ್ತ - ಎಂಬುದು ನಮ್ಮ ತಂದೆಯ ಹೆಸರು'' ಎಂದುಬಿಟ್ಟನು. ಕೂಡಲೆ ಆಚಾರ್ಯರು '' ಇದು ಹೇಗೆ ಸರಿ ? ನಿನ್ನ ಮತವು ಶೂನ್ಯವಾದರೆ ನೀನೂ ಶೂನ್ಯನಾದರೆ ನಿನ್ನ ಅಪ್ಪನೆಲ್ಲಿ ಬಂದನು ? ಹೀಗೆ ಸುಳ್ಳು ನುಡಿದದ್ದರಿಂದಲೇ ನಿನ್ನ ಮತವು ಅಪ್ರಮಾಣವೆನಿಸಿತು. ಬ್ರಹ್ಮವು ಎಂದಿಗೂ ಶೂನ್ಯವಲ್ಲ. ನಾವು ಬ್ರಹ್ಮವಾದಿಗಳೇ ಹೊರತು ಮಿಥ್ಯಾ ವಾದಿಗಳಲ್ಲ. ಬಂಜೆಯ ಮಗನನ್ನು ನಿಮ್ಮ ಮತಕ್ಕೇ ಸೇರಿಸಿಕೊಳ್ಳಿರಿ. ನಾವು ಬ್ರಹ್ಮವೆಂದೂ, ಆಕಾಶವೆಂದೂ ಪರತತ್ತ್ವವನ್ನು ಪ್ರತಿಪಾದಿಸುತ್ತೇವೆ. ಆಕಾಶವೆಂದರೆ ಅಮೂರ್ತದ್ರವ್ಯವೇ ಹೊರತು ಶೂನ್ಯವಲ್ಲ; ಆಕಾಶಕ್ಕೂ ಆಧಾರವಾದುದೇ ಬ್ರಹ್ಮವು. ಕೆಲವು ವೇಳೆ ಶ್ರುತಿಗಳಲ್ಲಿ ಬ್ರಹ್ಮವನ್ನು ಆಕಾಶಶಬ್ದದಿಂದಲೂ ಕರೆದಿರುವದುಂಟು. ಆಗ ಬ್ರಹ್ಮವೇ ನಿರತಿಶಯವೆಂದಭಿಪ್ರಾಯ. ಇಂಥ ಸತ್ತತ್ತ್ವವನ್ನರಿಯದೆ ಬ್ರಹ್ಮವಾದವನ್ನು ಮಿಥ್ಯಾವಾದವೆಂದು ದೂರಿದರೆ ಅದು ಪ್ರತಿಪಕ್ಷಿಯ ಅಜ್ಞಾನವನ್ನೇ

ತೋರಿಸುತ್ತದೆ. ನೀವುಗಳು ಈಗಲಾದರೂ ಶೂನ್ಯವಾದವನ್ನು ಕೈಬಿಟ್ಟು ಬ್ರಹ್ಮವಾದವನ್ನು ಅವಲಂಬಿಸಿರಿ'' ಎಂದರು. ಆಗ ಶೂನ್ಯವಾದಿಗಳೆಲ್ಲರೂ ತಣ್ಣಗಾದರು.

## ವರಾಹಮತದವರೊಡನೆ ಸಂವಾದ :

ಮತ್ತೊಬ್ಬ ವಾದಿಯು (೨೫) ಆಚಾರ್ಯರನ್ನು ಭೇಟಿಮಾಡಿ ಇಂತೆಂದನು : ''ಪೂಜ್ಯರೆ, ಆದಿವರಾಹಮೂರ್ತಿಯ ಉಪಾಸಕನು ನಾನು. ಪ್ರಲಯಕಾಲದಲ್ಲಿ ನೀರಿನಲ್ಲಿ ಮುಳಿಗಿದ್ದ ಭೂಮಿಯನ್ನು ಈ ವರಾಹಮೂರ್ತಿಯು ಎತ್ತಿ ಉದ್ಧರಿಸಿದನು. ಈತನ ಕೋರೆದಾಡೆಯ ಗುರುತನ್ನು ನಾನು ಧರಿಸಿದ್ದೇನೆ. ನೀವು ಕೂಡ ಈ ಚಿಹ್ನೆಯಿಂದಲಂಕೃತರಾಗಿ ವರಾಹಮತವನ್ನೇಕೆ ಸೇರಬಾರದು ?''ಎಂದನು; ಆಗ ಆಚಾರ್ಯರು - ''ಹಾಗಲ್ಲ ; ವರಾಹಮೂರ್ತಿಯು ಭೂಮಿಯನ್ನು ಉದ್ಧಾರಮಾಡಿದ್ದು ದೊಡ್ಡ ಮಹಿಮೆಯೇ ಸರಿ ; ನಾವು ಒಪ್ಪುತ್ತೇವೆ. ಆದರೆ ಚಿಹ್ನೆಧಾರಣೆಯು ಮಾತ್ರ ಅವೈದಿಕವಾಗಿದೆ. ವೇದೋಕ್ತಕರ್ಮಗಳಿಂದಲೇ ಆ ಯಜ್ಞವರಾಹಮೂರ್ತಿಯನ್ನು ಆರಾಧಿಸಬಹುದು. ಆತನ ದೇಹವೆಲ್ಲವೂ ಯಜ್ಞಮಯವು. ವರಾಹ ಎಂಬ ಶಬ್ದಕ್ಕೆ ಶ್ರೇಷ್ಠವಾದ ತೇಜಸ್ಸು -ಎಂದೂ ಅಭಿಪ್ರಾಯವಾಗುವದು. ತೇಜಸ್ಸನ್ನು ಧ್ಯಾನಿಸುವದೆಂದರೆ ಗಾಯತ್ರೀ ಉಪಾಸನೆಯೇ ಆದೀತು. ಹೀಗೆ ವೈದಿಕವಾದ ಮತವನ್ನು ಬಿಟ್ಟು ಚಿಹ್ನಧಾರಣಾದಿಗಳಿಂದ ದೇಹವನ್ನು ಪ್ರದರ್ಶಿಸಿಕೊಂಡು ಕರ್ಮಭ್ರಷ್ಟರಾಗಿ ಸಂಚರಿಸುವದು ಸರಿಯಲ್ಲ. ಈ ದುರ್ಬುದ್ಧಿಯನ್ನು ಬಿಟ್ಟು ಸದಾಚಾರಸಂಪನ್ನರಾಗಿ ನಡೆಯುತ್ತ ಭಕ್ತಿಯನ್ನವಲಂಬಿಸಿ ಕಡೆಯಲ್ಲಿ ಮುಕ್ತಿಯನ್ನು ಪಡೆಯಿರಿ'' - ಎನ್ನಲು ಆತನು ಆಚಾರ್ಯರಿಗೆ ವಂದಿಸಿ ಹಿಂದಿರುಗಿದನು.

## ಜನತಾಜನಾರ್ದನ -ಮತದವರೊಡನೆ ಸಂವಾದ :

ಲೋಕಸೇವಕರೆಂಬ (೨೬) ಕೆಲವರು ಬಂದು ಆಚಾರ್ಯರನ್ನು ಕಂಡು ಹೀಗೆಂದರು : ''ಪೂಜ್ಯರೆ, ನಾವು ಜನಸೇವಕರು. ಕಲಿಯುಗದಲ್ಲಿ ಪ್ರಜೆಗಳೇ ದೇವರು ; ಪ್ರಜಾಸಂಘವೇ ಪೂಜ್ಯವು. ಜನರ ಸೇವೆಯಲ್ಲಿ ತತ್ಪರನಾಗುವವನಿಗೆ ಕರ್ಮಬಂಧವಿಲ್ಲ. ಇಂಥವನು ಕ್ರಮವಾಗಿ ಸಿದ್ಧಿಯನ್ನು ಹೊಂದುವನು. ಮಾತನಾಡದ ಹಾಗೂ ಬೇಕು-ಬೇಡವೆನ್ನದ ಕಲ್ಲಿನ ದೇವರನ್ನು ಪೂಜಿಸುವದಕ್ಕಿಂತ ದೀನರಾದ, ಆರ್ತರಾದ, ಅಜ್ಞರಾದ ಜನರ ಸೇವೆಯನ್ನು ಮಾಡಿ ಉದ್ಧಾರ ಮಾಡಿದರೆ ಸಮಾಜಪುರುಷನು ಪ್ರಸನ್ನನಾಗುವನು. ಕಡೆಯಲ್ಲಿ ವಿರಾಟ್ ಪದವಿಯು ಸಿಗುವದು ಇದಕ್ಕಿಂತ ಹೆಚ್ಚಿನದೇನಿದೆ ?'' ಎಂದರು. ಆಗ ಆಚಾರ್ಯರು ''ಸರಿ ; ಜನತೆಯಲ್ಲಿ ಮಾತ್ರವಲ್ಲ ; ಸರ್ವಭೂತಗಳಲ್ಲಿಯೂ ತನ್ನ ಆತ್ಮವನ್ನೇ ಕಾಣುವವನೇ ಮುಕ್ತನು. ಇಂಥವನಿಗೆ ತನ್ನವರು, ಬೇರೊಬ್ಬರೆಂಬ ಭೇದಗಳಿಲ್ಲ; ಆಸೆ ಆಕಾಂಕ್ಷೆಗಳಿರುವದಿಲ್ಲ. ಆದರೆ ಈ ಭಾವನೆಯು ತತ್ತ್ವದರ್ಶಿಯಲ್ಲದವನಿಗೆ ಎಂದಿಗೂ ಬರಲಾರದು.

ತತ್ತ್ವದರ್ಶನವಾದರೂ, ವೇದಾಂತಜ್ಞಾನಲಭ್ಯವಾಗಿದೆ. ಅದಕ್ಕಾಗಿ ಸಾಧಕನು ಸ್ವಾರ್ಥತ್ಯಾಗ, ಸಂನ್ಯಾಸಗಳನ್ನು ಮಾಡಬೇಕಾಗುವದು. ತನ್ನ ಧರ್ಮ, ಕುಲಾಚಾರಗಳನ್ನು ಬಿಟ್ಟು ಅಭಕ್ಷ್ಯಭಕ್ಷಣಾದಿಗಳಿಂದಲೂ ಸ್ವೇಚ್ಛಾಚಾರದಿಂದಲೂ ನಡೆಯುತ್ತಾ ವರ್ಣಾಶ್ರಮಗಳ ಕಟ್ಟುಪಾಡನ್ನು ಕಿತ್ತು ಹಾಕಿ ತಿರುಗುತ್ತಿದ್ದರೆ ಸ್ವಾರ್ಥವಾಗಲಿ ಪರಾರ್ಥವಾಗಲಿ ದಕ್ಕುವದಿಲ್ಲ. ಪ್ರತಿಯೊಬ್ಬನೂ 'ತನ್ನಂತೆ ಮತ್ತೊಬ್ಬನು' - ಎಂಬ ಜ್ಞಾನವನ್ನು ಪಡೆಯಬೇಕಾದರೆ ಮೊದಲು ಕಾಯಕ ಮಾಡಬೇಕು. ಸಂಸಾರ ವ್ಯಾಮೋಹವಿರಬಾರದು. ಅದು ಭಗವಂತನಿಗೆ ಅರ್ಪಿತವಾಗ ಬೇಕು. ತಾನು ಸರಳಜೀವಿಯಾಗಬೇಕು. ಅನಂತರ ಪ್ರಜಾಸೇವೆಯನ್ನು ಕೈಗೊಂಡಲ್ಲಿ ಸಿದ್ಧಿಯಾದೀತು. ನೀವು ಇಂಥ ಸಿದ್ಧಿಯನ್ನು ಪಡೆದಿದ್ದೀರಾ ''ಎಂದು ಕೇಳಲು ಅವರೆಲ್ಲ ನಾಚಿಕೊಂಡು ಹಿಂದಿರುಗಿದರು.

## ಗುಣವಾದಿಗಳೊಜನೆ ಸಂವಾದ :

ಮತ್ತೆ ಕೆಲವರು (೨೭) ಹೀಗೆಂದರು : ''ಪೂಜ್ಯರೆ, ನಮಗೆ ಸ್ಮೃತಿಗಳೇ ಪ್ರಮಾಣವು. ಜಗತ್ತಿಗೆ ಉಪಾದಾನವಾದ ಪ್ರಧಾನವು ತ್ರಿಗುಣಾತ್ಮಕವಾಗಿದೆ. ಗುಣಸಾಮ್ಯವೇ ಪ್ರಲಯವು. ವೈಷಮ್ಯವೇ ಸೃಷ್ಟಿಯು. ಅಂತೂ ಮೂಲ ಪ್ರಕೃತಿಯನ್ನು ಉಪಾಸನೆಗೈದು ಪ್ರಕತಿಲಯವನ್ನು ಪಡೆಯುವದೇ ಮುಕ್ತಿಯು'' ಎಂದರು. ಆಗ ಆಚಾರ್ಯರು ''ಹಾಗಲ್ಲ ; ಸ್ಮೃತಿಪ್ರಮಾಣವನ್ನು ಒಪ್ಪುವಾಗ ಶ್ರುತ್ಯನುಸಾರಿಯಾದ ಸ್ಮೃತಿಗಳನ್ನೇ ಸ್ವೀಕರಿಸಬೇಕು. ಮನ್ವಾದಿಸ್ಮೃತಿಗಳು ಶ್ರುತ್ಯನುಸಾರಿಯಾಗಿವೆ. ನಿಮ್ಮ ಸ್ಮೃತಿಗಳಾದರೂ '' ಆ ಸ್ಮೃತಿಗಳಿಗೆ ವಿರುದ್ಧವಾಗಿವೆ. ಆದ್ದರಿಂದ ಪ್ರಧಾನವು ಜಗತ್ ಕಾರಣವಲ್ಲ. ಜಗತ್‌ಕಾರಣವನ್ನು ಚೇತನವೆಂದೇ ಶ್ರುತಿಗಳಲ್ಲಿ ಹೇಳಿರುವದರಿಂದ - ಪ್ರಧಾನವು ಅಚೇತನವಾದ್ದರಿಂದ ಅದು ಕಾರಣವಾಗಲಾರದು. ಶ್ರುತಿಯಲ್ಲಿ ಪ್ರಧಾನವನ್ನು ಕಾರಣವೆಂದು ಹೆಸರಿಸಿಲ್ಲ. ''ಅಶಬ್ದಮಸ್ಪರ್ಶಮ್'' ಎಂಬ ಶ್ರುತಿಯು ಪ್ರಧಾನಪ್ರತಿಪಾದಕವಲ್ಲ ; ಏಕೆಂದರೆ ಅದು ಪ್ರಕರಣಪರಿಶೀಲನೆಯಿಂದ ಬ್ರಹ್ಮಪರವೆಂದೇ ನಿರ್ಧಾರವಾಗುತ್ತದೆ. ಆದ್ದರಿಂದ ಬ್ರಹ್ಮವು ಮಾಯೆಯಿಂದ ಜಗತ್ಕಾರಣವಾಗಿದ್ದು, ಅದೇ ನಿಮಿತ್ತವೂ ಉಪಾದಾನವೂ ಆಗಿದೆ. ಜಗತ್ತೆಲ್ಲವೂ ಬ್ರಹ್ಮದಿಂದಲೇ ಬಂದಿದೆ. ಇದೇ ಸರಿಯಾದ ಸಿದ್ಧಾಂತವು'' ಎನ್ನಲು ಆ ವಾದಿಗಳೆಲ್ಲರೂ ನಿರುತ್ತರರಾಗಿ ಹೊರಟುಹೋದರು.

## ಯೋಗಮತದವರೊಡನೆ ಸಂವಾದ :

ಇನ್ನೂ ಕೆಲವರು (೨೮) ಆಚಾರ್ಯರನ್ನು ಬಳಿಸಾರಿ ಹೀಗೆಂದರು : ''ಪೂಜ್ಯರೆ, ಯೋಗದಿಂದ ಮುಕ್ತಿಯೆಂದು ನಮ್ಮ ಮತವಿದೆ. ಏಕಾಂತವಾದ ಸ್ಥಳದಲ್ಲಿ

ಕುಳಿತು ಶರೀರವನ್ನು ನೆಟ್ಟಗೆ ಧರಿಸಿಕೊಂಡು ಇಂದ್ರಿಯಗಳನ್ನು ಬಿಗಿಹಿಡಿದು ಗುರುವಂದನೆ ಮಾಡಿ ಹೃದಯಕಮಲದ ನಡುವೆ ವಿಶೋಕವೂ ಅಚಿಂತ್ಯವೂ ಶಿವವೂ ಆದ ಆನಂದರೂಪವನ್ನು ಚಿಂತಿಸಬೇಕು. ಇದರಿಂದ ಸಾಕ್ಷಾತ್ಕಾರವಾಗುತ್ತದೆ. ಆಗಮಗಳಲ್ಲಿ ಹೇಳಿರುವ ಜಪವಿದ್ಯಾವಿಧಾನದಿಂದ ಷಟ್‌ಚಕ್ರಗಳನ್ನು ಭೇದಿಸಿ ಸಮಾಧಿಸ್ಥನಾಗುವದೇ ಪರಮಸಿದ್ಧಿಯು. ಇದೇ ಮುಕ್ತಿಯು'' ಎಂದರು. ಆಗ ಆಚಾರ್ಯರು ''ಸರಿ ; ನೀವು ಚಿಂತಿಸುವ ತತ್ತ್ವವು ನಮಗೂ ಸಮ್ಮತವೇ ; ಆದರೆ ನಿಮ್ಮ ಕ್ರಮದಲ್ಲಿ ಮಾತ್ರ ನಮಗೆ ಭಿನ್ನಾಭಿಪ್ರಾಯವಿದೆ. ವೈದಿಕಮಾರ್ಗದಂತೆ ಜೀವನು ತನ್ನ ಮೂಲಸ್ವರೂಪವಾದ ಪರಬ್ರಹ್ಮದೊಡನೆ ಐಕ್ಯವಾಗುವದನ್ನೇ ಯೋಗವೆಂದರಿಯಬೇಕು. ಸೋಽಹಂ ಎಂಬ ಮಂತ್ರವು ಇದನ್ನೇ ತಿಳಿಸುವದು. ''ಅಹಂ'' ಎಂಬಿದು ಲಯವಾಗಿ 'ಸಃ' ಎಂಬಿದೇ ಪರಮವಾಗಿ ನೆಲೆನಿಂತಾಗ ಅದೇ ಬ್ರಹ್ಮವು. ಆದರೆ ಜೀವ - ಬ್ರಹ್ಮ ಭೇದವು ಪರಮಾರ್ಥವಲ್ಲ. ಪರಮಾರ್ಥವೆಂದಾದರೆ ಭೇದವೇ ಸತ್ಯವೆಂದಾದೀತು. ಭೇದವಿದ್ದಂತೆ ಕಂಡಾಗ ಮಾತ್ರವೇ ಯೋಗಪ್ರಸಕ್ತಿಯು ಹುಟ್ಟುವದು. ತಿಳಿದ ನಂತರ ಅದ್ವಿತೀಯಾತ್ಮನು ತಾನೊಂದೇ ಎಂದೆಂದೂ ಆಗಿದ್ದೇನೆಂದೇ ಅನುಭವವಾಗುವದು. ಇದು ತಾನೇ ಬ್ರಹ್ಮವು - ಎಂಬ ಶಾಸ್ತ್ರಾಚಾರ್ಯೋಪದೇಶಜನಿತವಾದ ಜ್ಞಾನದಿಂದ ಮಾತ್ರವೇ ಲಭಿಸತಕ್ಕದ್ದು. ಷಟ್‌ಚಕ್ರಭೇದನದಿಂದ ಅಲ್ಲ. ಶುದ್ಧಚಿತ್ತನಾದವನಿಗೆ ಶ್ರವಣ ಮನನ ನಿದಿಧ್ಯಾಸಗಳಿಂದ ಈ ಜ್ಞಾನವು ಅನುಭವಾರೂಢವಾಗಿರುತ್ತದೆ'' ಎಂದರು.

ಆಗ ಯೋಗಮತದ ಮುಖ್ಯಸ್ಥನು ಮತ್ತೆ ಹೀಗೆಂದನು : ''ಎಲೌ ಯತಿಯೆ, ಕೇಳು. ಖೇಚರೀಮುದ್ರೆಯನ್ನರಿಯದೆ 'ನಾನು ಬ್ರಹ್ಮವು' ಎಂದು ಹೇಳುವವನ ನಾಲಿಗೆಯನ್ನು ಸೀಳಿಹಾಕಬೇಕೆಂದು ನಮ್ಮಲ್ಲಿ ಕಟ್ಟಾಜ್ಞೆಯಿದೆ. ನದೀತ್ರಯ ಸಂಯೋಗದಂತಿರುವ ಖೇಚರೀ, ಶೃಂಗಾಟಕ, ಮನೋನ್ಮನೀ ಎಂಬಿವುಗಳ ಕೂಡುವಿಕೆಯಿಂದಲೂ ಅವಸ್ಥಾತ್ರಯಜ್ಞಾನದಿಂದಲೂ ಪ್ರಪಂಚಲಯವನ್ನು ಸಾಧಿಸಿ ಹಠಯೋಗದಿಂದ ಮುಕ್ತಿಯನ್ನು ಪಡೆಯಬೇಕು ಹೀಗಿರುವಲ್ಲಿ ಬರಿಯ ಜ್ಞಾನದಿಂದೇನಾದೀತು ?'' ಎಂದನು. ಆಗ ಆಚಾರ್ಯರು ''ಅಯ್ಯಾ, ಸುಮ್ಮನೆ ಹರಟುತ್ತಿರುವೆ. ಅಷ್ಟಾಂಗಯೋಗಗಳನ್ನೂ ನಾನು ಬಲ್ಲೆನು. ಆದರೆ ಅವೆಲ್ಲವೂ ಸಿದ್ಧಿಪ್ರದಗಳಾದರೂ ಜ್ಞಾನಸಿದ್ಧಿಯನ್ನು ಮೀರಿ ನಿಲ್ಲಲಾರವು. ಮೋಕ್ಷವು ಉತ್ಪಾದ್ಯವಾಗಿದ್ದರೆ ನೀನು ಹೇಳುವಂತೆ ಮುದ್ರಾದಿಗಳಿಂದಲೂ ಇಂದ್ರಿಯ ನಿರೋಧಾದಿಗಳಿಂದಲೂ ದೊರಕಿಸಿ ಕೊಳ್ಳಬಹುದಾಗಿತ್ತು. ಅದು ಉತ್ಪಾದ್ಯವಲ್ಲ ; ಪ್ರಾಪ್ಯವಲ್ಲ. ಆದ್ದರಿಂದ ಎಷ್ಟೇ ಪ್ರಯತ್ನಗಳನ್ನು ಮಾಡಿದರೂ ಪ್ರಯತ್ನಗಳಿಂದ ದೊರಕುವ ಮುಕ್ತಿಯು ಕೃತಕವಾಗಿದ್ದು, ಅನಿತ್ಯವೇ ಆಗಿರುವದು.

ಸ್ವರೂಪಭೂತವಾದ ಮುಕ್ತಿಯಾದರೋ - ಪ್ರಯತ್ನಸಾಧ್ಯವಲ್ಲ ; ಮತ್ತೇನೆಂದರೆ ಸ್ವರೂಪಜ್ಞಾನಸಾಧ್ಯವು. ಇಂಥ ಜ್ಞಾನದಿಂದ ಅಜ್ಞಾನವು ಬಾಧಿತವಾಗಲು ಮುಕ್ತಿ ಎನಿಸುವದು. ಇದಕ್ಕಾಗಿ ದೇಹೇಂದ್ರಿಯಗಳನ್ನು ದಣಿಸುವದೇಕೆ ? ತಾನು ಬ್ರಹ್ಮವೇ - ಎಂದರಿಯಲು ಯಾವ ಕಸರತ್ತು ಮಾಡತಕ್ಕದ್ದಿದೆ ? ವಿವೇಕ, ವೈರಾಗ್ಯ, ಶಾಂತಿ, ದಾಂತ್ಯಾದಿ ಸಾಧನಗಳನ್ನು ಕೈಬಿಟ್ಟು ಲೋಕವಿರುದ್ಧವಾದ ರೀತಿಯಿಂದ ಇಂದ್ರಿಯಗಳನ್ನೂ ದೇಹಾದಿಗಳನ್ನೂ ಪಳಗಿಸುವ ವ್ಯಾಯಾಮರೂಪವಾದ ಸಾಧನದಿಂದ ಆತ್ಮಜ್ಞಾನವಾದೀತೆ ? ಇಂಥ ಸಾಧನಗಳು ಎಷ್ಟು ಶಾಸ್ತ್ರೀಯ ಗಳಾಗಿದ್ದರೂ ಮುಕ್ತಿ ಪ್ರದಗಳಂತೂ ಅಲ್ಲ. ಆದ್ದರಿಂದ ನೀವುಗಳು **ಚಿತ್ತೈಕಾಗ್ರತೆಗೆ ಅಗತ್ಯವಾದಷ್ಟು ಯೋಗಸಾಧನಗಳನ್ನು ಬಳಸಿಕೊಂಡು ಮುಂದೆ ವೇದಾಂತೋಕ್ತ ಅಂತರಂಗ - ಸಾಕ್ಷಾತ್- ಸಾಧನೆಗಳಿಂದ ಮುಕ್ತಿಯನ್ನು ಸಾಧಿಸಿರಿ'' ಎಂದರು. ಆಗ ಯೋಗಮತದವರು ಸುಮ್ಮನಾದರು.**

## ಅಣುವಾದಿಗಳೊಡನೆ ಸಂವಾದ :

ಅನಂತರ ಕೆಲವು ಅಣುವಾದಿಗಳು (೨೯) ಆಚಾರ್ಯರನ್ನು ಸಮೀಪಿಸಿ ಇಂತೆಂದರು : ''ಪೂಜ್ಯರೆ, ಜಗತ್ತಿಗೆ ಈಶ್ವರನು ನಿಮಿತ್ತಕಾರಣನು ; ಪರಮಾಣುಗಳು ಉಪಾದಾನಕಾರಣಗಳು ; ಅಣುಗಳನ್ನು ಕೂಡಿಸುವದು, ವಿಭಜಿಸುವದು ಈಶ್ವರನ ಕೆಲಸ. ಇದರಿಂದ ಸೃಷ್ಟಿ, ಲಯಗಳು ಸಂಭವಿಸುತ್ತವೆ. ಈಶ್ವರನು ಜೀವರುಗಳನ್ನೂ ಹೀಗೆಯೇ ಉಂಟುಮಾಡಿ ತಾನು ಆಳುತ್ತಾನೆ. ಆ ಈಶ್ವರನು ಯಾರಿಗೂ ಗೋಚರನಲ್ಲ. ಅನುಮೇಯನು ಮಾತ್ರವೇ ; ಷೋಡಶ ಪದಾರ್ಥಜ್ಞಾನದಿಂದಲೇ ಮುಕ್ತಿ'' ಎಂದರು. ಆಗ ಆಚಾರ್ಯರು '' ಇದು ಸರಿಯಲ್ಲ. ಶ್ರುತಿಪ್ರೋಕ್ತವಾದ ಈಶ್ವರಸೃಷ್ಟಿಯ ರಹಸ್ಯವನ್ನು ತಿಳಿಯಿರಿ. ಭಗವಂತನು ತಾನೇ ಜಗತ್ತಾಗಿ ತೋರಿ ಎಲ್ಲ ಪದಾರ್ಥಗಳಲ್ಲಿಯೂ ಪ್ರವೇಶಿಸಿರುತ್ತಾನೆ. ಈ ಸೃಷ್ಟಿಯೇನೂ ಅವನಿಗೆ ಬಂಧವುಂಟುಮಾಡುವದಿಲ್ಲ. ಮಾಯಾವಿಯ ಮಾಯೆಯು ನೋಡುವವರಿಗೆ ಮಾತ್ರವೇ ಹೇಗೆ ಭ್ರಾಂತಿಯನ್ನುಂಟುಮಾಡುತ್ತದೆಯೋ ಮಾಯಾವಿಯು ಹೇಗೆ ಅದರಿಂದ ಬೇರೆಯಾಗಿಯೇ ಇರುವನೋ ಹಾಗೆಯೆ ಈಶ್ವರನು ಜಗದ್ವ್ಯಾಪಾರಗಳನ್ನು ಕೈಗೊಂಡರೂ ನಿತ್ಯಶುದ್ಧಬುದ್ಧಮುಕ್ತನೇ ಆಗಿರುವನು. ಅವಿದ್ಯಾ ಮಾಯಾಚ್ಛನ್ನರಾದ ಜೀವರುಗಳು ಸಂಸಾರಿಗಳಾಗಿ ವ್ಯವಹರಿಸುವರು. ಆದರೆ ಜೀವರುಗಳು ಪರಮಾರ್ಥವಾಗಿ ಇದ್ದುಕೊಂಡಿಲ್ಲ. ಅವರೆಲ್ಲ ಪರಮೇಶ್ವರನ ಅಂಶರೇ ಆಗಿರುವರು. ಹಾಗೆ ತಿಳಿದಾಗ ಜೀವೇಶ್ವರಭೇದವೂ ಇಲ್ಲವಾಗುವದು. ಹೀಗೆ ಪರಮಾರ್ಥವಲ್ಲದ ಸೃಷ್ಟಿಗೆ ಪರಮಾಣುಗಳ ಅಗತ್ಯವೇನಿದೆ ?'' ಎಂದರು. ಆಗ ಅವರೆಲ್ಲರೂ ಆಚಾರ್ಯರನ್ನು ಹೊಗಳಿ ಅವರಿಗೆ ಶಿಷ್ಯರಾದರು.

## ಕರ್ಮವಾದಿಗಳೊಡನೆ ಸಂವಾದ :

ಅನಂತರ ಕೆಲವರು ಕರ್ಮವಾದಿಗಳು (೩೦) ಆಚಾರ್ಯರನ್ನು ಬಳಿಸಾರಿ ಹೀಗೆಂದರು : ''ಪೂಜ್ಯರೆ, ಕರ್ಮವೇ ಜಗನ್ನಿಯಾಮಕವು. ತ್ರಿಮೂರ್ತಿಗಳೂ ಕರ್ಮಪಾಶಬದ್ಧರೇ ಆಗಿರುವರು. ಒಳ್ಳೆಯ ಕರ್ಮದಿಂದ ಪುಣ್ಯಫಲವೂ, ಕೆಟ್ಟ ಕರ್ಮದಿಂದ ಪಾಪಫಲವೂ ಆಗಲಿದೆ. ಹುಟ್ಟಿದವನು ಯಾವನೂ ಕ್ಷಣಮಾತ್ರವೂ ಕರ್ಮರಹಿತನಾಗಿರುವಂತಿಲ್ಲ. ನಿದ್ರೆಮಾಡುವಾಗಲೂ ಉಸಿರಾಡುತ್ತಲೇ ಇರುವನು. ಹೀಗೆ ಕರ್ಮಚಕ್ರಪ್ರವರ್ತನದಿಂದ ಜಗದ್ವ್ಯಾಪಾರವು ಸಾಗುತ್ತಿದೆ. ಜನಕಾದಿ ಮಹಾತ್ಮರುಗಳು ಕೂಡ ಕರ್ಮದಿಂದಲೇ ಸಿದ್ಧಿಯನ್ನು ಹೊಂದಿದರೆಂದು ಭಗವದ್ವಚನವಿದೆ. ಸತ್ಕರ್ಮದ ಫಲವಾಗಿ ದೊರಕುವ ಸುಖವೇ ಮುಕ್ತಿಯೆನಿಸುವದು. ತಾವೇಕೆ ಕರ್ಮತ್ಯಾಗಮಾಡಿರುವಿರಿ?''ಎಂದರು . ಆಗ ಆಚಾರ್ಯರು ಹೀಗೆಂದರು : ''ಕರ್ಮಠರೆ, ಕೇಳಿರಿ. ಕರ್ಮವು ಜಡವೆಂಬುದು ನಿಮಗೇಕೆ ತಿಳಿದಿಲ್ಲ ? ಅದು ಎಂದಾದರೂ ಫಲವನ್ನು ಕೊಟ್ಟೀತೆ ? ಕರ್ಮವನ್ನು ಮಾಡಿದವನಿಗೆ ಕಾಲಾಂತರದಲ್ಲಿ ಸಂಭವಿಸುವ ಫಲಕ್ಕೆ ಸಂಯೋಗವನ್ನುಂಟು ಮಾಡುವ ಚೇತನನಾದ ಈಶ್ವರನಿಲ್ಲದೆ ಹೇಗಾದೀತು ? ಈ ಈಶ್ವರನೇ ಪರಬ್ರಹ್ಮವು. ಅವನ ಆಜ್ಞೆಯಂತೆಯೇ ವಾಯು, ಸೂರ್ಯ, ಅಗ್ನ್ಯಾದಿಗಳು ತಮ್ಮ ತಮ್ಮ ಕರ್ಮಗಳಲ್ಲಿ ತೊಡಗಿರುವರು. ಕರ್ಮವು ಪುರುಷಾರ್ಥಸಾಧನವೆಂಬುದು ನಮಗೂ ಇಷ್ಟವೇ. ಸತ್ಕರ್ಮಗಳ ಅನುಷ್ಠಾನದಿಂದಲೇ ಸ್ವಾಭಾವಿಕವಾದ ಮೃತ್ಯುರೂಪವಾದ ಕರ್ಮಗಳನ್ನು ದಾಟಬೇಕಾಗಿದೆ. ಆದರೇನು ? ಅವಿದ್ಯಾವಸ್ಥೆಯಲ್ಲಿ ತಾನು ಕರ್ತೃಭೋಕ್ತೃವೆಂದು ಭಾವಿಸಿಕೊಂಡಿರುವ ಜೀವನು ತನ್ನ ಕರ್ಮಫಲಗಳ ಚೌಕಟ್ಟಿನಲ್ಲಿ ಪಡೆಯಬಹುದಾದ ಸುಖವು ನಿತ್ಯವಲ್ಲ. ಆದ್ದರಿಂದಲೇ ಅದು ಮುಕ್ತಿಯೆನಿಸುವದಿಲ್ಲ. ಪರಮ ಪುರುಷಾರ್ಥರೂಪವಾದ ಮುಕ್ತಿಯು ಜ್ಞಾನದಿಂದ ಪ್ರಾಪ್ಯವೇ ಹೊರತು - ಕರ್ಮದಿಂದಲ್ಲ. ತನ್ನ ಮುಕ್ತಿಗಾಗಿ ತಾನು ತನ್ನ ಆತ್ಮನನ್ನರಿಯಲು ಪ್ರಯತ್ನವನ್ನು ಮಾಡುವಾಗ ವೈದಿಕಕರ್ಮಗಳನ್ನು ಸಂನ್ಯಾಸಮಾಡಬೇಕಾಗಿ ಬಂದರೂ ಅದು ಆಶ್ಚರ್ಯವಲ್ಲ. ಆದ್ದರಿಂದ ಕರ್ಮಗೋಚರವಾದ ಸಂಸಾರಫಲಗಳಿಗಿಂತಲೂ ಮುಕ್ತಿಯು ವಿಲಕ್ಷಣವಾಗಿದೆ. ಇದು ಬ್ರಹ್ಮಜ್ಞಾನದಿಂದ ಮಾತ್ರವೇ ದೊರಕತಕ್ಕದ್ದು. ನೀವುಗಳು ನಿಮ್ಮ ಕರ್ಮಾನುಷ್ಠಾನಗಳನ್ನು ಫಲಪ್ರಾಪ್ತಿಗಾಗಿ ಮಾಡುವದನ್ನು ಕೈಬಿಟ್ಟು ಆತ್ಮಸಂಸ್ಕಾರಾರ್ಥವಾಗಿಯೂ ಈಶ್ವರಪ್ರೀತಿಗಾಗಿಯೂ ಮಾಡಿರಿ. ಮುಂದೆ ಭಗವದನುಗ್ರಹದಿಂದ ಮುಕ್ತಿಯನ್ನು ಪಡೆಯಿರಿ'' ಎಂದರು. ಆಗ ಕರ್ಮವಾದಿಗಳು ಒಪ್ಪಿಕೊಂಡು ಆಚಾರ್ಯರ ಶಿಷ್ಯರಾಗಿಬಿಟ್ಟರು.

## ಚಂದ್ರಬ್ರಹ್ಮವಾದಿಗಳೊಡನೆ ಸಂವಾದ :

ಅನಂತರ ಮತ್ತೆ ಕೆಲವರು (೩೧) ಆಚಾರ್ಯರನ್ನು ಕಂಡು ಹೀಗೆಂದರು : ''ಯತಿಗಳೆ, ನಾವು ಚಂದ್ರೋಪಾಸಕರು. ಚಂದ್ರನು ದೇವತೆಗಳಿಗೆಲ್ಲ ರಾಜನು. ಪೂರ್ಣಿಮೆಯದಿನ ಆತನ ಪೂಜೆಯಿಂದ ಇಷ್ಟಾರ್ಥಗಳು ಕೈಗೂಡುತ್ತವೆ. ಆತನ ಉಪಾಸನೆಯಿಂದ ಮುಕ್ತಿಯು ಸಿಗುವದೆಂದು ನಮ್ಮ ನಂಬಿಕೆ. ಆತನೇ ಮನಸ್ಸಿಗೆ ಅಧಿಪತಿಯು. ಉದಾತ್ತವಾದ ಮನೋಧರ್ಮಗಳು ಚಂದ್ರನ ಅನುಗ್ರಹದಿಂದ ದೊರಕುತ್ತವೆ. ಚಂದ್ರಲೋಕಪ್ರಾಪ್ತಿಯು ಪುಣ್ಯಕರ್ಮದಿಂದ ಪ್ರಾಪ್ತವಾಗುತ್ತದೆ. ಇಷ್ಟಾಪೂರ್ತಕರ್ಮಗಳಿಗೆಲ್ಲ ಒಡೆಯನು ಚಂದ್ರನು. ಲೋಕದಲ್ಲಿಯೂ ಇಂಥ ದಾನಧರ್ಮಗಳ ರೂಪವಾಗಿ ಸತ್ಕಾರ್ಯಗಳನ್ನು ಮಾಡಿದವರನ್ನು ಜನರು ಹೊಗಳುತ್ತಾರೆ. ಅವನ ಕಾಲಾನಂತರವೂ ನೆನೆಯುತ್ತಾರೆ. ಇದೇ ಕೀರ್ತಿಯು. ಹೀಗೆ ಕೀರ್ತಿಶಾಲಿಯೂ , ಪುಣ್ಯವಂತನೂ ಆಗಿ ಬಾಳುವದಕ್ಕಿಂತ ಹೆಚ್ಚಿನದೇನಿದೆ?'' ಎಂದರು. ಆಗ ಆಚಾರ್ಯರು ''ಸರಿ ; ನೀವು ಹೇಳುವದನ್ನೆಲ್ಲ ನಾನೂ ಅಂಗೀಕರಿಸಿದ್ದೇನೆ. ಧಾರ್ಮಿಕರಾಗಿ, ಬಾಳುವದು ಮನುಷ್ಯರ ಕರ್ತವ್ಯವೇ ಸರಿ. ವ್ಯವಹಾರಪ್ರಪಂಚದಲ್ಲಿ ಧರ್ಮಾನುಷ್ಠಾನ, ಅದರ ಫಲೋಪಭೋಗಗಳನ್ನು ಲಕ್ಷ್ಯವಿಟ್ಟು ಶಾಸ್ತ್ರವು ಸತ್ಕರ್ಮಿಗಳಿಗೆ ಚಂದ್ರಲೋಕಾದಿಸದ್ಗತಿಗಳನ್ನು ವರ್ಣಿಸಿ ತಿಳಿಸುತ್ತದೆ. ಆದರೆ ಚಂದ್ರನಿಗೆ ವೃದ್ಧಿಕ್ಷಯಗಳಿರುವಂತೆಯೇ ಪುಣ್ಯವಂತರಿಗೂ ಪುನರಾವೃತ್ತಿಯುಂಟು. ಚಂದ್ರನನ್ನು ದೇವತೆಗಳು ಉಪಭೋಗಿಸುವರೆಂದು ಶ್ರುತಿಯಲ್ಲಿರುವದರಿಂದ ಚಂದ್ರನು ಬ್ರಹ್ಮವಾಗಲಾರನು. ಬ್ರಹ್ಮವೆಂದರೆ ಎಲ್ಲಕ್ಕೂ ಮಿಗಿಲಾದುದು. ಅದಕ್ಕೆ ವೃದ್ಧಿಕ್ಷಯಗಳಿಲ್ಲ, ಅದು ಶಾಶ್ವತವಾದದ್ದು. ಚಂದ್ರನೇ ಮುಂತಾದ ಸಮಸ್ತ ದೇವತೆಗಳಿಗೂ ಅದೇ ಉತ್ಪತ್ತಿಕಾರಣವು. ಆ ಪರಬ್ರಹ್ಮವನ್ನರಿತುಕೊಂಡರೆ ಧರ್ಮಕರ್ಮಗಳಿಂದ ಪಡೆಯಬಹುದಾದ ಪುಣ್ಯ ಲೋಕಗಳನ್ನೂ ಮೀರಿದ ಮೋಕ್ಷಪದವಿಯೇ ಲಭಿಸುವದು'' ಎಂದು ತಿಳಿಸಿದರು. ಆಗ ಆ ವಾದಿಗಳು ಸುಮ್ಮನಾದರು.

## ಗ್ರಹದೇವತೋಪಾಸಕರೊಡನೆ ಸಂವಾದ :

ಅನಂತರ ಅಂಗಾರಕನೇ ಮುಂತಾದ ಗ್ರಹದೇವತಾರಾಧಕರು (೩೨) ಬಂದು ಆಚಾರ್ಯರನ್ನು ಕುರಿತು ಹೀಗೆಂದರು : ''ಪೂಜ್ಯರೆ, ಗ್ರಹದೇವತೆಗಳೇ ಲೋಕಗಳನ್ನೆಲ್ಲ ಆಳುತ್ತಾರೆ. ಮಾನವರಿಗೆ ಸುಖದುಃಖಪ್ರದರಾಗುತ್ತಾರೆ. ಶುಭಾಶುಭ ಗಳನ್ನು ಸೂಚಿಸುತ್ತಾರೆ. ಕಾಲಕಾಲಕ್ಕೆ ಮನುಷ್ಯನ ಜೀವನದ ಮೇಲೆ ನೇರವಾಗಿ ಪರಿಣಾಮವನ್ನು ಬೀರುವ ಈ ದೇವತೆಗಳನ್ನೇ ಭಕ್ತಿಯಿಂದ ಆರಾಧಿಸಬೇಕು. ಇವರುಗಳು ಒಲಿದರೆ ಆಯುರಾರೋಗ್ಯ ಐಶ್ವರ್ಯಾದಿಗಳು ಲಭಿಸುವವು.

ಕ್ರೂರರಾದರೆ ಮನುಷ್ಯನಿಗೆ ಸಂಕಟಪರಂಪರೆಗಳೇ ಗತಿ. ಆದ್ದರಿಂದ ಇಹಪರ ಸುಖಪ್ರಾಪ್ತಿಯೂ ಕಡೆಯಲ್ಲಿ ಈ ದೇವತೆಗಳ ಕೃಪೆಯಿಂದಲೇ ಮುಕ್ತಿಯೂ ಸಿಗುವದರಿಂದ ಇಂಥ ಗ್ರಹದೇವತೆಗಳನ್ನು ಸಂತೋಷಗೊಳಿಸುವದಕ್ಕಿಂತ ಹೆಚ್ಚಿನದೇನಿದೆ ? ''ಎಂದರು. ಆಗ ಆಚಾರ್ಯರು ''ಸರಿ ; ನೀವು ಗ್ರಹ ದೇವತಾರಾಧನೆಯನ್ನು ಮಾಡುವದು ತಪ್ಪಲ್ಲ. ಆದರೆ ಇವರಾರೂ ಸ್ವತಂತ್ರರಲ್ಲ. ಭಗವಂತನ ಆಜ್ಞಾನುಸಾರವಾಗಿ ಆಯಾ ಅಧಿಕಾರಸ್ಥಾನಗಳ ನ್ನಲಂಕರಿಸಿ ಮಾನವರ ಕರ್ಮಾನುಗುಣವಾಗಿ ಫಲಗಳನ್ನು ಕೊಡುವ ಈ ಯಾವ ದೇವತೆಗಳೂ ಭಗವಂತನಿಗಿಂತ ದೊಡ್ಡವರಲ್ಲ. ಆ ಭಗವಂತನೊಲಿದರೆ ಇವರೆಲ್ಲರ ಅನುಗ್ರಹವಾದಂತೆಯೇ ಸರಿ. ಆದ್ದರಿಂದ ಈ ದೇವತೆಗಳ ರೂಪದಲ್ಲಿಯೂ ಭಗವಂತನೇ ತೋರಿಕೊಂಡು ಪ್ರಪಂಚದ ಆಗುಹೋಗುಗಳನ್ನು ನಿಯಂತ್ರಿಸುತ್ತಾನೆಂದು ನೀವೇಕೆ ತಿಳಿಯಬಾರದು ? ಆ ಭಗವಂತನೇ ಪರಬ್ರಹ್ಮವು. ಅವನ ಪ್ರಾಪ್ತಿಯೇ ಮೋಕ್ಷವು. ಅವನನ್ನು ಸೇರಿದವರು ಮತ್ತೆ ಸಂಸಾರಕ್ಕೆ ಮರಳುವದಿಲ್ಲ. ಹುಟ್ಟು ಸಾವುಗಳಿಗೆ ತುತ್ತಾಗುವದಿಲ್ಲ. ಆದ್ದರಿಂದ ಆ ವಾಸುದೇವಭಗವಂತನನ್ನೇ ಆತ್ಮನೆಂದೂ, ಸರ್ವಾಂತರ್ಯಾಮಿಯೆಂದೂ, ಸರ್ವಜ್ಞ ಸರ್ವಶಕ್ತನೆಂದೂ ಭಜಿಸಿರಿ. ಇದರಿಂದ ಮುಂದೆ ನೀವು ಮುಕ್ತಿಭಾಜನರಾಗುವಿರಿ '' - ಎನ್ನಲು ಆ ವಾದಿಗಳೆಲ್ಲರೂ ಸುಮ್ಮನಾದರು.

## ಪಿತೃದೇವತೋಪಾಸಕರೊಡನೆ ಸಂವಾದ :

ಅನಂತರ ಮತ್ತೆ ಕೆಲವರು (೩೩) ಆಚಾರ್ಯರನ್ನು ಬಳಿಸಾರಿ ಹೀಗೆಂದರು: ''ಪೂಜ್ಯರೆ ನಾವು ಪಿತೃದೇವತೆಗಳ ಭಕ್ತರು. ಚಂದ್ರಮಂಡಲದ ಮೇಲ್ಭಾಗದಲ್ಲಿ ವಾಸಿಸುವ ಅಗ್ನಿಷ್ವಾತ್ತಾದಿಪಿತೃಗಳು ನಿತ್ಯಮುಕ್ತರು. ಇವರಲ್ಲಿ ಕೆಲವರು ಆಕಾರ ರಹಿತರು, ಮತ್ತೆ ಕೆಲವರು ಸಾಕಾರರು. ಇವರುಗಳನ್ನು ಶ್ರಾದ್ಧಕರ್ಮಗಳಿಂದ ಆರಾಧಿಸಬೇಕು. ಇವರೇ ಜನರಿಗೆ ಭುಕ್ತಿಮುಕ್ತಿಪ್ರದರು. ಪಿತೃಭಕ್ತಿಯು ಧರ್ಮ ಗಳಲ್ಲೆಲ್ಲ ಶ್ರೇಷ್ಠವಾದುದು. ಶ್ರೀರಾಮನೂ ಪಿತೃಭಕ್ತಿಯಿಂದಲೇ ಕೀರ್ತಿಶಾಲಿ ಯಾದನು. ಆದ್ದರಿಂದ ಪಿತೃವಾಕ್ಯ ಪರಿಪಾಲನೆ, ಪಿತೃಶುಶ್ರೂಷೆ, ಪಿತೃಶ್ರಾದ್ಧಗಳು - ಈ ದೇವತೆಗಳನ್ನು ತೃಪ್ತಿಗೊಳಿಸುವ ಮೂಲಕ ಮುಕ್ತಿಪ್ರದವಾಗುವವು. ಪಿತೃಕಾರ್ಯವನ್ನು ಯಾವನೂ ಮೀರಬಾರದು. ಇದು ನಮ್ಮ ಅಭಿಪ್ರಾಯ'' ಎಂದರು. ಆಗ ಆಚಾರ್ಯರು '' ಸರಿಯೆ; ನೀವುಗಳು ಮಾಡುತ್ತಿರುವ ಶ್ರಾದ್ಧಾದಿಗಳು ತ್ಯಾಜ್ಯ ವೆಂದೇನೂ ನಾನು ಹೇಳುವದಿಲ್ಲ. ಆದರೆ ಜಗತ್ತಿಗೆಲ್ಲ ನಿಜವಾದ ತಂದೆಯೇ ಪರಮಾತ್ಮನು. ಆತನೇ ತಾಯಿಯು. ಪ್ರಾಣಿಗಳಿಗೆ ಆಯಾ ಜನ್ಮಗಳಲ್ಲಿ ಬೇರೆಬೇರೆಯ

ತಂದೆತಾಯಿಗಳಿರುತ್ತಾರೆ. ಅನಾದಿಸಂಸಾರದಲ್ಲಿ ಯಾರು ತಂದೆಯೋ, ಯಾವನು ಮಗನೋ ತಿಳಿಯಲಾಗುವದಿಲ್ಲ. ಆಯಾ ಕಾಲಕ್ಕೆ ತೋರಿ ಕಣ್ಮರೆಯಾಗುವ ತಂದೆ ತಾಯಿಗಳಿಗಿಂತಲೂ ಎಂದೆಂದೂ ಶಾಶ್ವತನಾಗಿರುವ ಪರಮಾತ್ಮನನ್ನು ತಂದೆಯೆಂದೇ ಆರಾಧಿಸಬಹುದಲ್ಲವೆ ? ಶ್ರಾದ್ಧಕರ್ಮದಲ್ಲಿಯೂ ಮತ್ತೆ ಮತ್ತೆ ನಾರಾಯಣನನ್ನೇ ನೆನೆಯುತ್ತಾರಲ್ಲವೆ ? ಗಧಾದರನೆಂಬ ವಿಷ್ಣುವೇ ಶ್ರಾದ್ಧಕ್ಕೆ ದೇವತೆಯಲ್ಲವೆ ? ಇನ್ನು ಅರ್ಯಮಾದಿ ಪಿತೃದೇವತೆಗಳು ಕೂಡ ಭಗವಂತನ ವಿಭೂತಿಗಳೆಂದೇ ಗೀತೆಯಲ್ಲಿದೆ. ಆದ್ದರಿಂದ ಕೇವಲ ಕರ್ಮದಿಂದ ಮುಕ್ತಿಯು ಲಭಿಸುವದಿಲ್ಲವಾಗಿ ಕರ್ಮಗಳನ್ನೆಲ್ಲ ಈಶ್ವರಪ್ರೀತಿಗಾಗಿ ಮಾಡುವ ಕರ್ಮಯೋಗವು ಜಾಣತನದ ಮಾರ್ಗವಾಗಿದೆ. ಇದರಿಂದ ಜ್ಞಾನನಿಷ್ಠೆಗೆ ಅರ್ಹತೆಯುಂಟಾಗಿ ಮುಂದೆ ಜ್ಞಾನದಿಂದ ಮುಕ್ತಿಯಾಗಲು ಸರ್ವದೇವತಾತ್ಮನಾದ ವಾಸುದೇವನನ್ನೇ ಸಾಧಕನು ಪಡೆಯುವನು. ಹೀಗೆ ವಿಚಾರಮಾಡಿ ಅರಿತು ಅನುಷ್ಠಾನಮಾಡಿರಿ'' ಎನ್ನಲು ಅವರೆಲ್ಲರೂ ವಿರಮಿಸಿದರು.

## ಸಿದ್ಧೋಪಾಸಕರೊಡನೆ ಸಂವಾದ :

ಅನಂತರ ಕೆಲವು ಸಿದ್ಧೋಪಾಸಕರು (೩೪) ಆಚಾರ್ಯರನ್ನು ಕುರಿತು ಹೀಗೆಂದರು : ''ಯತಿಗಳೆ, ನಾವು ಸಿದ್ಧರಿಂದ ಮಂತ್ರೋಪದೇಶಗಳನ್ನು ಪಡೆದಿರುವವರು. ಸತ್ಯನಾಥನೇ ಮುಂತಾದ ಸಿದ್ಧರು ಕೃತಾರ್ಥರೂ, ಚಿರಜೀವಿಗಳೂ ಆಗಿರುವರು. ಅವರುಗಳ ಉಪದೇಶದಂತೆ ನಾವು ಅಂಜನಾದಿ ಸಾಧನಗಳಿಂದ ಎಲ್ಲಾ ನಿಧಿನಿಕ್ಷೇಪಗಳನ್ನೂ, ಭೂತಭವಿಷ್ಯಗಳನ್ನೂ ತಿಳಿಯಬಲ್ಲೆವು . ಜನರಿಗೆ ಇಷ್ಟಪ್ರಾಪ್ತಿ, ಅನಿಷ್ಟಪರಿಹಾರಗಳನ್ನು ಮಾಡಿಕೊಡಬಲ್ಲೆವು. ಮತ್ತು ಸಿದ್ಧರ ಆಚರಣೆಗಳಿಂದ ಮುಕ್ತಿಯನ್ನೂ ಸಾಧಿಸಬಲ್ಲೆವು'' ಎಂದರು. ಆಗ ಆಚಾರ್ಯರು ''ಸರಿ ; ನಿಮ್ಮ ಸಿದ್ಧರುಗಳಿಗೆಲ್ಲ ಸಿದ್ಧನೆನಿಸಿರುವ ಭಗವಂತನು ಯಾವ ರೀತಿಯಲ್ಲೂ ಕಡಿಮೆಯವನಲ್ಲ. ಜ್ಞಾನಶಕ್ತಿಬಲೈಶ್ವರ್ಯವೀರ್ಯ ತೇಜಸ್ಸುಗಳು ನಿತ್ಯವೂ ಪರಿಪೂರ್ಣವಾಗಿರುವದರಿಂದಲೇ ಅವನು ಭಗವಂತನೆನಿಸಿರುವನು. ಅವನ ಪ್ರಸಾದದಿಂದಲೇ ಯೋಗಿಗಳಿಗೂ, ಸಿದ್ಧರಿಗೂ ಸಿದ್ಧಿಗಳು ಲಭಿಸಿವೆ. ಆದರೂ ಸರ್ವಸಿದ್ಧಿಗಳೂ ಯಾರಿಗೂ ದೊರಕಿರುವದಿಲ್ಲ. ಅಲ್ಲದೆ ಜನರಿಗೆ ಇಷ್ಟಪ್ರಾಪ್ತಿಯನ್ನೇನೋ ನೀವು ಮಂತ್ರಬಲದಿಂದ ಸಾಧಿಸಿಕೊಡಬಲ್ಲಿರಿ. ಆದರೇನು? ಮತ್ತೊಂದು ಇಷ್ಟವೋ, ಅನಿಷ್ಟವೋ ಕಾಮಿಗಳನ್ನು ಪೀಡಿಸುತ್ತಲೇ ಇರುವದು. ಹೀಗೆಯೇ ಮುಂದುವರಿದಾಗ ಶಾಂತಿಸುಖಗಳು ದೊರಕುವದು ಸಾಧ್ಯವೆ ? ಭಗವದನುಗ್ರಹದಿಂದ ಇಷ್ಟಾನಿಷ್ಟಗಳ ಕಾಟವನ್ನೇ ತಪ್ಪಿಸಿಕೊಳ್ಳುವದು ಮೇಲಲ್ಲವೆ ? ಅಲ್ಲದೆ ಆಪ್ತಕಾಮನಾದ ಭಗವಂತನ ಪ್ರಾಪ್ತಿಯಿಂದ ಮಾನವನು ಅಕಾಮನೇ ಆಗಿ ಅಮೃತನಾಗುವನಲ್ಲವೆ ? ಇಂಥಾ ಅಮೃತತ್ವಸಿದ್ಧಿಗೆ ಹೋಲಿಸಿದರೆ

ಕ್ಷುದ್ರಸಿದ್ಧಿಗಳಿಗೇನು ಬೆಲೆಯಿದ್ದೀತು ? ಕಾಮಧೇನುವನ್ನು ಆಶ್ರಯಿಸಿದವರಿಗೆ ಸೀಮೆ ಹಸುವಿನ ಗೊಡವೆಯೇಕೆ ? ಆದ್ದರಿಂದ ನೀವುಗಳು ಸರ್ವಸಿದ್ಧಿಪ್ರದನಾದ ಭಗವಂತನನ್ನಾಶ್ರಯಿಸಿ ಮುಕ್ತರಾಗಿರಿ'' ಎಂದರು. ಆಗ ಅವರುಗಳು ಸುಮ್ಮನಾದರು.

## ಗಂಧರ್ವಭಕ್ತರೊಡನೆ ಸಂವಾದ :

ಅನಂತರ ಕೆಲವು ಗಂಧರ್ವೋಪಾಸಕರು (೩೫) ಆಚಾರ್ಯರನ್ನು ಬಳಿಸಾರಿ ಹೀಗೆಂದರು : ''ಪೂಜ್ಯರೆ, ನಾವು ವಿಶ್ವಾವಸು - ಮುಂತಾದ ಗಂಧರ್ವರ ಉಪಾಸಕರು. ಆ ದೇವತೆಗಳ ಕೃಪೆಯಿಂದ ನಾದ - ಬಿಂದು - ಕಲಾವಿಜ್ಞಾನಗಳನ್ನು ಪಡೆದು ಮುಕ್ತಿಗೆ ಪ್ರಯತ್ನಿಸುತ್ತಿರುವೆವು. ಭಗವಂತನಿಗೆ ಗಾನವು ಬಹಳ ಪ್ರಿಯವಾದುದು. ಆತನು ತಾನು ಗಾನವಿಶಾರದನು. ಆದ್ದರಿಂದ ನಾವು ಜೀವನವನ್ನೆಲ್ಲ ಗಾನವಿದ್ಯೆಗೆ ಮೀಸಲಿಟ್ಟು ಉಪಾಸನೆಯನ್ನು ಮಾಡುತ್ತಿರುವೆವು. ನೀವೇಕೆ ಈ ವಿದ್ಯೆಯನ್ನು ಕಲಿಯುವದಿಲ್ಲ ? '' ಎಂದರು. ಆಗ ಗುರುಗಳು '' ಸರಿಯೆ ; ಗಾಂಧರ್ವವಿದ್ಯಾನಿಪುಣರೆನಿಸಿದ ನಾರದರು ಕೂಡ ಶೋಕಮೋಹಗಳು ಹೋಗಿಲ್ಲವೆಂದು ಪರಿತಪಿಸುತ್ತ ಸನತ್ಕುಮಾರರ ಬಳಿಗೆ ಬಂದರೆಂದು ಉಪನಿಷತ್ತಿನಲ್ಲಿ ತಿಳಿಸಿದೆ. ಹೀಗಿರುವಲ್ಲಿ ಉಳಿದವರ ಪಾಡೇನು ? ನೀವು ಯಾವಾಗಲೂ ರಾಗ - ತಾಳ - ಲಯ ಚಿಂತನೆಗಳಲ್ಲಿ ಮುಳುಗಿ ಆತ್ಮನನ್ನೇ ಮರೆತಿರುವಿರಲ್ಲವೆ ? ಯಾವ ಆತ್ಮನ ಸುಖಕ್ಕಾಗಿ ಗಾಂಧರ್ವವಿದ್ಯೆಯು ಬೇಕೋ ಅವನ ಸ್ವರೂಪವನ್ನು ವಿಚಾರಮಾಡಿದ್ದೀರಾ ? ಆ ಆತ್ಮನು ನಾದ - ಬಿಂದು - ಕಲಾತೀತನು ; ಮನೋವಾಕ್ಕುಗಳಿಗೆ ಅಗೋಚರನು. ಅವನನ್ನು ಸ್ತುತಿಸುವದು ಹೇಗಾದೀತು ? ಹಾಗೆಂದ ಮಾತ್ರಕ್ಕೆ ಗಾನವಿದ್ಯೆಯು ವ್ಯರ್ಥವೆಂದಲ್ಲ. ಅದೇ ಕೊನೆ, ಅದೇ ಪರಾಕಾಷ್ಠೆಯೆಂದು ತಿಳಿಯಬಾರದು. ಒಂದು ರೀತಿಯಲ್ಲಿ ಎಲ್ಲಾ ವಿದ್ಯೆಗಳೂ ಬ್ರಹ್ಮವಿದ್ಯೆಯ ಅಂಶಗಳೇ ಆಗಿವೆ. ಆದ್ದರಿಂದ ಅವು ಪರಿಪೂರ್ಣವಲ್ಲ. ಪರಿಪೂರ್ಣವಿದ್ಯೆಯೆಂದರೆ ಬ್ರಹ್ಮವಿದ್ಯೆಯೊಂದೇ ಸರಿ. ಆದ್ದರಿಂದ ನಿಮ್ಮ ಗಾಂಧರ್ವವಿದ್ಯೆಯನ್ನುಪಯೋಗಿಸಿಕೊಂಡು ಶಬ್ದ - ನಾದ - ಬಿಂದು - ಕಲೆಗಳೆಂಬ ಉಪಾಧಿಗಳ ಆಲಂಬನದಿಂದ ಬ್ರಹ್ಮವನ್ನು ಸಮೀಪಿಸಿ ಕಟ್ಟ ಕಡೆಗೆ ನಿಮ್ಮ ಆತ್ಮನೇ ಬ್ರಹ್ಮವೆಂಬ ಅನುಭವದಲ್ಲಿ ನೆಲೆನಿಂತು ಅಮೃತರಾಗಿರಿ. ಇದಕ್ಕಿಂತ ಗಾಂಧರ್ವವಿದ್ಯೆಗೆ ಹೆಚ್ಚಿನ ಸಾರ್ಥಕ್ಯವೇನಿದ್ದೀತು ? '' ಎಂದರು. ಆಗ ಅವರುಗಳೆಲ್ಲರೂ ಆಚಾರ್ಯರ ಸಮನ್ವಯದೃಷ್ಟಿಗೆ ತಲೆದೂಗಿ ಶಿಷ್ಯರಾದರು.

## ಆಚಾರ್ಯರು ಗೋಕರ್ಣಕ್ಷೇತ್ರಕ್ಕೆ ಪ್ರಯಾಣ ಮಾಡಿದ್ದು :

ಹೀಗೆ ಆಚಾರ್ಯರು ಸುಮಾರು ಮೂವತ್ತೈದು ಮತಗಳ ಅನುಯಾಯಿಗಳನ್ನು ತಮ್ಮ ಅದ್ಭುತವಾದ ವೇದಾಂತಜ್ಞಾನದಿಂದ ಸಮನ್ವಯಗೊಳಿಸಿ ಅವರುಗಳ ಹೃದಯವನ್ನು ಗೆದ್ದು ಅದ್ವೈತಸಿದ್ಧಾಂತಾನುಯಾಯಿ ಗಳಾಗುವಂತೆ ಪರಿವರ್ತಿಸಿದರು.

ಆದರೆ ಸಿದ್ಧಾಂತಸಮನ್ವಯವನ್ನು ಮಾತ್ರವೇ ಆಚಾರ್ಯರು ಗುರಿಯಲ್ಲಿಟ್ಟು ಕೊಂಡಿದ್ದರೇ ಹೊರತು, ಬಾಹ್ಯಾಚಾರ ವೇಷ ಭೂಷಣಗಳ ಬದಲಾವಣೆಯನ್ನಾಗಲಿ, ಯಾರನ್ನೂ ಮತಾಂತರಗೊಳಿಸುವ ಉದ್ದೇಶವನ್ನಾಗಲಿ ಹೊಂದಿರಲಿಲ್ಲ. ಆದ್ದರಿಂದಲೇ ಭಗವತ್ಪಾದರನ್ನು ನಾವು ಮತಸ್ಥಾಪಕರೆಂದು ಕರೆಯಬಾರದು. ಅವರು ವೇದಾಂತಸಿದ್ಧಾಂತಪ್ರಚಾರಕರು ಮಾತ್ರ - ಎಂದು ತಿಳಿಯಬೇಕು. ಹೀಗಿದ್ದರೂ ಆ ಮಹನೀಯರು ತಮ್ಮ ಜನ್ಮ ಭೂಮಿ, ಕುಲಧರ್ಮ, ಜಾತಿಧರ್ಮ, ವಂಶಪಾರಂಪರ್ಯವಾದ ಆಚಾರ ವಿಚಾರಗಳು, ಸಂಪ್ರದಾಯಗಳಿಗೆ ಅನುಗುಣವಾಗಿ ವಿದ್ವತ್ಸಂನ್ಯಾಸಾಶ್ರಮ ನಿಷ್ಠರಾಗಿದ್ದಾಗಲೂ ವರ್ತಿಸುತ್ತಿದ್ದರು. ಇದರಿಂದ ಉಳಿದ ಜನರಿಗೆ ಆದರ್ಶವೂ ದೊರಕಿದಂತಾಯಿತು. ಮತ್ತು ಮತಧರ್ಮಗಳಿಗೂ ಸಿದ್ಧಾಂತಕ್ಕೂ ಯಾವ ವಿರೋಧವೂ ಇಲ್ಲವೆಂಬುದು ಗೊತ್ತಾಯಿತು. ಯಾರು ಯಾವ ಮತಾಚಾರಗಳಿಗೆ ಬದ್ಧರಾಗಿದ್ದರೂ ಆತ್ಮಚಿಂತನೆ, ವಿಚಾರ ಸರಣಿಗಳಲ್ಲಿಯೂ, ನಿರ್ಣಯದಲ್ಲಿಯೂ ಅದ್ವೈತ ವಸ್ತುನಿಷ್ಠರಾಗಿರಲು ಯಾವ ಅಡ್ಡಿಯೂ ಇಲ್ಲವೆಂಬುದು ಆಚಾರ್ಯರ ಜೀವನದಿಂದ ದೃಢಪಡಿಸಲ್ಪಟ್ಟಿತು. ಇಂಥ ದಿಗ್ವಿಜಯವೇ ಶಾಶ್ವತವಾದುದು. ಇನ್ನು ಮುಂದೆ ಆಚಾರ್ಯರು ತಮ್ಮ ದಿಗ್ವಿಜಯವನ್ನು ಮುಂದುವರಿಸಿ ಕಾಂಚೀ ಕ್ಷೇತ್ರದ ಕಡೆಯಿಂದ ಪಶ್ಚಿಮಕ್ಕೆ ಸಂಚಾರ ಮಾಡುತ್ತ ಸಮುದ್ರತೀರವನ್ನು ಸಮೀಪಿಸಿ ಗೋಕರ್ಣಕ್ಷೇತ್ರಕ್ಕೆ ಬಂದರು.

## ನೀಲಕಂಠಶಿವಾಚಾರ್ಯರೊಡನೆ ಸಂವಾದ :

ಆ ಕ್ಷೇತ್ರದಲ್ಲಿ ಸುಪ್ರಸಿದ್ಧರಾಗಿದ್ದ ನೀಲಕಂಠ ಶಿವಾಚಾರ್ಯರು ಹರದತ್ತರೆಂಬವರ ಮೂಲಕ ಆಚಾರ್ಯರ ಆಗಮನವನ್ನು ತಿಳಿದುಕೊಂಡರು. ನೀಲಕಂಠರು ಶಿವಾದ್ವೈತಮತಾಚಾರ್ಯರಾಗಿದ್ದರು. ರುದ್ರಾಕ್ಷಿ, ವಿಭೂತಿಗಳನ್ನು ಧರಿಸಿ ತಮ್ಮ ಭಾಷ್ಯಗ್ರಂಥದೊಡನೆ ಆಚಾರ್ಯರನ್ನು ಸಂದರ್ಶಿಸಿ ತಮ್ಮ ಶಿವಾದ್ವೈತ ಮತವನ್ನು ಮಂಡಿಸಿದರು. ''ಲಿಂಗವೇ ಪರಾತ್ಪರವಸ್ತುವು. ಯಾವದರಲ್ಲಿ ಜಗತ್ತು ಲಯವಾಗುವದೋ ಯಾವದು ಸೃಷ್ಟಿಗೆ ಮೂಲವಾಗಿದೆಯೋ ಅದೇ ಲಿಂಗವು. ಆದಿಯಲ್ಲಿ ಆದೊಂದೇ ಇತ್ತು. ಅದು ಅವಿನಾಭಾವಸಂಬಂಧದಿಂದ ಶಕ್ತಿಯೊಡನೆ ಕೂಡಿ ಒಂದಾಗಿತ್ತು. ಆ ಶಕ್ತಿಯು ಹೂವಿನಲ್ಲಿರುವ ಸುವಾಸನೆಯಂತೆ ಇತ್ತು. ಅದೇ ಚಿಚ್ಛಕ್ತಿಯು. ಅನಂತರ ಸದಾಶಿವತತ್ತ್ವ, ಈಶ್ವರ, ಸದ್ವಿದ್ಯಾ - ಎಂಬ ತತ್ತ್ವಗಳಾಗಿ ಹೊರತೋರಿತು. ಅನಂತರ ಮಾಯೆಯಿಂದ ಶಿವಜೀವಭೇದವೂ ಮುಂದಕ್ಕೆ ಕಾಲ, ನಿಯತಿ, ರಾಗ - ಮುಂತಾದ ತತ್ತ್ವಗಳೂ ಉಂಟಾದವು. ಲಿಂಗವೊಂದೇ ಶಾಶ್ವತವು. ಜೀವಾತ್ಮರುಗಳು ಬೆಂಕಿಯ ಕಿಡಿಗಳಂತೆ ಇದರ ಅಂಶರೇ ಆಗಿದ್ದಾರೆ. ಜೀವನು ಶಿವನಾಗಲು ಭಕ್ತಿ, ಜ್ಞಾನ, ಕ್ರಿಯೆ - ಎಂಬ ಸಾಧನಗಳನ್ನು ಕೈಗೊಳ್ಳಬೇಕು. ಮೋಕ್ಷವನ್ನು ಪಡೆಯಲು ಸರ್ವರೂ ಅರ್ಹರು. ಮೋಕ್ಷಕ್ಕಾಗಿ ಜಗತ್ತನ್ನು

ತ್ಯಜಿಸಬೇಕಾಗಿಲ್ಲ. ಪವಿತ್ರವಾದ ಕಾಯಕನಿಷ್ಠ ಜೀವನವನ್ನು ನಡೆಸುತ್ತ ಸಮಾನತೆಯನ್ನೂ ಸ್ವಾತಂತ್ರ್ಯವನ್ನೂ ಸಾಧಿಸಬೇಕು'' ಎಂಬ ಸಿದ್ಧಾಂತವನ್ನು ಪ್ರತಿಪಾದಿಸಿದರು. ಆಗ ಆಚಾರ್ಯರ ಶಿಷ್ಯರಲ್ಲೊಬ್ಬರಾದ ಸುರೇಶ್ವರರು ಗುರುಗಳ ಪರವಾಗಿ ತಾವೇ ವಾದಮಾಡುವದಾಗಿ ಮುಂದೆ ಬಂದರು. ಆಗ ನೀಲಕಂಠರು '' ನೀವು ಬುದ್ಧಿವಂತರೇ ಸರಿ ; ಆದರೆ ನಿಮ್ಮ ಸಿದ್ಧಾಂತವನ್ನು ನೇರವಾಗಿ ನಿಮ್ಮ ಗುರುವೇ ಪ್ರತಿಪಾದಿಸಲಿ'' ಎಂದರು. ಆಗ ಆಚಾರ್ಯರೇ ಉತ್ತರವನ್ನು ಕೊಡಲಾರಂಭಿಸಿದರು. ನೀಲಕಂಠರು ಮತ್ತೆ ವಾದಮಾಡುತ್ತ ತಮ್ಮ ಸಿದ್ಧಾಂತಪ್ರತಿಪಾದನೆಗಿಂತಲೂ ಅದ್ವೈತ ಸಿದ್ಧಾಂತದಲ್ಲಿಯ ದೋಷಗಳನ್ನೇ ಹೇಳಲಾರಂಭಿಸಿದರು. ನಿಜವೇನೆಂದರೆ - ಅದ್ವೈತವನ್ನು ಸರಿಯಾಗಿ ಅರ್ಥಮಾಡಿಕೊಳ್ಳದ್ದರಿಂದ ಅಂಥ ದೋಷಗಳು ಅವರಿಗೆ ಕಂಡುಬಂದಿದ್ದವು. ಆಚಾರ್ಯರು ಮೆಲ್ಲನೆ ಅಂಥ ಪೂರ್ವಪಕ್ಷಗಳನ್ನೆಲ್ಲ ಯುಕ್ತಿಗಳಿಂದ ನಿರಾಕರಣೆ ಮಾಡಿದರು. ವೀರಶೈವರಿಗೆ ಆಗಮಗಳು ಪ್ರಮಾಣ ವಾಗಿರುವಂತೆಯೇ ಬ್ರಹ್ಮವಾದಕ್ಕೆ ವೇದಾಂತದ ಶ್ರುತಿವಾಕ್ಯಗಳು ಪ್ರಮಾಣ ವೆಂಬುದನ್ನು ತಿಳಿಸಿ ನಿರ್ವಿಶೇಷ - ನಿಷ್ಪ್ರಪಂಚ - ಚೈತನ್ಯೈಕರಸವಾದ - ಸಜಾತೀಯ ವಿಜಾತೀಯ ಸ್ವಗತಬೇಧರಹಿತವೂ ಪ್ರಪಂಚೋಪಶಮವೂ, ಶಾಂತವೂ, ಶಿವವೂ ಆದ ಬ್ರಹ್ಮವೊಂದೇ ಪರಮಾರ್ಥಸತ್ಯವೆಂದು ಪ್ರತಿಪಾದಿಸಿ ಅದು ಲಿಂಗವೂ ಅಲ್ಲ ; ಏಕೆಂದರೆ ಅದರಲ್ಲಿ ಏನೊಂದೂ ಧರ್ಮಗಳಿಲ್ಲ; ಜಾತಿ, ಗುಣ , ಕ್ರಿಯಾ, ದ್ರವ್ಯಾದಿಭೇದವು ದ್ವೈತದಲ್ಲಿ ಮಾತ್ರವೇ ಕಂಡುಬರುತ್ತದೆಯೇ ಹೊರತು ಎಲ್ಲವೂ ತಾನೊಂದೇ ಆದಾಗ ಯಾವನು ಏನನ್ನು ಏತರಿಂದ ಕಂಡಾನು ? ಎಂಬ ಶ್ರುತಿಯ ಅನುಭವಪೂರ್ಣವಾದ ಹೇಳಿಕೆಯಂತೆ ಅಲಿಂಗವೇ ಬ್ರಹ್ಮವು, ಅದು ಬ್ರಹ್ಮಶಬ್ದವಾಚ್ಯವೂ ಅಲ್ಲ - ಎಂದು ಸಮರ್ಥಿಸಿದರು. ನೀಲಕಂಠರಿಗೆ ಪರಮಾನಂದ ವಾಯಿತು. ವ್ಯಾವಹಾರಿಕವಾದ ಪ್ರಪಂಚದ ದೃಷ್ಟಿಯಿಂದ ನಿರ್ಮಿಸಿರುವ ಸಾಧನಸೋಪಾನಗಳೂ, ಜೀವೇಶ್ವರ ವಿಭಾಗವೂ, ಸೃಷ್ಟ್ಯಾದಿಲೀಲೆಗಳೂ ಪರತತ್ತ್ವವನ್ನು ಕಂಡುಕೊಂಡವನ ದೃಷ್ಟಿಯಿಂದ ಇಲ್ಲವೇ ಇಲ್ಲವೆಂದು ತಿಳಿದಾಗ ಆಚಾರ್ಯರನ್ನು ಅಭಿನಂದಿಸಿದರು. ಬ್ರಹ್ಮಾದ್ವೈತ - ಶಿವಾದ್ವೈತಗಳೆಂಬಿವು ಶಬ್ದಭೇದಗಳೇ ಹೊರತು ಅನುಭವವು ಒಂದೇ - ಎಂದು ಮನವರಿಕೆಯಾದ್ದರಿಂದ ಆಚಾರ್ಯರೊಡನೆ ಸ್ಪರ್ಧೆಯನ್ನು ತ್ಯಜಿಸಿದರು. ಜ್ಞಾನಿಗಳೆಲ್ಲರ ಅನುಭವವೂ ಒಂದೇ ಆಗಿರುತ್ತದೆಯಲ್ಲವೆ ?

## ಪಾಂಚರಾತ್ರರೊಡನೆ ಸಂವಾದ :

ಆಚಾರ್ಯರು ಗೋಕರ್ಣದಲ್ಲಿ ಮಹಾಬಲೇಶ್ವರನ ದರ್ಶನದಿಂದ ಸಂತುಷ್ಟರಾಗಿ ಶಿವಾಚಾರಮತದವರನ್ನೂ ಒಲಿಸಿಕೊಂಡ ಮೇಲೆ ಸಮುದ್ರ ತೀರದಲ್ಲೇ ಮುಂದುವರೆದು ಉತ್ತರಕ್ಕೆ ಪ್ರಯಾಣಮಾಡುತ್ತ ದ್ವಾರಕಾನಗರಿಯನ್ನು ತಲುಪಿದರು.

ಭಾರತದೇಶದ ಪಶ್ಚಿಮದಿಕ್ಕಿನ ಕ್ಷೇತ್ರಗಳಲ್ಲಿ ದ್ವಾರಕೆಯು ಸುಪ್ರಸಿದ್ಧವಾದುದು. ಆ ಕ್ಷೇತ್ರದಲ್ಲಿ ಪಾಂಚರಾತ್ರರೆಂಬ ಮತಾನುಯಾಯಿ ಗಳಿದ್ದರು. ಅವರು ಪಾಂಚರಾತ್ರಾಗಮಾನುಸಾರಿಗಳು. ವಿಷ್ಣುಭಕ್ತರು. ಹಣೆಯಲ್ಲಿ ನಾಮಗಳನ್ನೂ, ಶರೀರದಲ್ಲಿ ಶಂಖಚಕ್ರಾದಿಚಿಹ್ನೆಗಳನ್ನೂ ಧರಿಸಿದ್ದರು. ಇವರು ಐದು ಭೇದಗಳನ್ನು ಒಪ್ಪಿದವರು. ಹೇಗೆಂದರೆ (೧) ಜೀವೇಶ್ವರ ಭೇದ (೨) ಜೀವಜೀವ ಭೇದ (೩) ಜೀವ - ಜಡಭೇದ (೪) ಈಶ - ಜಡಭೇದ (೫) ಜಡ - ಜಡ ಭೇದ - ಹೀಗೆ ತಮ್ಮ ಸಿದ್ಧಾಂತವನ್ನು ಪಂಚಭೇದಗಳ ತಳಹದಿಯಿಂದ ಸ್ಥಾಪಿಸಿಕೊಂಡಿದ್ದರು. ಇವರುಗಳು ಒಟ್ಟಾಗಿ ಸೇರಿ ಆಚಾರ್ಯರ ಸಮ್ಮುಖದಲ್ಲಿ ತಮ್ಮ ವಾದವನ್ನು ಮುಂದಿಟ್ಟರು. ಆಚಾರ್ಯರು ಹೀಗೆಂದರು : '' ನೀವು ಬುದ್ಧಿಪ್ರಧಾನರಾಗಿ ತರ್ಕವನ್ನು ಬಳಸಿ ವಸ್ತುವನ್ನು ತಿಳಿಯಹೊರಟಿರುವದೇ ತಪ್ಪಾಗಿದೆ. ಆಗಮಪ್ರಾಮಾಣ್ಯವು ನಿಮಗೆ ಬೆಂಬಲವಾಗಿದೆಯಾದರೂ ಅದನ್ನೂ ತರ್ಕಾಧೀನವಾಗಿಯೇ ಬಳಸಿದ್ದೀರಿ. ಆದ್ದರಿಂದ ತರ್ಕವು ನೂರು ಭೇದಗಳನ್ನಾದರೂ ಪ್ರತಿಪಾದಿಸಬಲ್ಲದು. ಅದಕ್ಕೆ ಕೊನೆಯೇ ಇಲ್ಲ. ನಿಜವನ್ನರಿಯಲು ತರ್ಕವು ಎಂದಿಗೂ ಸಹಾಯಕವಲ್ಲ. ನಿಜವು ಯಾವಾಗಲೂ ಅನುಭವಗಮ್ಯವಾಗಿರುವದು. ಆದರೆ ಅನುಭವವನ್ನು ಗಟ್ಟಿಗೊಳಿಸಲು ಮಾಡುವ ತರ್ಕವು ಹಾನಿಕರವಲ್ಲ. ಇನ್ನೊಮ್ಮೆ ನೀವು ಶ್ರುತಿ ಪ್ರಮಾಣಗಳನ್ನವಲಂಬಿಸಿ ವಾಸುದೇವತತ್ತ್ವನನ್ನು ಜಿಜ್ಞಾಸೆ ಮಾಡಿರಿ. ಯಥಾ ಶ್ರುತವಾದ ಅರ್ಥವನ್ನೇ ಗ್ರಹಿಸಿ ಮನನಮಾಡಿರಿ. ಆಗ ನಿಮಗೆ ಭೇದವು ಪರಮಾರ್ಥವೊ ? ಅಭೇದವು ಪರಮಾರ್ಥವೊ ? ಎಂಬಿದು ಗೊತ್ತಾಗುವದು. ಹೇಗೆಂದರೆ ಪಂಚ ಭೇದಗಳೂ ಪ್ರಮಾಣಗಳೇ ಎಂದಾದರೆ ಯಾರಿಗೆ ಅವು ಪ್ರಮಾಣಗಳೆನಿಸುವವೋ ಅವನು ಒಬ್ಬನೊ ? ಐದೊ ? ಎಂದು ಆಲೋಚಿಸಿರಿ. ಒಬ್ಬನೇ ಎಂಬ ಅನುಭವವು ನಿರ್ದುಷ್ಟವಾದರೆ ಭೇದಗಳು ವ್ಯವಹಾರಸಿದ್ಧವೆ ಹೊರತು ಪರಮಾರ್ಥವು ತಾನೊಂದೇ - ಎಂಬುದು ನಿಜವಾಗುವದು. ವ್ಯಾವಹಾರಿಕ ಭೇದಗಳು ಪರಮಾರ್ಥಕ್ಕೆ ಯಾವ ಹಾನಿಯನ್ನೂ ಉಂಟುಮಾಡುವದಿಲ್ಲ. ಆ ಪರಮಾರ್ಥವನ್ನೇ, ಬಲ್ಲವರು ನಾರಾಯಣನೆಂದೂ, ವಾಸುದೇವನೆಂದೂ, ಬ್ರಹ್ಮನೆಂದೂ, ಈಶ್ವರನೆಂದೂ ಕರೆಯುವರು. ಅದು ಎರಡಿರುವದು ಹೇಗಾದೀತು? ಹೀಗೆ ನೀವುಗಳು ವೇದಾಂತೋಕ್ತವಾದ ಉಪದೇಶಗಳಿಂದ ತತ್ತ್ವಜ್ಞಾನವನ್ನು ಸಂಪಾದಿಸಿ ಕೃತಾರ್ಥರಾಗಿರಿ'' ಎಂದರು. ಆಗ ಪಾಂಚರಾತ್ರರು ತಣ್ಣಗಾದರು.

### ಆಚಾರ್ಯರು ಉಜ್ಜಯನಿಗೆ ಬಂದದ್ದು; ಭಾಸ್ಕರಾಚಾರ್ಯರೊಡನೆ ಸಂವಾದ :

ಭಗವತ್ಪಾದರು ದ್ವಾದಶಜ್ಯೋತಿರ್ಲಿಂಗಗಳ ಪುಣ್ಯಕ್ಷೇತ್ರಗಳಲ್ಲೊಂದಾದ

ಉಜ್ಜಯನಿಯನ್ನು ಹೊಕ್ಕು, ನರ್ಮದೆಯಲ್ಲಿ ಸ್ನಾನ ಮಾಡಿ ಮಹಾಕಾಲೇಶ್ವರನನ್ನು ದರ್ಶನಮಾಡಿದರು. ಆ ಪಟ್ಟಣದಲ್ಲಿದ್ದ ಭಾಸ್ಕರಾಚಾರ್ಯನೆಂಬ ವಿದ್ವಾಂಸನು ಆಚಾರ್ಯರೊಡನೆ ವಾದಮಾಡಲು ಸಿದ್ಧನಾದನು. ಭಟ್ಟಭಾಸ್ಕರರ ವಿಚಾರವಾಗಿ ಮುಂಚೆಯೇ ಆಚಾರ್ಯರಿಗೆ ತಿಳಿದಿದ್ದುದರಿಂದ ತಾವು ಬಂದಿರುವ ವಿಚಾರವನ್ನು ಪದ್ಮಪಾದರ ಮೂಲಕ ಹೇಳಿಕಳುಹಿಸಿದರು. ಆ ವಿದ್ವಾಂಸನು ತನ್ನ ಅನುಯಾಯಿಗಳೊಡಗೂಡಿ ಆಚಾರ್ಯರ ಸಮ್ಮುಖದಲ್ಲಿ ತನ್ನ ಮತವನ್ನು ಮಂಡಿಸಿದನು. ''ಬ್ರಹ್ಮವು ನಿರ್ಗುಣವಲ್ಲ. ಅದು ಅಪಹತಪಾಪ್ಮವೂ, ಆನಂದರೂಪವೂ, ವಿಜ್ಞಾನಘನವೂ, ಸರ್ವಜ್ಞವೂ ಆಗಿರುವದು. ಅದು ಭೋಕ್ತೃ, ಭೋಗ್ಯ ಹಾಗೂ ನಿಯಂತೃರೂಪವಾಗಿ ತಾನೇ ಪರಿಣಮಿಸುತ್ತದೆ. 'ತತ್ತ್ವಮಸಿ' ಎಂಬ ಶ್ರುತಿಯು ಜೀವಬ್ರಹ್ಮರಿಗೆ ಅಭೇದವನ್ನು ಹೇಳುವದರಿಂದ ಶ್ರುತಾರ್ಥಾಪತ್ತಿ ಪ್ರಮಾಣದಿಂದ ಜೀವೇಶ್ವರ ಭೇದವನ್ನು ಕಲ್ಪಿಸಬೇಕು. ಜೀವರೂಪವು ಔಪಾಧಿಕವು ಹಾಗೂ ಪ್ರವಾಹನಿತ್ಯವು. ಉಪಾಧಿಕೃತವಾದ ಈ ಭೇದದಿಂದ ಜೀವನಿಗೆ ಸಂಸಾರವಾಗಿದೆ. ಈ ಭೇದವನ್ನು ಅಭೇದಭಾವನೆಯಿಂದ ತೊಲಗಿಸಿಕೊಳ್ಳಬೇಕು. ಆಗ ಮುಕ್ತಿಯು ಸಿದ್ಧವಾಗುವದು'' ಎಂಬೀ ಮತವನ್ನು ಯುಕ್ತಿ ಹಾಗೂ ಪ್ರಮಾಣಗಳಿಂದ ಭಾಸ್ಕರರು ಪ್ರತಿಪಾದಿಸಿದರು. ಅನಂತರ ಬ್ರಹ್ಮಾದ್ವೈತವಾದದಲ್ಲಿ ದೋಷಗಳನ್ನು ತರ್ಕದಿಂದ ಆರೋಪಿಸಿದರು. ಆಗ ಆಚಾರ್ಯರು ಹೀಗೆಂದರು : ''ಪಂಡಿತೋತ್ತಮರೆ, ನಿಮ್ಮ ಪ್ರತಿಪಾದನೆಯೇನೋ ಚೆನ್ನಾಗಿದೆ. ''ವಸ್ತುನಿ ವಿಕಲ್ಪಾಭಾವಃ'' (ವಸ್ತುವಿನಲ್ಲಿ ಹೀಗೋ ಹಾಗೋ ಎಂಬ ಸಂಶಯವಿರಲಾರದು) ಎಂಬ ನ್ಯಾಯವನ್ನು ಸ್ವೀಕರಿಸಬೇಕು. ಬ್ರಹ್ಮವು ಔಪಾಧಿಕವಾಗಿಯೇ ಆಗಲಿ, ಸಂಸಾರಿ ಎಂದಾದರೆ ಸರ್ವಜ್ಞವು ಹೇಗಾದೀತು ? ಸರ್ವಜ್ಞವೇ ಎಂದಾದರೆ ಸಂಸಾರಿ ಹೇಗಾದೀತು ? ಮತ್ತು ಅರ್ಥಾಪತ್ತಿಪ್ರಮಾಣವು ಎಂದಿಗೂ ಬ್ರಹ್ಮವಿಷಯದಲ್ಲಿ ನಿಜವನ್ನು ತಿಳಿಸಲಾರದು. ಏಕೆಂದರೆ ಬ್ರಹ್ಮವು ಅಪ್ರಮೇಯವು. ನೀವು ಶ್ರುತಿಯನ್ನು ಒಪ್ಪಿರುವಿರಿ. ಆದರೆ ಅದಕ್ಕೆ ಯಥಾಶ್ರುತುವಾದ ಅರ್ಥವನ್ನೇಕೆ ಸ್ವೀಕರಿಸುವದಿಲ್ಲ? 'ನೀನು ಬ್ರಹ್ಮವಾಗಿರುವೆ ' - ಎಂಬ ವಾಕ್ಯವು ಬೋಧಕವಾಗಿಲ್ಲವೆ ? ಆಗಿದ್ದರೆ ಜೀವತ್ವವನ್ನು ಅನುವಾದಿಸಿ ಬ್ರಹ್ಮತ್ವವನ್ನು ಪ್ರತಿಪಾದಿಸುವ ಅವಧಾರಣಾರ್ಥವನ್ನೇಕೆ ಸ್ವೀಕರಿಸಬಾರದು ? ದ್ವೈತವು ಲೋಕ ಸಿದ್ಧವು. ಹಾಗೆಯೇ ಜೀವತ್ವಸಂಸಾರಿತ್ವಗಳೂ ಬ್ರಹ್ಮದ ಅರಿವು ಇಲ್ಲದವನಿಗೆ ಸ್ವಾಭಾವಿಕವಾಗಿ ಎಂದರೆ ಅವಿಚಾರದೆಶೆಯಲ್ಲಿ ಕಂಡುಬರುವ ಭ್ರಾಂತಿಯು. ಇಂಥ ಭ್ರಾಂತಿಜ್ಞಾನವು ಸಮ್ಯಗ್ಜ್ಞಾನದಿಂದ ಬಾಧಿತವಾದರೆ ಜೀವನ ಜೀವತ್ವವು ಇಲ್ಲವಾಗಿಯೇ ಬಿಡುವದು. ಎಲ್ಲಿ ಎಲ್ಲವೂ ಆತ್ಮನೇ ಆಗಿರುವದೋ, ಅಲ್ಲಿ ಯಾವ ದ್ವೈತವನ್ನು ಯಾರು ಕಂಡಾರು ? ಇನ್ನು ನಿರ್ಗುಣ ನಿರ್ವಿಶೇಷ - ಅದ್ವಿತೀಯ ಬ್ರಹ್ಮವು ಜಗತ್ಕಾರಣವು ಹೇಗಾದೀತು ?

ಎಂದು ನಿಮಗೆ ಸಂಶಯವಿರಬಹುದು. ಜಗತ್ತನ್ನು ನಾವು ಎಷ್ಟುಮಟ್ಟಿಗೆ ನಿಜವೆಂದು ಬೆಲೆಕಟ್ಟುವೆವೋ ಅಷ್ಟುಮಟ್ಟಿಗೆ ಜಗತ್ಕಾರಣವನ್ನು ವ್ಯಾವಹಾರಿಕದೃಷ್ಟಿಯಿಂದ ಒಪ್ಪಲೇಬೇಕು. ಇಂಥ ವ್ಯವಹಾರಸಿದ್ಧಿಗಾಗಿ ಪರಬ್ರಹ್ಮವೇ ಸರ್ವಜ್ಞವೂ, ಸರ್ವಶಕ್ತವೂ, ಜಗತ್ಕಾರಣವೂ ಆಗಿದೆ - ಎಂದು ಅಧ್ಯಾರೋಪದೃಷ್ಟಿಯಿಂದ ಶ್ರುತಿಗಳಲ್ಲಿಯೇ ಪ್ರತಿಪಾದಿಸಿದೆ. ಹೀಗೆ ವ್ಯಾವಹಾರಿಕ, ಪಾರಮಾರ್ಥಿಕ - ದೃಷ್ಟಿಭೇದಗಳನ್ನವಲಂಬಿಸಿ ಸಗುಣ - ನಿರ್ಗುಣಶ್ರುತಿಗಳ ಸಮನ್ವಯದಿಂದ ವೇದಾಂತಗಳ ಪರಮತಾತ್ಪರ್ಯವಾದ ಬ್ರಹ್ಮವನ್ನು ಜಿಜ್ಞಾಸುವು ಕಂಡುಕೊಂಡಲ್ಲಿ ಜೀವನ್ಮುಕ್ತನೇ ಆಗಿಬಿಡುವನು. ತರ್ಕದಿಂದ ಬ್ರಹ್ಮವು ಹಾಗಿದೆ, ಹೀಗಿದೆ, ಎಂದು ಕಲ್ಪಿಸುವದಕ್ಕಿಂತಲೂ ಬ್ರಹ್ಮವು ಹೇಗಿದೆಯೋ ಹಾಗೆ ಅರಿತುಕೊಳ್ಳಲು ಶ್ರುತಿಯುಕ್ತಿಗಳನ್ನು ಬಳಸಿ ಅನುಭವಪೂರ್ಣವಾಗಿ ಅರ್ಥಮಾಡಿಕೊಳ್ಳುವದೇ ಬ್ರಹ್ಮವಿದ್ಯೆಯು. ನೀವು ಹೀಗೆ ವಿಚಾರಮಾಡಿ ಪರಮಾರ್ಥವನ್ನು ತಿಳಿಯಿರಿ''. ಎಂದು ಉಪದೇಶಿಸಲಾಗಿ ಭಾಸ್ಕರಾಚಾರ್ಯರು ಆಚಾರ್ಯರ ಸರ್ವಜ್ಞತ್ವಕ್ಕೆ ತಲೆದೂಗಿದರು.

## ಆರ್ಹತಮತದವರೊಡನೆ ಸಂವಾದ :

ಅನಂತರ ಆಚಾರ್ಯರು ಉಜ್ಜಯಿನಿಯಿಂದ ಹೊರಟು ಬಾಹ್ಲಿಕದೇಶಕ್ಕೆ ಬಂದರು. ಅಲ್ಲಿ ಅರ್ಹತರೆಂಬ ಮತದವರಿದ್ದರು. ಅವರ ಮುಖ್ಯಗುರುವು ಆಚಾರ್ಯರನ್ನು ಬಳಿಸಾರಿ ಹೀಗೆಂದನು : '' ನಾವು ಸಪ್ತಪದಾರ್ಥವಾದಿಗಳು ; ಆದರೆ ಅವೆಲ್ಲವೂ ಏಳು ರೀತಿಯಿಂದ ಸಿದ್ಧವಾಗುವವು. (೧) ಇರಬಹುದು, (೨)ಇಲ್ಲದಿರಬಹುದು, (೩) ಇದ್ದೂಇರಬಹುದು, ಇಲ್ಲದೆಯೂ ಇರಬಹುದು. (೪) ಹೇಳಲು ಬಾರದ್ದಾಗಿರಬಹುದು, (೫) ಇದ್ದಿರಬಹುದು, ಹೇಳಲು ಬಾರದಿರಲೂಬಹುದು. (೬) ಇಲ್ಲದೆಯೂ ಇರಬಹುದು, ಹೇಳಲೂ ಬಾರದಿರಬಹುದು. (೭) ಇದ್ದೂ ಇರಬಹುದು, ಇಲ್ಲದೆಯೂ ಇರಬಹುದು ; ಹೇಳಲೂ ಬಾರದಿರಬಹುದು - ಹೀಗೆ ಸಪ್ತಭಂಗೀನಯದಿಂದ ವಸ್ತುಗಳನ್ನು ಸಿದ್ಧಮಾಡಬೇಕು. ಮತ್ತೊಂದು ರೀತಿಯಿಂದ ಪಂಚಾಸ್ತಿಕಾಯಗಳು ಇವೆ. (೧) ಜೀವಾಸ್ತಿಕಾಯವು ಬದ್ಧ, ಮುಕ್ತ, ನಿತ್ಯಸಿದ್ಧ - ಎಂದು ಮೂರು ವಿಧ (೨) ಪುದ್ಗಲಾಸ್ತಿಕಾಯವು ಪೃಥಿವ್ಯಾದಿ ನಾಲ್ಕು ಭೂತಗಳು, ಸ್ಥಾವರ, ಜಂಗಮ - ಎಂದು ಆರುವಿಧ (೩) ಮೂರನೆಯದೇ ಧರ್ಮಾಸ್ತಿಕಾಯವು. ಇದು ಪ್ರವೃತ್ತ್ಯನುಮೇಯ. (೪) ನಾಲ್ಕನೆಯದೇ ಅಧರ್ಮಾಸ್ತಿಕಾಯವು. ಇದು ಸ್ಥಿತ್ಯನುಮೇಯ (೫) ಐದನೆಯದು ಆಕಾಶಾಸ್ತಿಕಾಯವು. ಆಕಾಶವು ಲೋಕಾಕಾಶ, ಅಲೋಕಾಕಾಶ- ಎಂದು ಎರಡು ವಿಧ. ಒಂದರಮೇಲೊಂದು ಇರುವ ಲೋಕಗಳಿಗೆ ಇರುವದು

ಲೋಕಾಕಾಶವು. ಅವುಗಳ ಮೇಲೆ ಇರುವ ಮೋಕ್ಷಸ್ಥಾನವು ಅಲೋಕಾಕಾಶವು. ಹೀಗೆ ಜೀವಾಜೀವಗಳು ಐದು ಬಗೆ. ಆಸ್ರವ, ಸಂವರ, ನಿರ್ಜರ - ಇವು ಪ್ರವೃತ್ತಿಲಕ್ಷಣಗಳಾಗಿರುತ್ತವೆ. ಪ್ರವೃತ್ತಿಯು ಸಮ್ಯಕ್ಪ್ರವೃತ್ತಿಯೆಂದೂ ಮಿಥ್ಯಾ ಪ್ರವೃತ್ತಿಯೆಂದೂ ಎರಡು ಬಗೆ. ಬಂಧವು ಘಾತಿಕರ್ಮ ನಾಲ್ಕು, ಅಘಾತಿಕರ್ಮ ನಾಲ್ಕು - ಹೀಗೆ ಎಂಟು ಬಗೆ. ಎಲ್ಲಾ ಬಗೆಯ ಕ್ಲೇಶವೂ ಅದರ ವಾಸನೆಯೂ ಹೋಗಲು ಅನಾವರಣಜ್ಞಾನದಿಂದ ಸುಖೈಕತಾನನಾದ ಆತ್ಮನು ಮೇಲಿನ ದೇಶದಲ್ಲಿದ್ದುಕೊಂಡು ಮುಕ್ತನೆನಿಸುವನು. ಊರ್ಧ್ವಗಮನಶೀಲನಾದ ಜೀವನು ಬಂಧವನ್ನು ಕಳೆದುಕೊಂಡು ಮೇಲಕ್ಕೆ ಹೋಗುತ್ತಿರುವದೇ ಮೋಕ್ಷವು'' ಎಂದು ತಮ್ಮ ಮತವನ್ನು ಪ್ರತಿಪಾದಿಸಿದರು. ಆಗ ಆಚಾರ್ಯರು ಹೀಗೆಂದರು : ''ಅರ್ಹಂತರೆ, ನಿಮ್ಮ ಕಲ್ಪನೆಗಳೆಲ್ಲವೂ ಬೌದ್ಧಿಕಮಟ್ಟದಿಂದ ತರ್ಕಪ್ರಧಾನವಾಗಿ ಚಿಂತಿಸಿದ್ದಾಗಿದೆ. ತರ್ಕಕ್ಕೆ ಯಾವಾಗಲೂ ಪ್ರತಿತರ್ಕದ ಭಯವಿದ್ದೇ ಇದೆ. ಈ ಜಗತ್ತಿನಲ್ಲಿ ಎಲ್ಲಾ ತಾರ್ಕಿಕರನ್ನೂ ಒಂದುಗೂಡಿಸಿ ಒಮ್ಮತವಾದ ಅಭಿಪ್ರಾಯವನ್ನು ಪಡೆಯುವದಂತೂ ಸಾಧ್ಯವಿಲ್ಲ. ಏಕೆಂದರೆ ಅತೀತಾನಾಗತಕಾಲಗಳಿಗೆ ಸೇರಿದ ತಾರ್ಕಿಕರು ಹೇಗೆ ಒಂದಾಗಲು ಸಾಧ್ಯ ? ಅಲ್ಲದೆ ನಿಮ್ಮ ಸಪ್ತಭಂಗೀನಯವು ಒಂದು ದೃಷ್ಟಿಯಿಂದ ಸಾಪೇಕ್ಷವಾಗಿ ಸರಿಯೆನಿಸಬಹುದಾದರೂ ಪರಮಾರ್ಥವಾದ ಸಮ್ಯಗ್ದರ್ಶನವೊಂದಿದೆ - ಎಂಬುದನ್ನು ಎಲ್ಲರೂ ಒಪ್ಪಬೇಕಾಗುವದು. ಇಲ್ಲವಾದರೆ ನಿಮ್ಮ ಸಿದ್ಧಾಂತವೂ ನಿಲ್ಲುವದಿಲ್ಲ. ಏಕೆಂದರೆ ಒಂದು ದೃಷ್ಟಿಯಿಂದ ಅರ್ಹಮತವು ಸರಿ ; ಇನ್ನೊಂದು ದೃಷ್ಟಿಯಿಂದ ಸರಿಯಲ್ಲ - ಎಂದು ಪ್ರತಿಪಕ್ಷಿಗಳು ನಿಮ್ಮ ತರ್ಕವನ್ನೇ ನಿಮಗೆ ತಿರುಗಿಸಿದರೆ ಏನು ಮಾಡುವಿರಿ ? ಮತ್ತು ನಿಮ್ಮ ಮತಾಚಾರ್ಯರಾದ ಪೂಜ್ಯ ತೀರ್ಥಂಕರರು ಇದೆ - ಇಲ್ಲ ಎಂಬಿವುಗಳನ್ನು ಒಟ್ಟುಗೂಡಿಸಿ ಹೇಳಿದರೆ ಕೇಳಿದವರು ಗ್ರಹಿಸುವದು ಹೇಗೆ? ಅನಿರ್ಧಾರಿತವಾದ ಶಾಸ್ತ್ರವನ್ನು ರಚಿಸಿದವನು ಉನ್ಮತ್ತನಂತೆ ಅನಾದರಿಸತಕ್ಕವನಾದಾನು. ಒಂದೇ ಧರ್ಮಿಯಲ್ಲಿ ಸತ್ತ್ವಾಸತ್ತ್ವಗಳೆಂಬ ವಿರುದ್ಧಧರ್ಮಗಳು ಹೊಂದುವಂತಿಲ್ಲವಾದ್ದರಿಂದ ಈ ಮತವು ಅಸಂಗತವೆಂದಾಗುವದು. ಇನ್ನು ಸತತೋರ್ಧ್ವಗಮನದ ವಿಚಾರ. ಜೀವನು ಒಮ್ಮೆ ಮನುಷ್ಯನಾಗಿ ಹುಟ್ಟಿದನೆಂದರೆ ನಿಮ್ಮ ಮತದಂತೆ ಮತ್ತೆ ಪಶ್ವಾದಿಯೋನಿಗಳನ್ನು ಹೊಂದುವಂತಿಲ್ಲ. ಆಗ ಮನುಷ್ಯನು ಪಾಪವನ್ನು ಮಾಡಿದರೂ ದುರ್ಗತಿಯ ಭಯವಿಲ್ಲವೆಂದಾಗುವದು. ಪಾಪಿಗೆ ದುರ್ಗತಿಯು, ಪುಣ್ಯವಂತನಿಗೆ ಸದ್ಗತಿಯು - ಎಂಬ ನೀತಿ - ಧರ್ಮಶಾಸ್ತ್ರಗಳು ಬುಡವಿಲ್ಲದ್ದಾಗಿಬಿಡುವವು. ಹೀಗೆ ವಿಚಾರಮಾಡಿದರೆ ನಿಮ್ಮ ಮತದಲ್ಲಿರಬಹುದಾದ ದೋಷಗಳು ನಿಮಗೆ ಕಾಣದ್ದೆ ಇರಬಹುದು. ಈಗಲಾದರೂ ಸಮ್ಯಗ್ದರ್ಶನದ ಬೆಳಕಿನಲ್ಲಿ ವಿಚಾರಮಾಡಿ ನಿಮ್ಮ

ಮತದಲ್ಲಿರುವ ಗುಣಗಳನ್ನು ತೆಗೆದುಕೊಂಡು ವೈದಿಕಸಿದ್ಧಾಂತದೊಡನೆ ಒಂದಾಗಿ ಪರಮಪುರುಷಾರ್ಥಕ್ಕೆ ಪ್ರಯತ್ನಮಾಡಿರಿ'' ಎನ್ನಲು ಅವರುಗಳು ಹಿಂದಿರುಗಿದರು.

## ಅಭಿನವಗುಪ್ತರೊಡನೆ ಸಂವಾದ

ಹೀಗೆ ಅರ್ಹತರನ್ನು ಜಯಿಸಿದ ಅನಂತರ ಆಚಾರ್ಯರು ಭರತ, ಶೂರಸೇನ, ಕುರು, ಪಾಂಚಾಲದೇಶಗಳಲ್ಲೆಲ್ಲ ಸಂಚರಿಸಿ ತಮ್ಮ ಭಾಷ್ಯಗ್ರಂಥಗಳನ್ನು ಪ್ರಚಾರ ಮಾಡಿದರು. ಮುಂದುವರೆದು ಪೂರ್ವಾಭಿಮುಖವಾಗಿ ಹೊರಟು ಕಾಮರೂಪ ದೇಶವನ್ನು ಪ್ರವೇಶಿಸಿದರು. ಅಲ್ಲಿ ಶಾಕ್ತಭಾಷ್ಯಕಾರರಾದ ಅಭಿನವಗುಪ್ತರೆಂಬ ವಿದ್ವಾಂಸರಿದ್ದರು. ಆಚಾರ್ಯರು ಅವರೊಡನೆ ವಾದ ಮಾಡಿದರು. ಆಚಾರ್ಯರ ವಿದ್ಯಾಪ್ರೌಢಿಮೆಯನ್ನು ನುಂಗಲಾರದ ತುತ್ತಾಗಿ ಪರಿಗಣಿಸಿದ ಅಭಿನವಗುಪ್ತನು ಕೃತಕವಾದ ಮಂತ್ರಪ್ರಯೋಗಗಳಿಂದ ಇವರನ್ನು ಜಯಿಸಲು ಮನಸ್ಸಿನಲ್ಲಿ ಸಂಕಲ್ಪಿಸಿ ಬಹಿರಂಗದಲ್ಲಿ ಶಿಷ್ಯತ್ವವನ್ನು ಒಪ್ಪಿಕೊಂಡನು. ಬ್ರಹ್ಮನಿಷ್ಠರನ್ನು ಕೃತ್ರಿಮಮಾರ್ಗ ದಿಂದಲೂ ಜಯಿಸಲು ಸಾಧ್ಯವಾಗಲಾರದೆಂಬುದು ಸತ್ಯವು. ಅಭಿನವಗುಪ್ತನು ಕೈಗೊಂಡ ಮಾಂತ್ರಿಕ ವಿಧಿಯ ಪರಿಣಾಮದಿಂದ ತಾತ್ಕಾಲಿಕವಾಗಿ ಆಚಾರ್ಯರಿಗೆ ದೇಹಾಲಸ್ಯವಾಯಿತು. ಆರೋಗ್ಯವು ಕೆಟ್ಟಿತು. ಆದರೆ ಆಚಾರ್ಯರ ಪ್ರಿಯಶಿಷ್ಯರಾದ ಪದ್ಮಪಾದರು ತಮ್ಮ ಗುರುಗಳ ರೋಗಮೂಲವನ್ನು ಪತ್ತೆಮಾಡಿ ಪ್ರತಿಕ್ರಿಯೆಯನ್ನು ಹೂಡಿದರು. ಆಚಾರ್ಯರಾದರೋ, ದೇಹದ ವ್ಯಾಧಿಯ ವಿಷಯವಾಗಿ ಸ್ವಲ್ಪವೂ ಚಿಂತಿಸಲಿಲ್ಲ. ಪರಮೇಶ್ವರನ ಧ್ಯಾನದಲ್ಲಿ ನಿರತರಾದರು. ಆಗ ಆ ಭಗವಂತನ ಅಪ್ಪಣೆಯಂತೆ ಅಶ್ವಿನೀದೇವತೆಗಳು ಆಚಾರ್ಯರ ಬಳಿಗೆ ಬಂದು ಚಿಕಿತ್ಸೆ ಮಾಡಿದರು. ದೇವವೈದ್ಯರ ಚಿಕಿತ್ಸೆಯಿಂದ ಆಚಾರ್ಯರು ಆರೋಗ್ಯಶಾಲಿಗಳಾದರು. ವೈರಿಗಳು ಪರಾಭೂತರಾದರು.

## ದಿಗ್ವಿಜಯದ ಉಪಸಂಹಾರ :

ಆಚಾರ್ಯರು ಕಾಮರೂಪದಿಂದ ಹೊರಟು ವಿದೇಹ, ಕೋಸಲ, ಅಂಗ, ವಂಗ ದೇಶಗಳಲ್ಲೆಲ್ಲ ತಮ್ಮ ಭಾಷ್ಯ ಪ್ರತಿಭೆಯನ್ನು ಹರಡಿದವರಾಗಿ ಗೌಡ ದೇಶವನ್ನು ಪ್ರವೇಶಿಸಿದರು. ಅಲ್ಲಿಯ ಪಂಡಿತರಾದ ಮುರಾರಿ ಮಿಶ್ರ, ಧರ್ಮಗುಪ್ತಾದಿ ಗಳೊಡನೆಯೂ ಸಂವಾದ ಮಾಡಿದರು. ಕಡೆಗೆ ಕಾಶ್ಮೀರ ದೇಶವನ್ನು ಹೊರತು, ಉಳಿದ ಭಾರತದ ಪ್ರಾಂತ್ಯಗಳೆಲ್ಲವೂ ಆಚಾರ್ಯರ ವೇದಾಂತಸಿದ್ಧಾಂತದಿಂದ ಬೆಳಗಿತು. ಯಾವ ಪಂಡಿತರೂ ಇವರನ್ನು ಜಯಿಸಲಾಗಲಿಲ್ಲ. ಆದರೆ ಇವರು ತಾವು ಜಯಿಸಿದ ಕಡೆಗಳಲ್ಲೆಲ್ಲ ತಮ್ಮ ಸಿದ್ಧಾಂತದ ಹೆಚ್ಚುಗಾರಿಕೆಯನ್ನು ತಿಳಿಸಿದರೇ ಹೊರತು, ಯಾವ ಮತವನ್ನೂ ನಾಶಗೊಳಿಸಲಿಲ್ಲ. ಎಲ್ಲ ಮತಗಳ ಸಾರವನ್ನೂ ತಮ್ಮ ಸಿದ್ಧಾಂತದಲ್ಲಿ ಅಡಗಿಸಿದರು. ಹೇಗೆ ಶ್ರೀ ರಾಮನು ದಿಗ್ವಿಜಯ ಯಾತ್ರೆಯನ್ನು

ಕೈಗೊಂಡಾಗ ವಾಲಿಯನ್ನು ಗೆದ್ದರೂ ಕಿಷ್ಕಿಂಧಾ ರಾಜ್ಯವನ್ನು ಸುಗ್ರೀವನಿಗೆ ಕೊಟ್ಟನೋ, ಮುಂದೆ ರಾವಣನನ್ನು ಗೆದ್ದರೂ ಲಂಕಾರಾಜ್ಯವನ್ನು ವಿಭೀಷಣನಿಗೆ ಕೊಟ್ಟನೋ ಹಾಗೆ ಆಚಾರ್ಯರು ಆಗಿನ ಕಾಲಕ್ಕೆ ಭರತಖಂಡದಲ್ಲಿದ್ದ ಮತಾಚಾರ್ಯರುಗಳ ಹಾಗೂ ಪಂಡಿತರುಗಳ, ವಿದ್ವಾಂಸರ, ದಾರ್ಶನಿಕರ, ತತ್ತ್ವಚಿಂತಕರ, ದೇವತೋಪಾಸಕರ, ಎಲ್ಲರ ಹೃದಯವನ್ನೂ ಗೆದ್ದು ತಮ್ಮವರನ್ನಾಗಿ ಮಾಡಿಕೊಂಡು ಸರ್ವರಲ್ಲಿಯೂ ಸಮಭಾವದಿಂದ ವರ್ತಿಸಿದರು. ಈಗಲೂ ಶಂಕರವೇದಾಂತವು ಇಂಥ ಸರ್ವಧರ್ಮ ಸಮನ್ವಯಪೂರ್ಣವಾಗಿ ಎಲ್ಲಾ ರೀತಿಯ ಜಾತಿ, ನೀತಿ ಮತಾಚಾರಗಳು, ದೇಶ, ಕಾಲ ನಿಮಿತ್ತಗಳು - ಮುಂತಾಗಿ ಎಲ್ಲಾ ಎಲ್ಲೆಕಟ್ಟನ್ನೂ ಮೀರಿ ಜಗತ್ತಿಗೆಲ್ಲಾ ಒಬ್ಬನೇ ಸೂರ್ಯನು - ಎಂಬಂತೆ ಭೂ ಮಂಡಲಕ್ಕೆಲ್ಲ ಒಂದೇ ವೇದಾಂತ ದರ್ಶನವೆನಿಸಿ ಅಪ್ರತಿಮವಾಗಿ ವಿರಾಜ ಮಾನವಾಗಿದೆ. ಈ ದರ್ಶನವು ಅದ್ವೈತವಾದ್ದರಿಂದ ಅವಿವಾದವೂ, ಅವಿರುದ್ಧವೂ ಆಗಿದೆ. ಇಂಥ ದರ್ಶನದ್ರಷ್ಟಾರರಾದ ಶ್ರೀಶಂಕರಭಗವತ್ಪಾದರೊಬ್ಬರೇ ಜಗದ್ಗುರುಗಳು - ಎಂದರೆ ಅತಿಶಯೋಕ್ತಿಯೆನಿಸಲಾರದು.

---

# ೨. ಸರ್ವಜ್ಞಪೀಠಾರೋಹಣ, ತಿರೋಧಾನ

**ಗೌಡಪಾದರ ದರ್ಶನ :**

ಆಚಾರ್ಯರು ತಮ್ಮ ದಿಗ್ವಿಜಯಯಾತ್ರೆಯನ್ನು ಪೂರೈಸಿದವರಾಗಿ ಶಿಷ್ಯ ಪರಿವಾರದೊಡನೆ ಮತ್ತೊಮ್ಮೆ ಕಾಶಿಕ್ಷೇತ್ರಕ್ಕೆ ಬಂದರು. ವಿಶ್ವೇಶ್ವರನ ದಯೆಯಿಂದ ತಮ್ಮ ದಿಗ್ವಿಜಯ ಯಾತ್ರೆಯು ಸಫಲವಾದುದದಕ್ಕಾಗಿ ಭಗವಂತನನ್ನು ಸಂದರ್ಶಿಸಿ ನಮಿಸಿದರು. ಮತ್ತೊಮ್ಮೆ ಶಿಷ್ಯರಿಗೆ ಭಾಷ್ಯಪಾಠದ ಮುಖ್ಯವಿಷಯಗಳನ್ನು ಬೋಧಿಸಿದರು. ಕೆಲವು ದಿನಗಳವರೆಗೆ ಆ ಕ್ಷೇತ್ರದಲ್ಲೇ ನಿಂತು ಸಂಧ್ಯಾಕಾಲಗಳಲ್ಲಿ ಗಂಗಾತೀರದಲ್ಲಿ ಕುಳಿತು ಬ್ರಹ್ಮಚಿಂತನೆಯಲ್ಲಿ ತಲ್ಲೀನರಾಗುತ್ತಿದ್ದರು. ಒಂದು ದಿನ ಸಂಧ್ಯಾ ಕಾಲದಲ್ಲಿ ಗಂಗೆಯ ದಂಡೆಯಲ್ಲಿ ಬೀಸುತ್ತಿದ್ದ.ತಂಗಾಳಿಯಿಂದ ಸೇವಿತರಾಗಿ ಸಂಚರಿಸುತ್ತಾ ಇದ್ದ ಶ್ರೀ ಗೌಡಪಾದಸದ್ಗುರುಗಳನ್ನು ಕಂಡರು. ಅವರು ಶ್ರೀ ಶಂಕರಾಚಾರ್ಯರ ಪರಮಗುರುಗಳಾಗಿದ್ದರು. ಅವರು ಒಂದು ಕೈಯಲ್ಲಿ ಕಮಲ ಪುಷ್ಪದಂತೆ ವಿರಾಜಮಾನವಾದ ಕಮಂಡಲವನ್ನು ಹಿಡಿದಿದ್ದರು. ಮತ್ತೊಂದು ಕೈಯಲ್ಲಿ ರುದ್ರಾಕ್ಷಮಾಲೆಯನ್ನು ಧರಿಸಿದ್ದರು. ಆಚಾರ್ಯರು ತಮ್ಮ ಗುರುಗಳಾದ ಶ್ರೀ ಗೋವಿಂದಭಗವತ್ಪಾದರಿಗೂ ಗುರುಗಳಾದ ಶ್ರೀ ಗೌಡಪಾದಾಚಾರ್ಯರ ಪಾದಾರವಿಂದಗಳಿಗೆ ವಂದಿಸಿದರು. ಅವರು ತಮ್ಮ ಪ್ರಶಿಷ್ಯನನ್ನು ಕಂಡು ಆನಂದದಿಂದ ಕರುಣಾಕಟಾಕ್ಷವನ್ನು ಬೀರಿದರು. ಹೀಗೆ ಸಮಾಗಮವಾಗಲಾಗಿ ಶ್ರೀ ಗೌಡಪಾದರು ಹೀಗೆಂದರು :

**ಕಚ್ಚಿತ್ಸರ್ವಾಂ ವೇತ್ಸಿ ಗೋವಿಂದನಾಮ್ನೋ**
**ಹೃದ್ಯಾ ವಿದ್ಯಾ ಸಂಸೃದುದ್ಧಾರಕೃದ್ಯಾ ।**
**ಕಚ್ಚಿತ್ತತ್ತ್ವಂ ತತ್ತ್ವಮಾನಂದರೂಪಂ**
**ನಿತ್ಯಂ ಸಚ್ಚಿನ್ನಿರ್ಮಲಂ ವೇತ್ಸಿ ವೇದ್ಯಮ್** ॥೧॥

**ಭಕ್ತ್ಯಾ ಯುಕ್ತಾಃ ಸ್ವಾನುರಕ್ತಾ ವಿರಕ್ತಾಃ**
**ಶಾಂತಾ ದಾಂತಾಃ ಸಂತತಂ ಶ್ರದ್ದಧಾನಾಃ ।**
**ಕಚ್ಚಿತ್ ತತ್ತ್ವಜ್ಞಾನಕಾಮಾ ವಿನೀತಾಃ**
**ಶುಶ್ರೂಷಂತೇ ಶಿಷ್ಯವರ್ಯಾ ಗುರುಂ ತ್ವಾಮ್** ॥೨॥

**ಕಚ್ಚಿನ್ನಿತ್ಯಾಃ ಶತ್ರವೋ ನಿರ್ಜಿತಾಸ್ತೇ**
**ಕಚ್ಚಿತ್ ಪ್ರಾಪ್ತಾಃ ಸದ್ಗುಣಾಃ ಶಾಂತಿಪೂರ್ವಾಃ।**
**ಕಚ್ಚಿದ್ ಯೋಗಸ್ಸಾಧಿತೋಽಷ್ಟಾಂಗಯುಕ್ತಃ**
**ಕಚ್ಚಿಚ್ಚಿತ್ತಂ ಸಾಧು ಚಿತ್ತತ್ತ್ವಗಂ ತೇ ॥೩॥**

"ಗೋವಿಂದನೆಂಬ ನನ್ನ ಶಿಷ್ಯನಿಂದ ಬ್ರಹ್ಮವಿದ್ಯೆಯನ್ನು ಕುರಿತ ಎಲ್ಲ ವಿಷಯವನ್ನೂ ಅರಿತುಕೊಂಡೆಯಾ ? ಸಂಸಾರದಿಂದ ಮೇಲೆತ್ತಿ ಉದ್ಧಾರಮಾಡುವ ಹೃದ್ಯವಾದ ಆತ್ಮವಿದ್ಯೆಯು ಗೊತ್ತಾಯಿತೆ ? ನಿತ್ಯವೂ, ಸಚ್ಚಿದಾನಂದ ಸ್ವರೂಪವೂ, ನಿರ್ಮಲವೂ, ವೇದ್ಯವೂ ಆದ ತತ್ತ್ವವನ್ನು ಅರಿತುಕೊಂಡೆಯಷ್ಟೆ ? ಭಕ್ತಿಯುಳ್ಳವರೂ, ಅನುರಕ್ತರೂ, ವಿರಕ್ತರೂ, ಶಾಂತರೂ, ದಾಂತರೂ ಯಾವಾಗಲೂ ಶ್ರದ್ಧಾವಂತರೂ ತತ್ತ್ವಜ್ಞಾನದಲ್ಲಿ ಆಸಕ್ತಿಯುಳ್ಳವರೂ ವಿನೀತರೂ ಆದ ಶಿಷ್ಯರು ನಿನ್ನನ್ನು ಸೇವಿಸುತ್ತಿರುವರಷ್ಟೆ ? ನಿತ್ಯ ಶತ್ರುಗಳಾದ ಕಾಮಕ್ರೋಧಗಳನ್ನು ಗೆದ್ದಿರುವೆಯಷ್ಟೆ ? ಶಾಂತ್ಯಾದಿಸದ್ಗುಣಗಳು ನಿನಗೆ ಅಳವಟ್ಟಿರುವವಷ್ಟೆ ? ಅಷ್ಟಾಂಗಗಳಿಂದ ಕೂಡಿದ ಯೋಗವು ನಿನಗೆ ದಕ್ಕಿದೆಯೆ ? ನಿನ್ನ ಚಿತ್ತವು ಯಾವಾಗಲೂ ತತ್ತ್ವಚಿಂತನೆಯಲ್ಲಿ ಅನುರಕ್ತವಾಗಿದೆಯಷ್ಟೆ ?" ಹೀಗೆಂದು ಕುಶಲಪ್ರಶ್ನೆ ಮಾಡಿದರು.

ಆಗ ಆಚಾರ್ಯರು ನಮ್ರರಾಗಿ ಹೀಗೆಂದರು :

**ಯದ್ಯದ್ ಪೃಷ್ಟಂ ಸ್ಪಷ್ಟಮಾಚಾರ್ಯಪಾದೈಃ**
**ತತ್ತತ್ಸರ್ವಂ ಭೋ ಭವಿಷ್ಯತ್ಯವಶ್ಯಮ್**
**ಕಾರುಣ್ಯಾಬ್ಧೇಃ ಕಲ್ಪಯುಷ್ಮತ್ ಕಟಾಕ್ಷೈಃ**
**ದೃಷ್ಟಸ್ಯಾಹುಃ ದುರ್ಲಭಂ ಕಿಂ ನು ಜಂತೋಃ ॥ ೧ ॥**

**ಮೂಕೋ ವಾಗ್ಮೀ ಮಂದಧೀಃ ಪಂಡಿತಾಗ್ರ್ಯಃ**
**ಪಾಪಾಚಾರಃ ಪುಣ್ಯನಿಷ್ಠೇಷು ಗಣ್ಯಃ ।**
**ಕಾಮಾಸಕ್ತಃ ಕೀರ್ತಿಮಾನ್ ನಿಃಸ್ಪೃಹಾಣಾಮ್**
**ಆರ್ಯಾಪಾಂಗಾಲೋಕತಃ ಸ್ಯಾತ್ ಕ್ಷಣೇನ ॥ ೨ ॥**

"ಪೂಜ್ಯರೆ, ಅತ್ಯಂತ ಸಮರ್ಥರಾದ ಕರುಣಾಸಾಗರರಾದ ತಮ್ಮಂಥ ಸದ್ಗುರುಗಳ ಕೃಪಾಕಟಾಕ್ಷದ ಫಲವಾಗಿ ಈಗ ತಾವು ಸ್ಫುಟವಾಗಿ ಏನೇನು ಪ್ರಶ್ನೆಗಳನ್ನು ಕೇಳಿದಿರೋ, ಅವುಗಳಿಗೆ ಸಿದ್ಧವಾದ ಉತ್ತರರೂಪವಾದ ಫಲಗಳು ಮುಂದೆ ಅವಶ್ಯವಾಗಿ ಆಗಲಿರುವವು. ಆಚಾರ್ಯಪೂಜ್ಯಪಾದರನ್ನು ಕಂಡವನಿಗೆ ದುರ್ಲಭವಾದದ್ದು ಏನಿದ್ದೀತು? ಗುರುಕೃಪಾಪಾತ್ರನಾದರೆ ಮೂಕನು ವಾಗ್ಮಿಯಾಗಿಬಿಡುವನು. ಮಂದಬುದ್ಧಿಯು ಪಂಡಿತಪ್ರಕಾಂಡನಾಗುವನು.

ಪಾಪಿಯು ಪುಣ್ಯವಂತರಲ್ಲಿ ಅಗ್ರಗಣ್ಯನೆನಿಸುವನು. ಕಾಮಾಸಕ್ತನು ನಿಃಸ್ಪೃಹರ ಗುಂಪಿನಲ್ಲಿ ಕೀರ್ತಿಶಾಲಿಯೆನಿಸುವನು. ಹೀಗೆ ಕ್ಷಣಮಾತ್ರದಲ್ಲಿ ಪೂಜ್ಯರ ಕೃಪಾದೃಷ್ಟಿಸ್ಪರ್ಶವು ಎಂಥವನನ್ನೂ ಉದ್ಧರಿಸಬಲ್ಲದು'' ಎಂದು ಕೊಂಡಾಡಿದರು.

ಅನಂತರ ಮತ್ತೊಮ್ಮೆ ಗೌಡಪಾದರ ಮಹಿಮೆಯನ್ನು ಹೀಗೆ ಕೊಂಡಾಡಿದರು. ''ಸದ್ಗುರುವರ್ಯರೆ, ತಮ್ಮ ಅಪಾರವಾದ ಮಹಿಮೆಯನ್ನು ಬಲ್ಲವರಾರು? ಏಕೆಂದರೆ ತಮ್ಮ ಯೋಗ್ಯತೆಯ ಪ್ರಭಾವವನ್ನು ಅರಿತೇ ವ್ಯಾಸಪುತ್ರರಾದ ಶುಕಾಚಾರ್ಯರು ತಮ್ಮನ್ನು ಶಿಷ್ಯನನ್ನಾಗಿ ಸ್ವೀಕರಿಸಿ ಬ್ರಹ್ಮವಿದ್ಯೋಪದೇಶವನ್ನು ಮಾಡಿರುತ್ತಾರೆ. ಆ ಶುಕಮಹಾಮುನಿಗಳಾದರೊ, ಸರ್ವಾತ್ಮಭಾವವನ್ನು ಪಡೆದಿದ್ದ ಮಹಾಯೋಗಿಗಳು. ಹುಟ್ಟುವಾಗಲೇ ಜ್ಞಾನವೈರಾಗ್ಯ ಸಂಪನ್ನರಾದವರು. ಹೀಗೆ ಜನ್ಮದಿಂದಲೇ ಸಿದ್ಧರೂ ಪರಿಶುದ್ಧರೂ ಆದ ಆ ಮಹಾಮುನಿಗಳು ಪರಮವೈರಾಗ್ಯಸಂಪನ್ನರಾಗಿ ತಂದೆಯಾದ ವ್ಯಾಸರನ್ನು ತ್ಯಜಿಸಿ ಹೊರಡಲಾಗಿ ವ್ಯಾಸರೇ ಪುತ್ರವ್ಯಾಮೋಹದಿಂದ 'ಪುತ್ರನೇ'- ಎಂದು ಕೂಗಿ ಕರೆದರು. ಶುಕರೇನೂ ತಿರುಗಿ ನೋಡಲಿಲ್ಲ. ಆದರೆ ಸರ್ವಾತ್ಮಭಾವವನ್ನು ಹೊಂದಿದ್ದ ಅವರ ಸಿದ್ಧಿಯ ಪ್ರಭಾವವು ಹೇಗಿತ್ತೆಂದರೆ : ಅಲ್ಲಿದ್ದ ಮರಗಿಡಗಳೆಲ್ಲವೂ ತಾವೇ ಶುಕರೆಂಬ ತಾದಾತ್ಮ್ಯದಿಂದ ವ್ಯಾಸರಿಗೆ ಓಗೊಟ್ಟು ಕೂಗಿದವಂತೆ. ಹೀಗಿದೆ - ಆ ಮಹಾಮುನಿಗಳ ಬ್ರಹ್ಮನಿಷ್ಠೆಯು. ಅಂಥ ಶುಕರು ತಮ್ಮನ್ನು ಶಿಷ್ಯನನ್ನಾಗಿ ಅಂಗೀಕರಿಸಿದ್ದು ತಮ್ಮ ನಿರತಿಶಯವಾದ ಮಹಿಮೆಯನ್ನು ಪ್ರಕಟಗೊಳಿಸುತ್ತದೆ '' ಎಂದರು.

ಈ ರೀತಿಯಾದ ಸ್ತೋತ್ರಕ್ಕೆ ಮೆಚ್ಚಿದ ಶ್ರೀಗೌಡಪಾದರು ಶಂಕರಾಚಾರ್ಯರನ್ನು ಕುರಿತು ಹೀಗೆಂದರು : ''ಮಗು, ನಿನ್ನ ಸದ್ಗುಣಗಳನ್ನೂ ಪಾಂಡಿತ್ಯ, ತಪಸ್ಸು ಬ್ರಹ್ಮನಿಷ್ಠೆಗಳನ್ನೂ ಕೇಳಿದ್ದ ನನಗೆ ನಿನ್ನನ್ನು ನೋಡಬೇಕೆನಿಸಿತು. ಬಹಳಕಾಲದಿಂದ ನನ್ನ ಮನಸ್ಸು ಈ ಭೇಟಿಗೆ ಹಾತೊರೆಯುತ್ತಿತ್ತು. ನೀನು ಪ್ರಸ್ಥಾನತ್ರಯಭಾಷ್ಯಗಳನ್ನು ರಚಿಸಿದ್ದೀಯೆಂದೂ ನನ್ನ ಮಾಂಡೂಕ್ಯಕಾರಿಕೆಗಳಿಗೆ ಸರಳವೂ ಅರ್ಥಗರ್ಭಿತವೂ ಆದ ವ್ಯಾಖ್ಯಾನವನ್ನು ರಚಿಸಿರುವೆಯೆಂದೂ ಗೋವಿಂದಭಗವತ್ಪಾದಮುನಿಯಿಂದ ಗೊತ್ತಾಯಿತು. ಅದಕ್ಕಾಗಿ ನಿನಗೆ ದರ್ಶನವನ್ನು ನೀಡಿರುತ್ತೇನೆ'' ಎಂದರು. ಆಗ ಆಚಾರ್ಯರು ಶ್ರೀ ಗೌಡಪಾದರ ಸಮ್ಮುಖದಲ್ಲಿ ತಾವು ಬರೆದಿದ್ದ ಮಾಂಡೂಕ್ಯಕಾರಿಕಾಭಾಷ್ಯವನ್ನು ಓದಿ ಹೇಳಿದರು. ಪೂರ್ಣವಾಗಿ ಭಾಷ್ಯವನ್ನೆಲ್ಲ ಶ್ರವಣಮಾಡಿದ ಗೌಡಪಾದರು ಹೀಗೆಂದರು : ''ವತ್ಸ, ನಿನ್ನ ಭಾಷ್ಯವಿವರಣೆಯು ನನ್ನ ಕಾರಿಕೆಯ ಭಾವಾರ್ಥವನ್ನು ಅತ್ಯಂತಸಮಂಜಸವಾಗಿ ತಿಳಿಸುತ್ತದೆ. ಮತ್ತು ಕುಮತಗಳನ್ನು ನಿರಾಸಮಾಡಿ ವೇದಂತಾರ್ಥಸಂಪ್ರದಾಯವನ್ನು ಸ್ಫುಟಗೊಳಿಸುತ್ತದೆ. ಇಂಥ ಗ್ರಂಥವನ್ನು ನೋಡಿ ನನಗೆ ಮಹದಾನಂದವಾಗಿದೆ ; ನಿನಗೇನು ವರವು ಬೇಕು? ಕೇಳಿಕೊ ; ನಾನು ವರವನ್ನು ಕೊಡಲಿಚ್ಛಿಸುವೆನು''-

ಎಂದರು. ಆಗ ಆಚಾರ್ಯರು "ಪೂಜ್ಯರೆ, ತಮ್ಮ ದರ್ಶನವು ರೂಪಾಂತರದಿಂದ ಶುಕಮಹರ್ಷಿಗಳ ದರ್ಶನವೇ ಆಗಿರುವದು. ಕಲಿದೋಷಮುಕ್ತರಾದ ತಾವು ವಿಷ್ಣುಸ್ವರೂಪರೆಂದೇ ನಾನು ತಿಳಿದಿದ್ದೇನೆ. ಇಂಥ ಮಹಾತ್ಮರ ದರ್ಶನಲಾಭಕ್ಕಿಂತ ಹೆಚ್ಚಿನದಾಗಿ ನಾನು ಬೇಡಿಕೊಳ್ಳುವಂಥ ವರವೇನಿದ್ದೀತು? ಆದರೂ ಒಂದು ವರವನ್ನು ಬೇಡುವೆನು. ಏನೆಂದರೆ ನನ್ನ ಮನಸ್ಸು ಯಾವಾಗಲೂ ಚಿತ್ಸ್ವರೂಪವಾದ ಪರಬ್ರಹ್ಮತತ್ತ್ವಾನುಸಂಧಾನದಲ್ಲಿಯೇ ನೆಲೆಗೊಳ್ಳಲಿ" ಎಂದರು. ಹಾಗೆಯೇ ಆಗಲೆಂದು ಪರಮಗುರುಗಳು ವರಪ್ರದಾನಮಾಡಿ ಅಂತರ್ಧಾನವನ್ನು ಹೊಂದಿದರು.

## ಸರ್ವಜ್ಞಪೀಠಾರೋಹಣ :

ಆಚಾರ್ಯರ ಅವತಾರಲೀಲೆಯ ಕಟ್ಟ ಕಡೆಯ ಘಟನೆಯನ್ನು ಈಗ ತಿಳಿಯೋಣ. ಗೌಡಪಾದರಿಂದ ಅನುಗೃಹೀತರಾದ ಆಚಾರ್ಯರಿಗೆ ಶಿಷ್ಯರ ಮೂಲಕ ಒಂದು ವರ್ತಮಾನವು ತಿಳಿಯಬಂದಿತು. ಏನೆಂದರೆ : "ಭೂಮಂಡಲವು ಸಪ್ತದ್ವೀಪಗಳಿಂದ ಕೂಡಿದ್ದು. ಅವುಗಳಲ್ಲಿ ಜಂಬೂದ್ವೀಪವು ಪ್ರಸಿದ್ಧವಾದದ್ದು. ಅದರಲ್ಲಿಯೂ ಭಾರತವರ್ಷವು ಶ್ರೇಷ್ಠವು. ಅದರಲ್ಲಿಯೂ ಕಾಶ್ಮೀರದೇಶವೂ ಅಲ್ಲಿರುವ ಶಾರದಾಪೀಠವೂ ಲೋಕಪ್ರಸಿದ್ಧವಾದದ್ದು. ಶ್ರೀಶಾರದಾದೇವಿಯ ನಿವಾಸಸ್ಥಾನವಾದ ಆ ದೇವಾಲಯಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಬಾಗಿಲುಗಳಿದ್ದು ಪ್ರತಿಯೊಂದು ದಿಕ್ಕಿನಿಂದಲೂ ಬರಬಹುದಾದ ವಿದ್ವಾಂಸರು ಆಯಾ ದ್ವಾರಗಳಲ್ಲಿ ನೆಲಸಿರುವ ವಿದ್ವಾಂಸರೊಡನೆ ವಾದಮಾಡಿ ಅವರುಗಳನ್ನು ಗೆದ್ದು ಬಾಗಿಲನ್ನು ಉದ್ಘಾಟಿಸಿ ಒಳಗೆ ಪ್ರವೇಶ ಮಾಡಿ ಅನಂತರ ಶ್ರೀಶಾರದೆಯ ಸಂಮುಖದಲ್ಲಿ ಅಲ್ಲಿರುವ ಸರ್ವಜ್ಞಪೀಠವನ್ನು ಏರಬೇಕಾಗಿರುವದು. ಈ ವರೆಗೆ ಪೂರ್ವಪಶ್ಚಿಮೋತ್ತರದೇಶಗಳಿಂದ ಬ್ರಹ್ಮನಿಷ್ಠರು ಆಗಮಿಸಿ ಜಯಶಾಲಿಗಳಾಗಿ ದ್ವಾರಗಳನ್ನು ತೆಗೆಯಿಸಿ ಒಂದೊಂದು ಬಾರಿ ಸರ್ವಜ್ಞಪೀಠಾರೋಹಣ ಮಾಡಿದ್ದಾರೆ. ಆದರೆ ದಕ್ಷಿಣದಿಕ್ಕಿನಿಂದ ಅಂಥ ವಿದ್ವಾಂಸರೇ ಬಂದಿಲ್ಲವಾಗಿ ಆ ಬಾಗಿಲು ಒಂದು ಬಾರಿಯೂ ತೆರೆದೇ ಇಲ್ಲ" ಎಂಬ ವಾರ್ತೆಯು ಆಚಾರ್ಯರಿಗೆ ಕೇಳಬಂದಿತು.

ಆಗ ಆಚಾರ್ಯರು ಶಿಷ್ಯರೊಡಗೂಡಿ ಕಾಶೀಕ್ಷೇತ್ರದಿಂದ ಕಾಶ್ಮೀರದೇಶಕ್ಕೆ ಪ್ರಯಾಣವನ್ನು ಬೆಳೆಯಿಸಿದರು. ಆ ದೇಶವನ್ನು ತಲುಪಿ ಅಲ್ಲಿಯ ಸುಪ್ರಸಿದ್ಧ ನಗರಿಯಾದ ಶ್ರೀನಗರವನ್ನು ಪ್ರವೇಶಿಸಿದರು. ಶಾರದಾಂಬೆಯ ದೇವಾಲಯದ ದಕ್ಷಿಣದ್ವಾರವನ್ನು ಸಮೀಪಿಸಿದರು. ಅಲ್ಲಿ ದೊಡ್ಡದಾದ ಪಂಡಿತಸಮೂಹವೇ ನೆರೆದಿತ್ತು. ಬೌದ್ಧರು, ಕಾಣಾದರು, ವೈಶೇಷಿಕರು, ಸಾಂಖ್ಯರು, ಜೈನರೇ ಮುಂತಾದ ಅವೈದಿಕ- ವೈದಿಕದರ್ಶನಾನುಯಾಯಿಗಳಾದ ಪಂಡಿತರುಗಳು ಒಬ್ಬೊಬ್ಬರಾಗಿ ಆಚಾರ್ಯರೊಡನೆ ವಾದಗಳನ್ನು ಹೂಡಿದರು. ಆಗ ಆಚಾರ್ಯರು

ವೇದಪ್ರಾಮಾಣ್ಯವನ್ನು ಒಪ್ಪುವವರಿಗೆ ವೇದವಾಕ್ಯಗಳ ಆಧಾರದಿಂದಲೂ ಅದನ್ನೊಪ್ಪದವರಿಗೆ ಕೇವಲ ತರ್ಕ ಪ್ರತಿಯುಕ್ತಿಗಳಿಂದಲೂ ಲೀಲಾಜಾಲವಾಗಿ ಉತ್ತರಿಸಿ ತಮ್ಮ ಸಿದ್ಧಾಂತವನ್ನು ಶ್ರುತಿಯುಕ್ತ್ಯನುಭವಗಳ ಮೇಳದಿಂದ ಸ್ಥಾಪಿಸಿದರು. ಅದನ್ನು ಖಂಡಿಸಲು ಯಾವ ದ್ವೈತವಾದಿಗಳಿಗೂ ಸಾಧ್ಯವಾಗದೆ ಎಲ್ಲರೂ ಸೋಲನ್ನೊಪ್ಪಿಕೊಂಡರು. ಇದರಿಂದ ದಕ್ಷಿಣದ್ವಾರವನ್ನು ತೆರೆಯಿಸುವ ಅವಕಾಶವು ಒದಗಿಬಂದಿತು. ಹೀಗೆ ಆಚಾರ್ಯರು ತಮ್ಮ ಅನಿತರಸಾಧಾರಣವಾದ ಪಾಂಡಿತ್ಯ, ಸದಾಚಾರ, ಆಶ್ರಮಧರ್ಮಪರಿಪಾಲನೆ, ಶ್ರೋತ್ರಿಯತ್ವ, ಬ್ರಹ್ಮನಿಷ್ಠೆಗಳಿಂದ ಸರ್ವಜ್ಞಪೀಠಾರೋಹಣಕ್ಕೆ ಅರ್ಹತೆಯನ್ನು ಸಂಪಾದಿಸಿಕೊಂಡವರಾಗಿ ಶ್ರೀಶಾರದೆಯ ಸಮ್ಮುಖದಲ್ಲಿ ನಿಂತು ಹೀಗೆ ಸ್ತುತಿಸಿದರು.

**ಸರ್ವಜ್ಞೇ ಸರ್ವವರದೇ ಸರ್ವಶಕ್ತಿಸಮನ್ವಿತೇ ।**
**ಸರ್ವವಿದ್ಯಾಶ್ರಯೇ ದೇವಿ ಶಾರದೇ ಶಾಸ್ತ್ರಸೇವಿತೇ ॥**
**ಕಾಮಿತಾರ್ಥಪ್ರದೇ ಮಾತಃ ಕಾಶ್ಮೀರಪುರವಾಸಿನಿ ।**
**ತ್ವಾಮಹಂ ಪ್ರಾರ್ಥಯೇ ವಾಣಿ ಸರ್ವಜ್ಞತ್ವಂ ಚ ದೇಹಿ ಮೇ ॥**
**ಇದಂ ಸರ್ವಜ್ಞಪೀಠಂ ಹಿ ತ್ವತ್ಕೃಪಾಪೋಷಿತಂ ಸದಾ ।**
**ತ್ವದಾಜ್ಞಯಾಽಹಮಾರುಹ್ಯ ಬ್ರಹ್ಮನಿಷ್ಠೋ ಕೃತಾರ್ಥತಾಮ್ ॥**
**ಗಮಿಷ್ಯಾಮಿ ಜಗದ್ವಂದ್ಯೇ ಪ್ರಸಾದಂ ಕರ್ತುಮರ್ಹಸಿ ॥**

ಹೀಗೆ ಸ್ತೋತ್ರಮಾಡಲಾಗಿ ಶಾರದಾಂಬೆಯು ಅದೃಶ್ಯಳಾಗಿಯೇ ಆಕಾಶವಾಣಿಯಿಂದ ಹೀಗೆಂದಳು : ''ಯತಿಶ್ರೇಷ್ಠರೆ, ನಾನು ಶಾಪಗ್ರಸ್ತಳಾಗಿ ಮಾನುಷ್ಯವನ್ನು ಪಡೆದಾಗ ಅದರಿಂದ ಬಿಡುಗಡೆಯನ್ನು ಹೊಂದಲು ನೀವೇ ಕಾರಣರಾದಿರಿ. ವಾದದಲ್ಲಿ ನನ್ನನ್ನು ಕೂಡ ಜಯಿಸಿದ್ದಲ್ಲದೆ ದೇವಿಯ ಆರಾಧನೆ-ಉಪಾಸನೆ- ತತ್ತ್ವಜ್ಞಾನಗಳಿಂದಲೂ ವಶಗೊಳಿಸಿಕೊಂಡು ಭಕ್ತಿಪಾಶದಿಂದ ಕಟ್ಟಿರುವಿರಿ. ನಿಮ್ಮಂಥ ಅನ್ವರ್ಥಜಗದ್ಗುರುಗಳೂ ಸರ್ವಜ್ಞರೂ ಆದವರೇ ಸರ್ವಜ್ಞ ಪೀಠಾರೋಹಣವನ್ನು ಮಾಡಲು ಅರ್ಹರು. ಇದೊ, ನಾನು ಅನುಮತಿಯನ್ನು ನೀಡಿ ಹರಸಿದ್ದೇನೆ. ನಿಮಗೆ ಸ್ವಸ್ತಿ''- ಎಂದಳು. ಆಗ ಆಚಾರ್ಯರು ಪದ್ಮಪಾದನ ಹಸ್ತಾವಲಂಬನವನ್ನು ಸ್ವೀಕರಿಸಿ ಸಕಲಪಂಡಿತೋತ್ತಮರ ಹಾಗೂ ಜಗನ್ಮಾತೆಯಾದ ಶಾರದಾಂಬೆಯ ಸಮ್ಮುಖದಲ್ಲಿ ಸರ್ವಜ್ಞಪೀಠವನ್ನೇರಿ ಭಕ್ತವೃಂದವನ್ನೂ ಶಿಷ್ಯಕೋಟಿಯನ್ನೂ ಆನಂದದಲ್ಲಿ ಮುಳುಗಿಸಿದರು. ಸಾಕ್ಷಾತ್ ಶಾರದೆಯನ್ನೇ ಸಾಕ್ಷಾತ್ಕರಿಸಿಕೊಂಡು ಆಕೆಯ ಅಮೃತವಚನಗಳಿಂದ ಅನುಗ್ರಹಿಸಲ್ಪಟ್ಟು ಜಗತ್ಪೂಜ್ಯರಾದ ಶ್ರೀಶಂಕರಭಗವತ್ಪಾದರು ಸರ್ವಜ್ಞರೆನಿಸಿ ಅದ್ವಿತೀಯಜಗದ್ಗುರುಗಳಾಗಿ ವಿರಾಜಿಸಿದರು.

## ಬದರಿಕಾಶ್ರಮಕ್ಕೆ ಪ್ರಯಾಣ :

ಹೀಗೆ ಭಗವತ್ಪಾದರು ಸರ್ವಜ್ಞಪೀಠಾರೋಹಣದ ಮಹೋತ್ಸವಾನಂತರ ಲೋಕಸಂಗ್ರಹಕಾರ್ಯಗಳೆಲ್ಲವೂ ಪೂರೈಸಿದ್ದರಿಂದ ತಮ್ಮ ನಾಲ್ಕು ಜನ ಪ್ರಮುಖರಾದ ಶಿಷ್ಯರನ್ನು ಕುರಿತು ಹೀಗೆ ಆಜ್ಞಾಪಿಸಿದರು. ''ನೀವುಗಳು ಭರತಖಂಡದ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಪೀಠಗಳಲ್ಲಿ ನಿಂತು ಶಾರದಾಂಬೆಯ ಆರಾಧನೆಯನ್ನು ಅಧ್ಯಾತ್ಮವಿದ್ಯಾಪ್ರವಚನ, ಪ್ರಚಾರಗಳ ರೂಪದಿಂದಲೂ ಜಪ, ಪೂಜಾ, ಹೋಮ, ತರ್ಪಣಾದ್ಯನುಷ್ಠಾನಗಳ ರೂಪದಿಂದಲೂ ಮಾಡುತ್ತಾ ಶಿಷ್ಯಕೋಟಿಯನ್ನು ಕೃತಾರ್ಥರನ್ನಾಗಿ ಮಾಡಬೇಕು. ಉತ್ತರೋತ್ತರವಾಗಿ ಶಿಷ್ಯಪರಂಪರೆಯನ್ನು ಬೆಳೆಯಿಸಿ ಬ್ರಹ್ಮವಿದ್ಯಾಸಂಪ್ರದಾಯವು ಅವಿಚ್ಛಿನ್ನ ಗುರುಪರಂಪರೆಯಿಂದ ಮುಂದುವರೆಯುವಂತೆ ನೋಡಿಕೊಳ್ಳಬೇಕು. ರಾಜಮಹಾರಾಜರುಗಳಿಂದಾರಂಭಿಸಿ ಸಾಮಾನ್ಯ ಭಕ್ತನಾದವನು ಅರ್ಪಿಸುವವರೆಗಿನ ದ್ರವ್ಯರಾಶಿಯನ್ನೆಲ್ಲ ಶಿಷ್ಯಕೋಟಿಯ ಅಜ್ಞಾನನಿವಾರಣೆಗೂ ಇಷ್ಟಾನಿಷ್ಟ ಪ್ರಾಪ್ತಿಪರಿಹಾರಗಳಿಗೂ ಬಳಸುತ್ತಾ ನಿಃಸ್ಪೃಹರಾಗಿ ಯದೃಚ್ಛಾಲಾಭಸಂತುಷ್ಟರಾಗಿ ಖ್ಯಾತಿಲಾಭಪೂಜಾದಿಗಳನ್ನು ಬಯಸದೆ ವಿರಕ್ತರಾಗಿ ತಪಸ್ವಿಗಳಾಗಿರಬೇಕು. ಯಾವದೇ ರಾಜಕೀಯವಿಪ್ಲವಗಳಿಗಾಗಲಿ ಸುಧಾರಣೆಗಳಿಗಾಗಲಿ ಹೆದರದೆ ಭಗವತಿಯನ್ನೇ ಅನನ್ಯರಾಗಿ ಶರಣುಹೊಕ್ಕು ಪೀಠಗೌರವವನ್ನೂ ಗುರು ಸಂಪ್ರದಾಯಪರಪಂರೆಯನ್ನೂ ರಕ್ಷಿಸಿಕೊಳ್ಳಬೇಕು. ಮುಖ್ಯವಾಗಿ ಉಪನಿಷದ್ವಿದ್ಯಾ ಪ್ರವಚನ, ತದ್ವಿಚಾರ- ತದರ್ಥಾನುಸಂಧಾನತತ್ಪರರಾಗಿ ರಾಗದ್ವೇಷಗಳಿಲ್ಲದೆ ಆಯಾ ಕಾಲಕ್ಕೆ ಒದಗಿದ ವ್ಯವಹಾರವನ್ನು ಸಾಗಿಸುತ್ತಾ ಭೂಮಂಡಲಕ್ಕೇ ಆದರ್ಶಸದ್ಗುರುಗಳಾಗಿ ಬಾಳಬೇಕು.'' ಹೀಗೆಂದು ಹೇಳಿ ಶ್ರೀ ಸುರೇಶ್ವರರನ್ನು ದಕ್ಷಿಣಾಮ್ನಾಯ ಪೀಠಕ್ಕೂ ಪದ್ಮಪಾದರನ್ನು ಪಶ್ಚಿಮಾಮ್ನಾಯ ಪೀಠಕ್ಕೂ ತೋಟಕಾಚಾರ್ಯರನ್ನು ಉತ್ತರಾಮ್ನಾಯಪೀಠಕ್ಕೂ ಹಸ್ತಾಮಲಕರನ್ನು ಪೂರ್ವಾಮ್ನಾಯ ಪೀಠಕ್ಕೂ ಗುರುಗಳನ್ನಾಗಿ ನೇಮಿಸಿದರು. ಈ ಪರಂಪರೆಯು ಈಗಲೂ ಅಸ್ತಿತ್ವದಲ್ಲಿದೆ. ಅನಂತರ ಶ್ರೀ ಶಂಕರಭಗವತ್ಪಾದರು ಶ್ರೀವೇದವ್ಯಾಸರು ತಮಗೆ ನಿಗದಿ ಮಾಡಿದ್ದ ಮೂವತ್ತೆರಡು ವರ್ಷಗಳ ಆಯುಷ್ಯವು ಪೂರೈಸುತ್ತಾ ಬಂದಿರುವದನ್ನು ಮನಗಂಡು ನೇರಾಗಿ ಬದರಿಕಾಶ್ರಮಕ್ಕೆ ಪ್ರಯಾಣ ಮಾಡಿದರು.

## ಅವತಾರಸಮಾಪ್ತಿ :

ಆಚಾರ್ಯರು ಬದರಿಕ್ಷೇತ್ರದಲ್ಲಿ ಕೆಲವು ಕಾಲ ವಾಸವಾಗಿದ್ದು ಅಲ್ಲಿದ್ದ ಯೋಗಶಾಸ್ತ್ರಜ್ಞರಿಗೆ ತಮ್ಮ ಬ್ರಹ್ಮಸೂತ್ರಭಾಷ್ಯವನ್ನು ಪಾಠಹೇಳಿದರು. ಅವರುಗಳೆಲ್ಲರೂ ಯೋಗ - ವೇದಾಂತದರ್ಶನಗಳ ಸಂಬಂಧವನ್ನೂ ಅನಂತರ ಜ್ಞಾನಯೋಗವೊಂದೇ ಮುಕ್ತಿಪ್ರದವೆಂಬ ನಿಜವನ್ನೂ ಕಂಡುಕೊಂಡು ತಮ್ಮ

ಸಾಧನೆಗಳನ್ನು ಅನುಷ್ಠಿಸಲಾರಂಭಿಸಿದರು. ಬದರೀಕ್ಷೇತ್ರನಿವಾಸಿಗಳಿಗೆ ಹಾಗೂ ಪ್ರವಾಸಿಗಳಿಗೆ ಅಲ್ಲಿಯ ಶೀತಹವೆಯ ನಿಮಿತ್ತ ಉಂಟಾಗುವ ಚಳಿಯನ್ನು ನಿವಾರಿಸಲು ಹಾಗೂ ಸ್ನಾನಾದಿಗಳಿಗೆ ಅನುಕೂಲವನ್ನೂ ಕಲ್ಪಿಸುವ ಸಲುವಾಗಿ ತಪ್ತೋದಕಕುಂಡವೊಂದನ್ನು ನಿರ್ಮಿಸಿದರು. ಈಗಲೂ ಅದು ಪ್ರಸಿದ್ಧವಾಗಿದೆ.

ಹೀಗೆ ತಮ್ಮ ಕಾರ್ಯಗಳೆಲ್ಲವೂ ಪೂರೈಸಿದ್ದರಿಂದ ಅನಂತರ ಕೇದಾರಕ್ಷೇತ್ರಕ್ಕೆ ಬಂದು ನಿಂತರು. ಅಲ್ಲಿಗೆ ಅವರ ಮೂವತ್ತೆರಡು ವರ್ಷಗಳ ಮಾನುಷಾಯುಷ್ಯವು ಪೂರೈಸಿತು.

ಆಗ ದೇವತೆಗಳೆಲ್ಲರೂ ಮಾನುಷಶಂಕರನ ಅವತಾರಲೀಲೆಗಳು ಪೂರೈಸಿದ್ದರಿಂದ ಮತ್ತೆ ಕೈಲಾಸಕ್ಕೆ ಕರೆದುಕೊಂಡು ಹೋಗಲು ಅಲ್ಲಿಗೆ ಬಂದರು. ಚತುರ್ಮುಖಬ್ರಹ್ಮನನ್ನು ಮುಂದಿಟ್ಟುಕೊಂಡು ಇಂದ್ರಾದಿದೇವತೆಗಳು, ದೇವರ್ಷಿಗಳು, ಸಿದ್ಧಚಾರಣಾದಿಸಮಸ್ತ ಸ್ವರ್ಗನಿವಾಸಿಗಳೂ ಒಟ್ಟಿಗೆ ಬಂದರು. ದೇವಲೋಕದ ಮಂದಾರಪಾರಿಜಾತಾದಿಪುಷ್ಪಗಳನ್ನು ಸಮರ್ಪಿಸಿ ನಮಸ್ಕರಿಸಿ ಕೈಲಾಸಕ್ಕೆ ಹಿಂದಿರುಗವಂತೆ ಪ್ರಾರ್ಥಿಸಿದರು. ಆಗ ಪರಮೇಶ್ವರನು ಹಿಂದೆ ದೇವತೆಗಳಿಗೆ ವರವನ್ನು ನೀಡಿದ್ದಂತೆ ಮಾನುಷಶಂಕರರೂಪದಿಂದ ನೆರವೇರಿಸಬೇಕಾಗಿದ್ದ ಲೋಕಕಲ್ಯಾಣಕಾರ್ಯವು ಪೂರೈಸಿದುದನ್ನು ನೆನೆಸಿಕೊಂಡು ಗುರುವೇಷವನ್ನು ಅಂತರ್ಧಾನಗೊಳಿಸಿ ತನ್ನ ಸ್ವರೂಪದಿಂದ ಎಲ್ಲರಿಗೂ ದರ್ಶನವನ್ನು ನೀಡಿದನು. ಬ್ರಹ್ಮನು ಹಸ್ತಾವಲಂಬನವನ್ನೀಯಲಾಗಿ ತನ್ನ ಸ್ವವಾಹನವಾದ ನಂದಿಯನ್ನೇರಿದವನಾಗಿ ದೇವತೆಗಳು ಮಂಗಳವಾದ್ಯಗಳನ್ನು ನುಡಿಸುತ್ತಿರಲಾಗಿ ಪರಮೇಶ್ವರನು ತನ್ನ ಸ್ವಸ್ಥಾನವಾದ ಕೈಲಾಸಕ್ಕೆ ದಯಮಾಡಿಸಿದನು. ಆಗ ಶಂಕರಯತಿಯು ಸಾಕ್ಷಾತ್ ಪರಶಿವನೇ ಎಂಬ ''ಶಿವೋऽಹಂ'' ಮಂತ್ರವು ಮೊಳಗುತ್ತಿತ್ತು. ಹೀಗೆ ಪರಮೇಶ್ವರನು ಲೀಲೆಯಿಂದ ಧರಿಸಿದ್ದ ಮಾನುಷ ಸಂನ್ಯಾಸಿಶಂಕರರೂಪವು ಅದೃಶ್ಯವಾಗಿ **''ಆದಿಶಂಕರಾಚಾರ್ಯಗುರುಭ್ಯೋ ನಮಃ''** ಎಂಬ ದಿವ್ಯ ನಾಮಕೀರ್ತನೆಯು ಶಾಶ್ವತವಾಗಿ ಭೂಲೋಕದಲ್ಲಿ ಉಳಿದುಕೊಂಡಿತು. ಆ ಮಹಾವತಾರಕಾಲಕ್ಕೆ ಮುಖಕಮಲದಿಂದ ಹೊರಬಂದು ಅಮೃತಹಸ್ತದಿಂದ ಲಿಪಿರೂಪದಲ್ಲಿ ಬರೆಯಲ್ಪಟ್ಟಿದ್ದ ''ಭಾಷ್ಯಸರಸ್ವತಿಯು'' ಮುಂದಿನ ಪೀಳಿಗೆಯವರಿಗೆ ಶಾಸ್ತ್ರರೂಪಿಣಿಯಾಗಿ ದೊರಕಿದಳು. ಈಗಲೂ ಪ್ರಸ್ಥಾನತ್ರಯಭಾಷ್ಯಶಾರದೆಯು ಗ್ರಂಥರೂಪದಿಂದ ಸಕಲರಿಗೂ ಜ್ಞಾನವನ್ನೂ ದರ್ಶನವನ್ನೂ ನೀಡುತ್ತಾ ವಿರಾಜಮಾನಳಾಗಿದ್ದು ಅಧ್ಯಯನ-ಚಿಂತನಶೀಲರಿಗೆ ಜೀವನ್ಮುಕ್ತಿಪ್ರದಳಾಗಿರುವಳು.

**ಮಂಗಳ :**

ಅಧ್ಯಾತ್ಮಪ್ರಕಾಶಕಾರ್ಯಾಲಯದ ಸಂಸ್ಥಾಪಕರಾದ ಬ್ರಹ್ಮೀಭೂತ ಪರಮ

ಪೂಜ್ಯ ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಮಹಾಸ್ವಾಮಿಗಳವರು ರಚಿಸಿರುವ ''ಮಂಗಳಕೃತಿ'' ಯೊಂದನ್ನು ಉಲ್ಲೇಖಿಸಿ ಈ ''ಅಧ್ಯಾತ್ಮಶಂಕರವಿಜಯ'' ವನ್ನು ಪೂರ್ಣಗೊಳಿಸುವೆನು.

ರಾಗ: ಸುರಟಿ ಅಟತಾಳ

ಮಂಗಲಂ ಮಂಗಲಂ । ಶಂಕರನಿಗೆ ॥ ಪ ॥

ಕಾಲಟಿಭಾಗ್ಯದ ಬಾಲನಿಗೆ । ಕಲಿ । ಕಾಲದೋಷಹರಲೀಲನಿಗೆ ।
ಪಾಲಿತ ಮೋಕ್ಷಾಶ್ರಮ ಲೋಲನಿಗನು । ವೇಲ ವೈರಾಗ್ಯ ಸುಶೀಲನಿಗೆ
ಸದಾ ॥ ೧ ॥

ರೇವಾತೀರ ವಿಭೂಷನಿಗೆ । ಗುರು । ಗೋವಿಂದಚರಣ ಶುಶ್ರೂಷನಿಗೆ ।
ಭಾವಿತಾರ್ಥ ಶ್ರುತಿಶೀರ್ಷನಿಗೆ । ತತ್ತ್ವ । ಭಾವಪ್ರಕಾಶಕ ಭಾಷನಿಗೆ
ಸದಾ ॥ ೨ ॥

ನಿರ್ಜಿತ ತಾರ್ಕಿಕವಾದನಿಗೆ । ಪರಿ । ಮಾರ್ಜಿತ ಮಾಯಗಭೇದನಿಗೆ ।
ಭರ್ಜಿತ ಭವಬೀಜಾಮೋದಗೆ । ದೋಷ । ವರ್ಜಿತ ಶಂಕರನಾದನಿಗೆ
ಸದಾ ॥ ೩ ॥

॥ ಮಂಗಳಮ್ ॥

---

|| ಓಂ ತತ್ಸತ್ ||

# ಪರಿಶಿಷ್ಟ- ೧

## ಶಂಕರವಿಜಯದಲ್ಲಿ ಪರಾಮೃಷ್ಟವಾಗಿರುವ ಸ್ತೋತ್ರಗಳು

(ಅಧ್ಯಾತ್ಮಶಂಕರವಿಜಯ, ಪುಟ-೧೬)

### ೧. ಕನಕಧಾರಾಸ್ತೋತ್ರ

**ಅಂಗಂ ಹರೇಃ ಪುಲಕಭೂಷಣಮಾಶ್ರಯಂತೀ**
**ಭೃಂಗಾಂಗನೇವ ಮುಕುಲಾಭರಣಂ ತಮಾಲಮ್ ।**
**ಅಂಗೀಕೃತಾಖಿಲವಿಭೂತಿರಪಾಂಗಲೀಲಾ**
**ಮಾಂಗಲ್ಯದಾಸ್ತು ಮಮ ಮಂಗಳದೇವತಾಯಾಃ ॥೧॥**

೧. ತಮಾಲವೆಂಬ ಮರದ ಆಭರಣಪ್ರಾಯವಾದ ಮೊಗ್ಗನ್ನು ಆಶ್ರಯಿಸಿರುವ ಹೆಣ್ಣುದುಂಬಿಯಂತೆ- ಶ್ರೀಮಹಾವಿಷ್ಣುವಿನ ರೋಮಾಂಚಗೊಂಡ ಶರೀರವನ್ನು ಅವಲಂಬಿಸಿರುವ, ಮಂಗಳದೇವತೆಯಾದ (ಮಹಾಲಕ್ಷ್ಮಿಯ), ಸಮಸ್ತಐಶ್ವರ್ಯಗಳನ್ನೂ ಅಡಗಿಸಿಕೊಂಡಿರುವ ಕುಡಿಗಣ್ಣಿನ ನೋಟಗಳೆಂಬ ಲೀಲೆಯು ನನಗೆ ಮಂಗಳವನ್ನೀಯಲಿ.

**ಮುಗ್ಧಾ ಮುಹುರ್ವಿದಧತೀ ವದನೇ ಮುರಾರೇಃ**
**ಪ್ರೇಮತ್ರಪಾಪ್ರಣಿಹಿತಾನಿ ಗತಾಗತಾನಿ ।**
**ಮಾಲಾದೃಶೋರ್ಮಧುಕರೀವ ಮಹೋತ್ಪಲೇ ಯಾ**
**ಸಾ ಮೇ ಶ್ರಿಯಂ ದಿಶತು ಸಾಗರಸಂಭವಾಯಾಃ ॥೨॥**

೨. ಶ್ರೀ ಮಹಾವಿಷ್ಣುವಿನ ಮುಖದ ಕಡೆಗೆ ಪ್ರೇಮಪೂರ್ವಕವಾದ ನಾಚಿಕೆಯಿಂದ ನೋಟವನ್ನು ಬೀರುತ್ತಾ ಹಾಗೂ ಹಿಂದೆಗೆಯುತ್ತಾ ಮುಗ್ಧವಾದ

ರೀತಿಯಿಂದ (ಚಲಿಸುತ್ತಿರುವ)- ಎರಡು ದೊಡ್ಡ ನೈದಿಲೆಗಳಂತೆ ಇರುವ- ಹಾಗೂ ಹೂಮಾಲೆಯನ್ನು ನೋಡುತ್ತಿರುವ ದುಂಬಿಯಂತೆ ಇರುವ ಸಾಗರಕನ್ನಿಕೆಯಾದ (ಲಕ್ಷ್ಮಿಯ)ಕಟಾಕ್ಷಗಳು ನನಗೆ ಐಶ್ವರ್ಯವನ್ನುಂಟುಮಾಡಲಿ.

**ಆಮೀಲಿತಾಕ್ಷಮಧಿಗಮ್ಯ ಮುದಾ ಮುಕುಂದ-**
**ಮಾನಂದಕಂದಮನಿಮೇಷಮನಂಗತಂತ್ರಮ್ ।**
**ಆಕೇಕರಸ್ಥಿತಕನೀನಿಕಪಕ್ಷ್ಮನೇತ್ರಂ**
**ಭೂತ್ಯೈ ಭವೇನ್ಮಮ ಭುಜಂಗಶಯಾಂಗನಾಯಾಃ ॥೩॥**

೩. ಸ್ವಲ್ಪವೇ ಮುಚ್ಚಿದ ಕಣ್ಣುಳ್ಳ ಹಾಗೂ ಆನಂದಭರಿತನೂ ರೆಪ್ಪೆಯಾಡಿಸದವನೂ ಮನ್ಮಥಾವಿಷ್ಟನೂ ಆದ ಮುಕುಂದ (ವಿಷ್ಣು)ನನ್ನು ಅರಿತವಳಾದ ನಾಗಶಯನನ ಮಡದಿಯಾದ (ಲಕ್ಷ್ಮಿಯ) ಕುಡಿಗಣ್ಣಿನ ನೋಟವನ್ನು ಅವಲಂಬಿಸಿರುವ ರೆಪ್ಪೆಗಳುಳ್ಳ ನೇತ್ರವು ನನ್ನ ಐಶ್ವರ್ಯಸಮೃದ್ಧಿಗೆ ಕಾರಣವಾಗಲಿ.

**ಬಾಹ್ವನ್ತರೇ ಮಧುಜಿತಃ ಶ್ರಿತಕೌಸ್ತುಭೇ ಯಾ**
**ಹಾರಾವಲೀ ಚ ಹರಿನೀಲಮಣೀ ವಿಭಾತಿ ।**
**ಕಾಮಪ್ರದಾ ಭಗವತೋಽಪಿ ಕಟಾಕ್ಷಮಾಲಾ**
**ಕಲ್ಯಾಣಮಾವಹತು ಮೇ ಕಮಲಾಲಯಾಯಾಃ ॥ ೪ ॥**

೪. ಮಧುಸೂದನನಾದ ವಿಷ್ಣುವಿನ ತೋಳುಗಳ ನಡುವೆ ಹಾಯ್ದು ಕೌಸ್ತುಭರತ್ನವನ್ನು ಆಶ್ರಯಿಸಿರುವ ಹಸಿರುಮಿಶ್ರವಾದ ಎರಡು ನೀಲಮಣಿಗಳುಳ್ಳ ಯಾವ ಹಾರವು ಹೊಳೆಯುತ್ತಿದೆಯೋ, ಮತ್ತು ಭಗವಂತನ ಹಾಗೂ ಕಮಲವಾಸಿನಿಯಾದ ದೇವಿಯ ಕುಡಿಗಣ್ಣುಗಳ ನೋಟಗಳ ಸಾಲು (ಭಕ್ತರಿಗೆ) ಇಷ್ಟಾರ್ಥಪ್ರದವಾಗಿ ಶೋಭಿಸುತ್ತಿರುವದೋ- ಅದು ಸಹ ನನಗೆ ಕಲ್ಯಾಣವನ್ನುಂಟುಮಾಡಲಿ.

**ಕಾಲಾಂಬುದಾಲಿಲಲಿತೋರಸಿ ಕೈಟಭಾರೇ-**
**ರ್ಧಾರಾಧರಂ ಸ್ಫುರತಿ ಯಾ ತಟಿದಂಗನೇವ ।**
**ಮಾತುಃ ಸಮಸ್ತಜಗತಾಂ ಮಹನೀಯಮೂರ್ತಿಃ**
**ಭದ್ರಾಣಿ ಮೇ ದಿಶತು ಭಾರ್ಗವನಂದನಾಯಾಃ ॥ ೫ ॥**

೫. ಕೈಟಭಶತ್ರುವಾದ (ವಿಷ್ಣುವಿನ) ಕಾಲಮೇಘದಂತೆ ಕಾಂತಿಯುಳ್ಳ ಸುಂದರವಾದ ಎದೆಯಲ್ಲಿ ಮಿಂಚಿನಬಳ್ಳಿಯಂತೆ ಹೊಳೆಯುತ್ತಿರುವ ಖಡ್ಗವಿದೆಯೋ (ಅದರೊಡನೆಯೇ ಎದೆಯಲ್ಲಿ ನೆಲೆಸಿರುವ) ಸಮಸ್ತ ಜಗತ್ತಿಗೂ ತಾಯಿಯಾದ ಮಹಾಶ್ರೇಷ್ಠವಾದ ಭಾರ್ಗವಪುತ್ರಿಯ ದಿವ್ಯರೂಪವು ನನಗೆ ಮಂಗಳವನ್ನುಂಟುಮಾಡಲಿ.

ಪ್ರಾಪ್ತಂ ಪದಂ ಪ್ರಥಮತಃ ಖಲು ಯತ್ಪ್ರಭಾವಾತ್
ಮಾಂಗಲ್ಯಭಾಜಿ ಮಧುಮಾಥಿನಿ ಮನ್ಮಥೇನ ।
ಮಯ್ಯಾಪತೇತ್ತದಿಹ ಮಂದರಮೀಕ್ಷಣಾರ್ಧಂ
ಮಂದಾಲಸಾಕ್ಷಿ ಮಕರಾಕರಕನ್ಯಕಾಯಾಃ ॥ ೬ ॥

೬. ಯಾವ ದೇವಿಯ ಅನುಗ್ರಹದೃಷ್ಟಿಯಿಂದ ಮಧುಸೂದನನಲ್ಲಿ ಸ್ಥಾನವು ಮೊದಲ ಬಾರಿಗೆ ಮಂಗಳಕರವಾಗಿ ಮನ್ಮಥನಿಗೆ ದೊರಕಿತೋ ( ಆ ದೇವಿಯ), ಸಮುದ್ರರಾಜನ ಕನ್ಯೆಯಾದ ಲಕ್ಷ್ಮಿಯ ಕಟಾಕ್ಷವು ಅಲ್ಪವಾಗಿಯಾದರೂ ಮೆಲ್ಲ ಮೆಲ್ಲನೆ ನನ್ನ ಮೇಲೆ ಹರಿಯುವಂತಾಗಲಿ.

ವಿಶ್ವಾಮರೇಂದ್ರಪದವಿಭ್ರಮದಾನದಕ್ಷ-
ಮಾನಂದಹೇತುರಧಿಕಂ ಮಧುವಿದ್ವಿಷೋಽಪಿ ।
ಈಷನ್ನಿಷೀದತು ಮಯಿ ಕ್ಷಣಮೀಕ್ಷಣಾರ್ಧ-
ಮಿಂದೀವರೋದರಸಹೋದರಮಿಂದಿರಾಯಾಃ ॥ ೭ ॥

೭. ಸಮಸ್ತದೇವತಾಶ್ರೇಷ್ಠರ ಪದವಿಗಳೆಂಬ ಸೌಭಾಗ್ಯವನ್ನು ಕೊಡುವದರಲ್ಲಿ ಸಮರ್ಥವಾದ, ಮತ್ತು ಮಧುಸೂದನನಿಗೂ ಹೆಚ್ಚಿನ ಆನಂದಕಾರಣವಾದ , ಕಮಲದ ಗರ್ಭದಂತೆ ಮೃದುವಾದ ಇಂದಿರಾದೇವಿಯ ಕಣ್ಣಿನ ನೋಟದ ಅರ್ಧ ಭಾಗದಲ್ಲಿ ಒಂದಿಷ್ಟಾದರೂ ನನ್ನಲ್ಲಿ ನೆಲೆಗೊಳ್ಳಲಿ.

ಇಷ್ಟಾ ವಿಶಿಷ್ಟಮತಯೋಽಪಿ ನರಾ ಯಯಾ ದ್ರಾಗ್
ದೃಷ್ಟಾಸ್ತ್ರಿವಿಷ್ಟಪಪದಂ ಸುಲಭಂ ಲಭಂತೇ ।
ದೃಷ್ಟಿಃ ಪ್ರಹೃಷ್ಟಕಮಲೋದರದೀಪ್ತಿರಿಷ್ಟಾಂ
ಪುಷ್ಟಿಂ ಕೃಷೀಷ್ಟ ಮಮ ಪುಷ್ಕರವಿಷ್ಟರಾಯಾಃ ॥ ೮ ॥

೮. ವಿಶೇಷವಾದ ಪಾಂಡಿತ್ಯವುಳ್ಳ, (ದೇವಿಗೆ) ಪ್ರಿಯರಾದ ಮನುಷ್ಯರಾದರೂ ಒಮ್ಮೆ ದೇವಿಯ ದೃಷ್ಟಿಗೆ ಪಾತ್ರರಾದದ್ದೇಆದರೆ ಸುಲಭವಾಗಿ ಸ್ವರ್ಗಪದವಿಯನ್ನು ಹೊಂದುವರು. ಅರಳಿದ ಕಮಲದ ಒಳಭಾಗದಂತೆ ಕಾಂತಿಯುಳ್ಳ, ಕಮಲಾಸನೆಯಾದ ದೇವಿಯ ಅಂಥ ದೃಷ್ಟಿಯು ನನಗೆ ಪುಷ್ಟಿಯನ್ನುಂಟುಮಾಡಲಿ.

ದದ್ಯಾದ್ದಯಾನುಪವನೋ ದ್ರವಿಣಾಂಬುಧಾರಾ
ಮಸ್ಮಿನ್ನ ಕಿಂಚನ ವಿಹಂಗಶಿಶೌ ವಿಷಣ್ಣೇ ।
ದುಷ್ಕರ್ಮಘರ್ಮಮಪಹಾಯ ಚಿರಾಯ ದೂರಾ -
ನ್ನಾರಾಯಣಪ್ರಣಯಿನೀನಯನಾಂಬುವಾಹಃ ॥ ೯ ॥

೯. ನಾರಾಯಣನ ಪ್ರಿಯೆಯಾದ ದೇವಿಯ ಕಟಾಕ್ಷಪ್ರವಾಹವು ಕೆಟ್ಟ ಕರ್ಮಗಳೆಂಬ ಬಿಸಿಲನ್ನು ನಿತ್ಯವಾಗಿ ದೂರವಾಗಿ ತೊಡೆದುಹಾಕಿ ವಿಷಾದದಿಂದ ಕೂಡಿರುವ ದರಿದ್ರವೆಂಬ ಪಕ್ಷಿಯ ಮರಿಯಾದ (ನನ್ನಲ್ಲಿ) ದಯೆಯಿಟ್ಟು ಕೃಪೆಯೆಂಬ ಗಾಳಿಯಿಂದ ಪ್ರೇರಿಸಲ್ಪಟ್ಟ ಐಶ್ವರ್ಯವೆಂಬ ಮಳೆಯ ಧಾರೆಯನ್ನುಂಟುಮಾಡಲಿ.

**ಗೀರ್ದೇವತೇತಿ ಗರುಡಧ್ವಜಸುಂದರೀತಿ**
**ಶಾಕಂಭರೀತಿ ಶಶಿಶೇಖರವಲ್ಲಭೇತಿ ।**
**ಸೃಷ್ಟಿಸ್ಥಿತಿಪ್ರಲಯಕೇಲಿಷು ಸಂಸ್ಥಿತಾಯೈ**
**ತಸ್ಯೈ ನಮಸ್ತ್ರಿಭುವನೈಕಗುರೋಸ್ತರುಣ್ಯೈ ॥ ೧೦ ॥**

೧೦. ವಾಗ್ದೇವಿಯೆಂದೂ ಗರುಡಧ್ವಜನಾದ ವಿಷ್ಣುವಿನ ಪ್ರಿಯಳೆಂದೂ ಶಾಕಂಭರಿಯೆಂದೂ ಚಂದ್ರಶೇಖರನಾದ ಶಿವನ ಪತ್ನಿಯೆಂದೂ ಆಯಾ ಕಾಲಕ್ಕೆ ಎಂದರೆ ಸೃಷ್ಟಿ- ಸ್ಥಿತಿ- ಸಂಹಾರಲೀಲೆಗಳಲ್ಲಿ ತೋರಿಕೊಂಡಿರುವವಳಾದ, ಮೂರು ಲೋಕಕ್ಕೂ ಗುರುವಾದ ಶ್ರೀಮನ್ನಾರಾಯಣನ ಮಡದಿಯಾದ ಆಕೆಗೆ ವಂದನೆಗಳು.

**ಶ್ರುತ್ಯೈ ನಮೋಽಸ್ತು ಶುಭಕರ್ಮಫಲಪ್ರಸೂತ್ಯೈ**
**ರತ್ಯೈ ನಮೋಽಸ್ತು ರಮಣೀಯಗುಣಾಶ್ರಯಾಯೈ ।**
**ಶಕ್ತ್ಯೈ ನಮೋಽಸ್ತು ಶತಪತ್ರನಿಕೇತನಾಯೈ**
**ಪುಷ್ಟ್ಯೈ ನಮೋಽಸ್ತು ಪುರುಷೋತ್ತಮವಲ್ಲಭಾಯೈ ॥ ೧೧ ॥**

೧೧. ಶುಭಕರ್ಮಗಳ ಫಲವನ್ನು ಉಂಟುಮಾಡುವ ಶ್ರುತಿರೂಪಳಾದ ದೇವಿಗೆ ನಮಸ್ಕಾರವು. ರಮಣೀಯವಾದ ಗುಣಗಳಿಗೆ ಆಶ್ರಯಳಾದ ರತಿಗೆ ನಮಸ್ಕಾರಗಳು. ಕಮಲನಿವಾಸಿನಿಯಾದ ಶಕ್ತಿರೂಪಳಾದ ಲಕ್ಷ್ಮಿಗೆ ನಮಸ್ಕಾರಗಳು. ಪುರುಷೋತ್ತಮನ ಪತ್ನಿಯಾದ ಪುಷ್ಟಿದೇವಿಗೆ ನಮಸ್ಕಾರಗಳು.

**ನಮೋಽಸ್ತು ನಾಲೀಕನಿಭಾನನಾಯೈ**
**ನಮೋಽಸ್ತು ದುಗ್ಧೋದಧಿಜನ್ಮಭೂಮ್ಯೈ ।**
**ನಮೋಽಸ್ತು ಸೋಮಾಮೃತಸೋದರಾಯೈ**
**ನಮೋಽಸ್ತು ನಾರಾಯಣವಲ್ಲಭಾಯೈ ॥ ೧೨ ॥**

೧೨. ಕಮಲದಂತೆ ಸುಂದರವಾದ ಮುಖವುಳ್ಳ ದೇವಿಗೆ ನಮಸ್ಕಾರ. ಕ್ಷೀರಸಮುದ್ರವನ್ನು ಜನ್ಮಸ್ಥಾನವಾಗಿ ಹೊಂದಿರುವವಳಿಗೆ ನಮಸ್ಕಾರ. ಸಮುದ್ರ ಮಥನಕಾಲದಲ್ಲಿಯೇ (ಲಕ್ಷ್ಮಿಯೊಡನೆ) ಹುಟ್ಟಿದ ಚಂದ್ರ, ಹಾಗೂ ಅಮೃತಗಳಿಗೆ

ಸೋದರಿಯಾದವಳಿಗೆ ನಮಸ್ಕಾರ. ನಾರಾಯಣನ ವಲ್ಲಭೆಗೆ ವಂದನೆಗಳು.

**ನಮೋಽಸ್ತು ಹೇಮಾಂಬುಜಪೀಠಿಕಾಯೈ**
**ನಮೋಽಸ್ತು ಭೂಮಂಡಲನಾಯಿಕಾಯೈ ।**
**ನಮೋಽಸ್ತು ದೇವಾದಿದಯಾಪರಾಯೈ**
**ನಮೋಽಸ್ತು ಶಾರ್ಙ್ಗಾಯುಧವಲ್ಲಭಾಯೈ ॥ ೧೩ ॥**

೧೩. ಸುವರ್ಣಕಮಲಪೀಠವಾಸಿನಿಯಾದ, ಭೂಮಂಡಲಕ್ಕೆಲ್ಲ ಒಡೆಯಳಾದ, ದೇವಾದಿಸಮಸ್ತಜೀವಿಗಳಲ್ಲಿಯೂ ದಯೆಯುಳ್ಳ ಮತ್ತು ಶಾರ್ಙ್ಗವೆಂಬ ಬಿಲ್ಲನ್ನು ಧರಿಸಿರುವ ವಿಷ್ಣುವಿನ ಪತ್ನಿಯಾದ ದೇವಿಗೆ ನಮಸ್ಕಾರಗಳು.

**ನಮೋಽಸ್ತು ದೇವ್ಯೈ ಭೃಗುನಂದನಾಯೈ**
**ನಮೋಽಸ್ತು ವಿಷ್ಣೋರುರಸಿ ಸ್ಥಿತಾಯೈ ।**
**ನಮೋಽಸ್ತು ಲಕ್ಷ್ಮ್ಯೈ ಕಮಲಾಲಯಾಯೈ**
**ನಮೋಽಸ್ತು ದಾಮೋದರವಲ್ಲಭಾಯೈ ॥ ೧೪ ॥**

೧೪. ಭೃಗುಪುತ್ರಿಯಾದ ದೇವಿಗೆ, ವಿಷ್ಣುವಿನ ಹೃದಯವಾಸಿನಿಯಾದವಳಿಗೆ, ಕಮಲನಿವಾಸಿನಿಯಾದ ಲಕ್ಷ್ಮಿಗೆ, ದಾಮೋದರನ ಪತ್ನಿಯಾದ ಮಹಾದೇವಿಗೆ ವಂದನೆಗಳು.

**ನಮೋಽಸ್ತು ಕಾಂತ್ಯೈ ಕಮಲೇಕ್ಷಣಾಯೈ**
**ನಮೋಽಸ್ತು ಭೂತ್ಯೈ ಭುವನಪ್ರಸೂತ್ಯೈ ।**
**ನಮೋಽಸ್ತು ದೇವಾದಿಭಿರರ್ಚಿತಾಯೈ**
**ನಮೋಸ್ತು ನಂದಾತ್ಮಜವಲ್ಲಭಾಯೈ ॥ ೧೫ ॥**

೧೫. ಕಮಲದಂತೆ ಕಂಗಳುಳ್ಳ ಪ್ರಕಾಶಮಾನಳಾದವಳಿಗೂ, ಜಗತ್ತನ್ನು ಹಡೆದಿರುವ ಮಹಿಮಾವಂತಳಿಗೂ ದೇವತೆಗಳೇ ಮೊದಲಾದವರಿಂದ ಪೂಜಿಸಲ್ಪಟ್ಟವಳಿಗೂ ನಂದಗೋಪನ ಮಗಳಾದ ದುರ್ಗೆಗೆ ಪ್ರಿಯಳಾಗಿಯೂ ಇರುವ ಮಹಾಲಕ್ಷ್ಮಿಗೆ ನಮಸ್ಕಾರಗಳು.

**ಸಂಪತ್ಕರಾಣಿ ಸಕಲೇಂದ್ರಿಯನಂದನಾನಿ**
**ಸಾಮ್ರಾಜ್ಯದಾನವಿಭವಾನಿ ಸರೋರುಹಾಣಿ ।**
**ತ್ವದ್ವಂದನಾನಿ ದುರಿತಾಹರಣೋದ್ಯತಾನಿ**
**ಮಾಮೇವ ಮಾತರನಿಶಂ ಕಲಯಂತು ಮಾನ್ಯೇ ॥ ೧೬ ॥**

೧೬. ಸಂಪತ್ತುಗಳನ್ನು ನೀಡುವ, ಎಲ್ಲಾ ಇಂದ್ರಿಯಗಳಿಗೂ ಆನಂದವನ್ನುಂಟುಮಾಡುವ, ಸಾಮ್ರಾಜ್ಯಪದವಿಯನ್ನು ದಯಪಾಲಿಸುವ ನಿನ್ನ ಪಾದಕಮಲಗಳನ್ನು ನಮಸ್ಕರಿಸುವಿಕೆಯು ಸಕಲಪಾಪಗಳನ್ನೂ ಕಳೆಯುವದರಲ್ಲಿ ಮುಂದಾಗಿರುವವು. ಎಲೌ ತಾಯೆ, ಮಾನನೀಯಳೆ, ಆ ವಂದನೆಗಳು ಯಾವಗಲೂ ನನಗೆ ಸಂಭವಿಸುತ್ತಿರಲಿ.

**ಯತ್ಕಟಾಕ್ಷಸಮುಪಾಸನಾವಿಧಿಃ**
**ಸೇವಕಸ್ಯ ಸಕಲಾರ್ಥಸಂಪದಃ ।**
**ಸಂತನೋತಿ ವಚನಾಂಗಮಾನಸೈ-**
**ಸ್ತ್ವಾಂ ಮುರಾರಿಹೃದಯೇಶ್ವರೀಂ ಭಜೇ** ॥ ೧೭ ॥

೧೭. ಯಾವ ದೇವಿಯ ಕುಡಿಗಣ್ಣಿನ ನೋಟದ ಚಿಂತನೆಯು ಸೇವಕನಾದ ಭಕ್ತನಿಗೆ ಸಮಸ್ತ ಇಷ್ಟಾರ್ಥಗಳನ್ನೂ ಕೊಡುವದೋ ಅಂಥ, ಮುರಾರಿಯಾದ ನಾರಾಯಣನ ಹೃದಯೇಶ್ವರಿಯಾದ ನಿನ್ನನ್ನು ಕಾಯೇನ- ಮನಸಾ- ವಾಚಾ (ತ್ರಿಕರಣಗಳಿಂದಲೂ) ಭಜಿಸುವೆನು.

**ಸರಸಿಜನಯನೇ ಸರೋಜಹಸ್ತೇ**
**ಧವಲತಮಾಂಶುಕಗಂಧಮಾಲ್ಯಶೋಭೇ ।**
**ಭಗವತಿ ಹರಿವಲ್ಲಭೇ ಮನೋಜ್ಞೇ**
**ತ್ರಿಭುವನಭೂತಿಕರಿ ಪ್ರಸೀದ ಮಹ್ಯಮ್** ॥ ೧೮ ॥

೧೮. ಕಮಲದಂತೆ ಕಣ್ಣುಳ್ಳವಳೆ, ಕೈಯಲ್ಲಿ ಕಮಲಗಳನ್ನು ಹಿಡಿದಿರುವವಳೆ, ಅತ್ಯಂತಶುಭ್ರವಾದ ವಸ್ತ್ರ, ಗಂಧ, ಹೂಮಾಲೆಗಳಿಂದ ಶೋಭಿಸುತ್ತಿರುವವಳೆ, ಪೂಜ್ಯಳೆ, ಶ್ರೀಹರಿಯ ಪ್ರಿಯಳೆ, ಮನೋಜ್ಞಳೆ, ಮೂರುಲೋಕಗಳ ಐಶ್ವರ್ಯವನ್ನು ಕೊಡುವವಳೆ, ನನಗೆ ಪ್ರಸನ್ನಳಾಗು.

**ದಿಗ್ಹಸ್ತಿಭಿಃ ಕನಕಕುಂಭಮುಖಾವಸೃಷ್ಟ-**
**ಸ್ವರ್ವಾಹಿನೀವಿಮಲಚಾರುಜಲಾಪ್ಲುತಾಂಗೀಮ್ ।**
**ಪ್ರಾತರ್ನಮಾಮಿ ಜಗತಾಂ ಜನನೀಮಶೇಷ-**
**ಲೋಕಾಧಿನಾಥಗೃಹಿಣೀಮಮೃತಾಬ್ಧಿಪುತ್ರೀಮ್** ॥ ೧೯ ॥

೧೯. ದಿಗ್ಗಜಗಳ (ಸೊಂಡಿಲುಗಳಲ್ಲಿರುವ) ಚಿನ್ನದ ಕಲಶಗಳ ಬಾಯಿಂದ ಸುರಿಯಲ್ಪಟ್ಟ ಆಕಾಶಗಂಗೆಯ ದಿವ್ಯಜಲದಿಂದ ತೋಯಿಸಲ್ಪಟ್ಟ ಶರೀರವುಳ್ಳವಳೂ, ಜಗತ್ತಿಗೇ ತಾಯಿಯೂ, ಸಮಸ್ತಲೋಕಗಳೊಡೆಯನಾದ (ವಿಷ್ಣುವಿನ) ಪತ್ನಿಯೂ,

ಅಮೃತಸಮುದ್ರರಾಜನ ಮಗಳೂ ಆದ ದೇವಿಯನ್ನು ನಾನು ಪ್ರಾತಃಕಾಲದಲ್ಲಿ ವಂದಿಸುವೆನು.

**ಕಮಲೇ ಕಮಲಾಕ್ಷವಲ್ಲಭೇ ತ್ವಂ**
**ಕರುಣಾಪೂರತರಂಗಿತೈರಪಾಂಗೈಃ ।**
**ಅವಲೋಕಯ ಮಾಮಕಿಂಚನಾನಾಂ**
**ಪ್ರಥಮಂ ಪಾತ್ರಮಕೃತ್ರಿಮಂ ದಯಾಯಾಃ ॥ ೨೦ ॥**

೨೦ ಎಲೌ ಕಮಲಾದೇವಿಯೆ, ಕಮಲನಯನನಾದ ವಿಷ್ಣುವಿನ ಪ್ರಿಯಳೆ, ನೀನು ಕರುಣೆಯಿಂದ ತುಂಬಿದ ಚಂಚಲವಾದ ಕುಡಿನೋಟಗಳಿಂದ ನನ್ನನ್ನು ನೋಡುವವಳಾಗು. ದರಿದ್ರರಲ್ಲಿ ಮೊದಲಿಗನೂ ದಯೆತೋರಬೇಕಾದವರ ಗುಂಪಿನಲ್ಲಿ ಅರ್ಹನೂ ಕಪಟವಿಲ್ಲದವನೂ ನಾನಾಗಿರುವೆನಷ್ಟೆ?

**ಸ್ತುವಂತಿ ಯೇ ಸ್ತುತಿಭಿರಮೂಭಿರನ್ವಹಂ**
**ತ್ರಯೀಮಯೀಂ ತ್ರಿಭುವನಮಾತರಂ ರಮಾಮ್ ।**
**ಗುಣಾಧಿಕಾ ಗುರುತರಭಾಗ್ಯಭಾಜಿನೋ**
**ಭವಂತಿ ತೇ ಭುವಿ ಬುಧಭಾವಿತಾಶಯಾಃ ॥ ೨೧ ॥**

೨೧. ಯಾರು ಈ ದಿವ್ಯಸ್ತುತಿಗಳಿಂದ ವೇದಮಯಳೂ, ಮೂರು ಲೋಕಗಳ ತಾಯಿಯೂ ಆದ ರಮಾದೇವಿಯನ್ನು ಸ್ತೋತ್ರಮಾಡುವರೋ ಅವರು ಈ ಭೂಲೋಕದಲ್ಲಿ ಗುಣಸಂಪನ್ನರೂ ಅತ್ಯಧಿಕವಾದ ಐಶ್ವರ್ಯಯುಕ್ತರೂ, ವಿದ್ವಾಂಸರಿಂದ ಗೌರವಿಸಲ್ಪಡುವವರೂ ಆಗಿ ಸುಖಿಸುವರು.

## ೨. ನಿರ್ವಾಣದಶಕಸ್ತೋತ್ರ

(ಅಧ್ಯಾತ್ಮಶಂಕರವಿಜಯ, ಪುಟ- ೨೫)

**ನ ಭೂಮಿರ್ನ ತೋಯಂ ನ ತೇಜೋ ನ ವಾಯು-**
**ರ್ನ ಖಂ ನೇಂದ್ರಿಯಂ ವಾ ನ ತೇಷಾಂ ಸಮೂಹಃ ।**
**ಅನೈಕಾಂತಿಕತ್ವಾತ್ ಸುಷುಪ್ತ್ಯೈಕಸಿದ್ಧ-**
**ಸ್ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೧ ॥**

೧. (ನಾನು) ಭೂಮಿಯಲ್ಲ; ನೀರಲ್ಲ; ತೇಜಸ್ಸಲ್ಲ; ವಾಯುವಲ್ಲ; ಆಕಾಶವಲ್ಲ; ಇಂದ್ರಿಯವಲ್ಲ; ಅವುಗಳ ಸಮೂಹವೂ ಅಲ್ಲ; (ಎಚ್ಚರ ಕನಸುಗಳು)

ಒಂದನ್ನು ಬಿಟ್ಟು ಮತ್ತೊಂದು ಅಗಲುವವಾದ್ದರಿಂದ (ಅವುಗಳೂ ನಾನಲ್ಲ) ಆದ್ದರಿಂದ ಗಾಢನಿದ್ರೆಯಲ್ಲಿ (ಅನುಭವಕ್ಕೆ ಬರುವ) ಸಿದ್ಧವಸ್ತುವಾದ, ಒಬ್ಬನೇ ಆಗಿ ಉಳಿಯುವ ಕೇವಲನೂ ಮಂಗಳಸ್ವರೂಪನೂ ಆದ (ಬ್ರಹ್ಮವೇ) ನಾನಾಗಿರುವೆನು.

**ನ ವರ್ಣಾ ನ ವರ್ಣಾಶ್ರಮಾಚಾರಧರ್ಮಾ**
**ನ ಮೇ ಧಾರಣಾಧ್ಯಾನಯೋಗಾದಯೋಽಪಿ ।**
**ಅನಾತ್ಮಾಶ್ರಯಾಹಂಮಮಾಧ್ಯಾಸಹಾನಾ-**
**ತ್ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೨ ॥**

೨. ನಾನು ವರ್ಣವಲ್ಲ; ವರ್ಣಾಶ್ರಮಾಚಾರಧರ್ಮಗಳೂ ಅಲ್ಲ; ಆದ್ದರಿಂದ ನನಗೆ ಧಾರಣ, ಧ್ಯಾನ, ಯೋಗ-ವೇ ಮುಂತಾದಗಳಿಲ್ಲ. ಅನಾತ್ಮವನ್ನು ಆಶ್ರಯಿಸಿಕೊಂಡಿರುವ ನಾನು, ನನ್ನದೆಂಬ ತಪ್ಪು ತಿಳಿವು ತೊಲಗಲಾಗಿ ಉಳಿಯುವ ಕೇವಲ ಶಿವನೇ ನಾನಾಗಿರುವೆನು.

**ನ ಮಾತಾ ಪಿತಾ ವಾ ನ ದೇವಾ ನ ಲೋಕಾ**
**ನ ವೇದಾ ನ ಯಜ್ಞಾ ನ ತೀರ್ಥಂ ಬ್ರುವಂತಿ ।**
**ಸುಷುಪ್ತೌ ನಿರಸ್ತಾತಿಶೂನ್ಯಾತ್ಮಕತ್ವಾ -**
**ತ್ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೩ ॥**

೩. (ನಾನು) ತಾಯಿಯಲ್ಲ; ತಂದೆಯಲ್ಲ; ದೇವತೆಗಳಲ್ಲ; ಲೋಕಗಳಲ್ಲ; ವೇದಗಳಲ್ಲ; ಯಜ್ಞಗಳಲ್ಲ; ತೀರ್ಥವೂ ಅಲ್ಲವೆನ್ನುವರು. (ಆದ್ದರಿಂದ) ಗಾಢನಿದ್ರೆಯಲ್ಲಿ (ಕಂಡುಬರುವಂತೆ ಎಲ್ಲಾ ದ್ವೈತ) ಶೂನ್ಯವೂ ನಿರಸ್ತವಾದ ವಿಶೇಷವೂ ಆಗಿರುವ ಕೇವಲನಾಗಿ ಉಳಿಯುವ ಶಿವನೇ ನಾನಾಗಿರುವೆನು.

**ನ ಸಾಂಖ್ಯಂ ನ ಶೈವಂ ನ ತತ್ ಪಾಂಚರಾತ್ರಂ**
**ನ ಜೈನಂ ನ ಮೀಮಾಂಸಕಾದೇರ್ಮತಂ ವಾ ।**
**ವಿಶಿಷ್ಟಾನುಭೂತ್ಯಾ ವಿಶುದ್ಧಾತ್ಮಕತ್ವಾತ್**
**ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೪ ॥**

೪. ನಾನು ಸಾಂಖ್ಯದರ್ಶನಪ್ರತಿಪಾದ್ಯವಾದ ತತ್ತ್ವವಲ್ಲ. ಹಾಗೆಯೇ ಶೈವ, ಪಾಂಚರಾತ್ರ, ಜೈನ, ಮೀಮಾಂಸಕಾದಿಗಳ ದರ್ಶನಗಳಂತೆ ಪ್ರತಿಪಾದ್ಯನಾದವನೂ ಅಲ್ಲ, ಏಕೆಂದರೆ ಅಸಾಧಾರಣವಾದ ಸಾರ್ವತ್ರಿಕಪೂರ್ಣಾನುಭವಸಿದ್ಧವಾದ ನಿರ್ಣಯದಂತೆ ವಿಶುದ್ಧವಾದ ಆತ್ಮನಾಗಿರುವದರಿಂದ ಅದೊಂದೇ ಆಗಿ ಉಳಿದಿರುವ ಕೇವಲನಾದ ಶಿವನೇ ನಾನಾಗಿರುವೆನು.

ನ ಚೋರ್ಧ್ವಂ ನ ಚಾಧೋ ನ ಚಾನ್ತರ್ನ ಬಾಹ್ಯಂ
ನ ಮಧ್ಯಂ ನ ತಿರ್ಯಙ್ ನ ಪೂರ್ವಾಪರಾ ದಿಕ್ ।
ವಿಯದ್ವ್ಯಾಪಕತ್ವಾದಖಂಡೈಕರೂಪಂ
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೫ ॥

೫. ನಾನು ಮೇಲಲ್ಲ ; ಕೆಳಗಲ್ಲ ; ಒಳಗಲ್ಲ; ಹೊರಗಲ್ಲ ; ಮಧ್ಯವೂ ಅಲ್ಲ. ಅಡ್ಡಡ್ಡವೂ ಅಲ್ಲ. ಹಾಗೆಯೇ ಪೂರ್ವವಲ್ಲ; ಪಶ್ಚಿಮವಲ್ಲ. ಆಕಾಶವನ್ನೆಲ್ಲ ವ್ಯಾಪಿಸಿರುವದರಿಂದ ಕಡಿವಡೆಯದ ಏಕರೂಪವಾದ ತಾನೊಂದೇ ಆಗಿ ಉಳಿದಿರುವ ಕೇವಲ ಶಿವನು ನಾನಾಗಿರುವೆನು.

ನ ಶುಕ್ಲಂ ನ ಕೃಷ್ಣಂ ನ ರಕ್ತಂ ನ ಪೀತಂ
ನ ಕುಬ್ಜಂ ನ ಪೀನಂ ನ ಹ್ರಸ್ವಂ ನ ದೀರ್ಘಮ್ ।
ಅರೂಪಂ ತಥಾ ಜ್ಯೋತಿರಾಕಾರವತ್ವಾತ್
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೬ ॥

೬. ನಾನು ಬಿಳುಪಲ್ಲ; ಕಪ್ಪಲ್ಲ; ಕೆಂಪಲ್ಲ; ಹಳದಿಯಲ್ಲ; ಕುಳ್ಳಲ್ಲ; ದಪ್ಪವಲ್ಲ; ಮೋಟನಲ್ಲ; ಉದ್ದವೂ ಅಲ್ಲ ; ಅರೂಪನು. ಹಾಗೂ ಆಕಾರವುಳ್ಳ ಬೆಳಕಾಗಿಯೂ ಇರುವೆನು. ತಾನೊಂದೇ ಆಗಿ ಉಳಿದಿರುವ ಕೇವಲ ಶಿವನು ನಾನು.

ನ ಶಾಸ್ತಾ ನ ಶಾಸ್ತ್ರಂ ನ ಶಿಷ್ಯೋ ನ ಶಿಕ್ಷಾ
ನ ಚ ತ್ವಂ ನ ಚಾಹಂ ನ ಚಾಯಂ ಪ್ರಪಂಚಃ ।
ಸ್ವರೂಪಾವಬೋಧೋ ವಿಕಲ್ಪಾಸಹಿಷ್ಣು-
ಸ್ತದೇಕೋಽವಶಿಷ್ಟಃ ಶಿವಃ ಕೇವಲೋಹಮ್ ॥ ೭ ॥

೭. ನಾನು ಗುರುವಲ್ಲ ; ಶಾಸ್ತ್ರವಲ್ಲ ; ಶಿಷ್ಯನಲ್ಲ ; ಶಿಕ್ಷೆ (ವಿದ್ಯೆ)ಯೂ ಅಲ್ಲ. ನೀನಲ್ಲ ; ನಾನೆಂಬವನೂ ಅಲ್ಲ; ಈ ಪ್ರಪಂಚವೂ ಅಲ್ಲ. ನಾನು ದ್ವೈತವನ್ನು ಸಹಿಸದ ತಾನೇ ಆಗಿರುವ ಜ್ಞಪ್ತಿಸ್ವರೂಪನು. ಅದೊಂದೇ ಆಗಿರುವ ಕೇವಲ ಶಿವನೇ ನಾನು.

ನ ಜಾಗ್ರನ್ನ ಮೇ ಸ್ವಪ್ನಕೋ ವಾ ಸುಷುಪ್ತಿಃ
ನ ವಿಶ್ವೋ ನ ವಾ ತೈಜಸಃ ಪ್ರಾಜ್ಞಕೋ ವಾ ।
ಅವಿದ್ಯಾತ್ಮಕತ್ವಾತ್ ತ್ರಯಾಣಾಂ ತುರೀಯಂ
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೮ ॥

೮. ನನಗೆ ಎಚ್ಚರದ ಅವಸ್ಥೆಯಿಲ್ಲ ; ಸ್ವಪ್ನವೂ ಇಲ್ಲ ; ಸುಷುಪ್ತಿಯಾದರೂ ಎಲ್ಲಿದ್ದೀತು? ಹಾಗೆಯೇ ನಾನು ವಿಶ್ವನಲ್ಲ ; ತೈಜಸನಲ್ಲ ; ಪ್ರಾಜ್ಞನೂ ಅಲ್ಲ; ಈ

ಮೂವರೂ ಅವಿದ್ಯಾಕಲ್ಪಿತರಾಗಿರುವದರಿಂದ (ಇವರುಗಳ ಅಪೇಕ್ಷೆಯಿಂದ) ನಾನು (ಮಾಯಾಸಂಖ್ಯೆಯ) ನಾಲ್ಕನೆಯವನು. ಆದ್ದರಿಂದ ತಾನೊಂದೇ ಆಗಿ ಉಳಿದಿರುವ ಕೇವಲ ಶಿವನೇ ನಾನು.

**ಅಪಿ ವ್ಯಾಪಕತ್ವಾದ್ಧಿ ತತ್ತ್ವಪ್ರಯೋಗಾತ್**
**ಸ್ವತಃಸಿದ್ಧಭಾವಾದನನ್ಯಾಶ್ರಯತ್ವಾತ್ ।**
**ಜಗತ್ತುಚ್ಛಮೇತತ್ಸಮಸ್ತಂ ತದನ್ಯ-**
**ಸ್ತದೇಕೋ;ವಶಿಷ್ಟಃ ಶಿವಃ ಕೇವಲೋಽಹಮ್ ॥೯॥**

೯. (ನಾನು) ವ್ಯಾಪಕನೂ ತತ್ತ್ವಸ್ವರೂಪನೂ ಸ್ವತಃಸಿದ್ಧನಾದವನೂ ಬೇರೊಂದನ್ನಾಶ್ರಯಿಸದಿರುವವನೂ ಆಗಿದ್ದು ತನಗಿಂತ ಉಳಿದ ಸಮಸ್ತ ಜಗತ್ತೂ ತುಚ್ಛ (ಮಿಥ್ಯೆ)ಯಾಗಿರುವದರಿಂದ ತಾನೊಂದೇ ಆಗಿ ಉಳಿದರುವ ಕೇವಲ ಶಿವನು ನಾನಾಗಿರುವೆನು.

**ನ ಚೈಕಂ ತದನ್ಯತ್ ದ್ವಿತೀಯಂ ಕುತಃ ಸ್ಯಾತ್**
**ನ ವಾ ಕೇವಲತ್ವಂ ನ ಚಾಕೇವಲತ್ವಮ್ ।**
**ನ ಶೂನ್ಯಂ ನ ಚಾಶೂನ್ಯಮದ್ವೈತಕತ್ವಾತ್**
**ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೧೦॥**

೧೦. ಅದು ಒಂದೆಂಬುದೇ ಅಲ್ಲ ; ಆದ್ದರಿಂದ ಅದಕ್ಕಿಂತ ಬೇರೆಯಾದ ಎರಡನೆಯದೆಲ್ಲಿದ್ದೀತು? ಅದರಲ್ಲಿ ಕೇವಲತ್ವ (ಒಂದೇ ಇರುವಿಕೆ)ವಾಗಲಿ, ಅಕೇವಲತ್ವವಾಗಲಿ (ನಾನಾತ್ವವಾಗಲಿ) ಇಲ್ಲ. ಅದು ಶೂನ್ಯವಲ್ಲ ; ಶೂನ್ಯವಲ್ಲದ್ದೂ ಅಲ್ಲ; ಏಕೆಂದರೆ ಅದು ಅದ್ವೈತವು. ಹೀಗೆ ತಾನೊಂದೇ ಉಳಿದಿರುವ ಕೇವಲ ಶಿವನೇ ನಾನು.

## ೩. ಮನೀಷಾಪಂಚಕ

(ಅಧ್ಯಾತ್ಮಶಂಕರವಿಜಯ, ಪುಟ-೨೯,೩೦)

**ಸತ್ಯಾಚಾರ್ಯಸ್ಯ ಗಮನೇ ಕದಾಚಿನ್ಮುಕ್ತಿದಾಯಕಮ್**
**ಕಾಶೀಕ್ಷೇತ್ರಂ ಪ್ರತಿ ಸಹ ಗೌರ್ಯಾ ಮಾರ್ಗೇ ತು ಶಂಕರಮ್**
**॥೧॥**

**ಅಂತ್ಯವೇಷಧರಂ ದೃಷ್ಟ್ವಾ ಗಚ್ಛ ಗಚ್ಛೇತಿ ಚಾಬ್ರವೀತ್ ।**
**ಶಂಕರಃ ಸೋಽಪಿ ಚಾಂಡಾಲಸ್ತಂ ಪುನಃ ಪ್ರಾಹ ಶಂಕರಮ್**
**॥ ೨ ॥**

೧-೨ ಒಮ್ಮೆ ಮುಕ್ತಿಪ್ರದವಾದ ಕಾಶೀಕ್ಷೇತ್ರವನ್ನು ಕುರಿತು ಆಚಾರ್ಯರು ಹೋಗುತ್ತಿರುವಲ್ಲಿ ದಾರಿಯಲ್ಲಿ ಪಾರ್ವತಿಯೊಡನೆ ಇದ್ದ ಪರಮೇಶ್ವರನನ್ನು ಅಂತ್ಯಜನ ವೇಷದಲ್ಲಿದ್ದುದನ್ನು ಕಂಡು 'ದೂರ ಹೋಗು ! ಹೋಗು!' ಎಂದರು. ಚಾಂಡಾಲರೂಪದಲ್ಲಿದ್ದ ಆ ಮಹಾದೇವನು ಕೂಡ ಶಂಕರಾಚಾರ್ಯರನ್ನು ಕುರಿತು ಹೀಗೆಂದನು.

**ಅನ್ನಮಯಾದನ್ನಮಯಮಥವಾ ಚೈತನ್ಯಮೇವ ಚೈತನ್ಯಾತ್ ।**
**ದ್ವಿಜವರ ದೂರೀಕರ್ತುಂ ವಾಂಛಸಿ ಕಿಂ ಬ್ರೂಹಿ ಗಚ್ಛ ಗಚ್ಛೇತಿ**
**॥ ೩ ॥**

೩. ಎಲೈ ಬ್ರಾಹ್ಮಣಶ್ರೇಷ್ಠನೆ, ಅನ್ನಮಯವಾದ ಶರೀರವನ್ನು ಅನ್ನಮಯ ಶರೀರದ ದೆಸೆಯಿಂದ ದೂರಮಾಡಲು, ಅಥವಾ ಚೈತನ್ಯವನ್ನೇ ಚೈತನ್ಯದಿಂದ ದೂರಮಾಡಲು ಹೋಗು- ಹೋಗು- ಎಂದು ಹೇಳಬಯಸುತ್ತಿರುವೆಯೊ? ಹೇಗೆ? ಏನೆಂದು ಹೇಳುವವನಾಗು.

**ಕಿಂ ಗಂಗಾಂಬುನಿ ಬಿಂಬಿತೇಂಬರಮಣೌ**
**ಚಂಡಾಲವಾಟೀಪಯಃ-**
**ಪೂರೇ ಚಾಂತರಮಸ್ತಿ ಕಾಂಚಘಟೀ ಮೃತ್ಕುಂಭಯೋರ್ವಾಂತರೇ।**
**ಪ್ರತ್ಯಗ್ವಸ್ತುನಿ ನಿಸ್ತರಂಗಸಹಜಾನಂದಾವಬೋಧಾಂಬುಧೌ**
**ವಿಪ್ರೋಽಯಂ ಶ್ವಪಚೋಽಯಮಿತ್ಯಪಿ ಮಹಾನ್ ಕೋಽಯಂ**
**ವಿಭೇದಭ್ರಮಃ ॥ ೪ ॥**

೪. ಗಂಗೆಯ ನೀರಿನಲ್ಲಿಯೂ ಚಂಡಾಲರ ಕೇರಿಯಲ್ಲಿರುವ ಬಾವಿಯ ನೀರಿನಲ್ಲಿಯೂ ಸೂರ್ಯನ ಪ್ರತಿಬಿಂಬವು ಬಿದ್ದಿರಲಾಗಿ ಅವುಗಳಲ್ಲಿ ತಾರತಮ್ಯ ವಿದ್ದೀತೆ? ಹಾಗೆಯೇ ಚಿನ್ನದ ಕೊಡದಲ್ಲಿಯೂ ಮಣ್ಣಿನಗಡಿಗೆ ಯಲ್ಲಿಯೂ ಒಂದೇ ರೀತಿಯಾಗಿ ತೋರುವ ಆಕಾಶದಲ್ಲಿ ತಾರತಮ್ಯವುಂಟೆ ? ಹಾಗೆಯೇ ಅಲೆ (ದ್ವೈತ)ಗಳಿಲ್ಲದ ಸಹಜವಾದ ಆನಂದಜ್ಞಾನಸಮುದ್ರವೆನಿಸಿರುವ ಪ್ರತ್ಯಗಾತ್ಮ ಸ್ವರೂಪದಲ್ಲಿ 'ಇವನು ಬ್ರಾಹ್ಮಣನು, ಇವನು ಚಂಡಾಲನು' ಎಂಬೀ ಹೆಚ್ಚಿನದಾದ ಭ್ರಾಂತಿಯು ಏನಿದು? ಸರಿಯೆ?

**ಜಾಗ್ರತ್ಸ್ವಪ್ನಸುಷುಪ್ತಿಷು ಸ್ಫುಟತರಾ ಯಾ ಸಂವಿದುಜ್ಜೃಂಭತೇ ।**
**ಯಾ ಬ್ರಹ್ಮಾದಿಪಿಪೀಲಿಕಾಂತತನುಷು ಪ್ರೋತಾ ಜಗತ್ಸಾಕ್ಷಿಣೀ ॥**
**ಸೈವಾಹಂ ನ ಚ ದೃಶ್ಯವಸ್ತ್ವಿತಿ ದೃಢಪ್ರಜ್ಞಾಪಿ ಯಸ್ಯಾಸ್ತಿ ಚೇತ್**
**ಚಾಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿತ್ಯೇಷಾ**
**ಮನೀಷಾ ಮಮ ॥ ೫ ॥**

೫. (ಆಗ ಆಚಾರ್ಯರಿಂತೆಂದರು) : ಎಚ್ಚರ, ಕನಸು, ನಿದ್ರೆಗಳಲ್ಲಿ ಯಾವ ಚೈತನ್ಯವು ಎದ್ದು ಕಾಣುವದೋ ಹಾಗೂ ಯಾವ ಅದು ಬ್ರಹ್ಮನಿಂದ ಹಿಡಿದು ಇರುವೆಯವರೆಗಿನ ಶರೀರಗಳಲ್ಲೆಲ್ಲ ಹಾಸುಹೊಕ್ಕಾಗಿ ಹೆಣೆದುಕೊಂಡು ಜಗತ್ತನ್ನೆಲ್ಲ ತಾನು ಸಾಕ್ಷಿಯಾಗಿ ನೋಡುತ್ತಿರುವದೋ ಆ ಚೈತನ್ಯವೇ ನಾನು, ದೃಶ್ಯವಾದ ವಸ್ತುವಲ್ಲ. - ಎಂಬ ನಿಶ್ಚಯವಾದ ತಿಳಿವಳಿಕೆಯು ಯಾವನಿಗೇ ಆಗಲಿ ಇದ್ದುಕೊಂಡಿದೆಯಾದರೆ ಅವನು ಚಾಂಡಾಲನಾಗಿರಲಿ, ಬ್ರಾಹ್ಮಣನಾಗಿರಲಿ - ನನ್ನ ಗುರುವೇ ಸರಿ- ಎಂಬುದು ನನ್ನ ಬುದ್ಧಿನಿಶ್ಚಯವು.

**ಬ್ರಹ್ಮೈವಾಹಮಿದಂ ಜಗಚ್ಚ ಸಕಲಂ ಚಿನ್ಮಾತ್ರವಿಸ್ತಾರಿತಂ**
**ಸರ್ವಂ ಚೈತದವಿದ್ಯಯಾ ತ್ರಿಗುಣಯಾ ಶೇಷಂ ಮಯಾ ಕಲ್ಪಿತಮ್ ।**
**ಇತ್ಥಂ ಯಸ್ಯ ದೃಢಾ ಮತಿಃ ಸುಖತರೇ ನಿತ್ಯೇ ಪರೇ ನಿರ್ಮಲೇ**
**ಚಾಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿತ್ಯೇಷಾ ಮನೀಷಾ ಮಮ ॥ ೬ ॥**

೬. ಇದೆಲ್ಲವೂ ನಾನೂ ಬ್ರಹ್ಮವೇ, ಚಿತ್ತೊಂದೇ ಹಾಗೆ ಹರಡಿಕೊಂಡಿದೆ. ಇದೆಲ್ಲವೂ ತ್ರಿಗುಣಾತ್ಮಕವಾದ ಅವಿದ್ಯೆಯಿಂದ ಶೇಷವಾಗಿ (ಎಂದರೆ ಬ್ರಹ್ಮಕ್ಕೆ ಅಧೀನವಾಗಿ) ಕಲ್ಪಿತವಾಗಿದೆ. ಹೀಗೆಂದು ಯಾವನಿಗೆ ನಿತ್ಯವೂ ಪರವೂ ನಿರ್ಮಲವೂ ಆದ ಬ್ರಹ್ಮದಲ್ಲಿ ದೃಢಬುದ್ಧಿಯುಂಟಾಗುವದೋ ಅವನು ಚಾಂಡಾಲನಾಗಲಿ, ಬ್ರಾಹ್ಮಣನಾಗಲಿ ನನ್ನ ಗುರುವೆಂದೇ ನಿಶ್ಚಯಿಸಿರುವೆನು.

**ಶಶ್ವನ್ನಶ್ವರಮೇವ ವಿಶ್ವಮಖಿಲಂ ನಿಶ್ಚಿತ್ಯ ವಾಚಾ ಗುರೋ-**
**ರ್ನಿತ್ಯಂ ಬ್ರಹ್ಮ ನಿರಂತರಂ ವಿಮೃಶತಾ ನಿರ್ವ್ಯಾಜಶಾಂತಾತ್ಮನಾ ।**
**ಭೂತಂ ಭಾವಿ ಚ ದುಷ್ಕೃತಂ ಪ್ರದಹತಾ ಸಂವಿನ್ಮಯೇ ಪಾವಕೇ**
**ಪ್ರಾರಬ್ಧಾಯ ಸಮರ್ಪಿತಂ ಸ್ವವಪುರಿತ್ಯೇಷಾ ಮನೀಷಾ ಮಮ ॥ ೭॥**

೭. ಈ ಜಗತ್ತೆಲ್ಲವೂ ನಿತ್ಯವಾಗಿ ವಿನಾಶವುಳ್ಳದ್ದೇ- ಎಂಬಿದನ್ನು ಗುರುವಾಕ್ಯದಿಂದ ನಿಶ್ಚಯಿಸಿ ಯಾವಾಗಲೂ ಭೇದರಹಿತವಾಗಿರುವ ಬ್ರಹ್ಮವನ್ನು ಕಪಟವಿಲ್ಲದ ಶಾಂತವಾದ ಮನಸ್ಸಿನಿಂದ ವಿಮರ್ಶೆಮಾಡುತ್ತಾ ಜ್ಞಾನವೆಂಬ ಅಗ್ನಿಯಲ್ಲಿ ಹಿಂದಿನ, ಮುಂದಿನ ಪಾಪಗಳೆಲ್ಲವನ್ನೂ ಸುಡುತ್ತಿರುವನಾಗಿ ಈ ದೇಹವು ಪ್ರಾರಬ್ಧಕರ್ಮಕ್ಕೆ ಅರ್ಪಿಸಲ್ಪಟ್ಟಿದೆ- ಎಂದರಿತಿರುವವನನ್ನು ನನ್ನ ಗುರುವೆಂದೇ ತಿಳಿದಿರುವೆನು.

**ಯಾ ತಿರ್ಯಙ್‍ನರದೇವತಾಭಿರಹಮಿತ್ಯಂತಃಸ್ಫುಟಾ ಗೃಹ್ಯತೇ**
**ಯದ್ಭಾಸಾ ಹೃದಯಾಕ್ಷದೇಹವಿಷಯಾ ಭಾಂತಿ**
**ಸ್ವತೋऽಚೇತನಾಃ।**
**ತಾ ಭಾಸ್ಯೈಃ ಪಿಹಿತಾರ್ಕಮಂಡಲನಿಭಾಂ ಸ್ಫೂರ್ತಿಂ ಸದಾ**
**ಭಾವಯನ್**
**ಯೋಗೀ ನಿರ್ವೃತಮಾನಸೋ ಹಿ ಗುರುರಿತ್ಯೇಷಾ ಮನೀಷಾ**
**ಮಮ ॥ ೮ ॥**

೮. ಯಾವದು ಮೂಕಪ್ರಾಣಿಗಳು, ಮನುಷ್ಯರು ದೇವತೆಗಳು - ಎಲ್ಲರಿಂದಲೂ 'ನಾನು' ಎಂದು ಒಳಗೆ ಸ್ಪಷ್ಟವಾಗಿ ಗ್ರಹಿಸಲ್ಪಡುತ್ತಿದೆಯೋ ಯಾವದರ ಬೆಳಕಿನಿಂದಲೇ ಹೃದಯ, ಇಂದ್ರಿಯ, ದೇಹವಿಷಯಗಳಾದ ವಸ್ತುಗಳು ಸ್ವತಃ ಅಚೇತನಾಗಳಾಗಿದ್ದರೂ- ಹೊಳೆಯುತ್ತಿವೆಯೋ ಆ ಚೇತನವೂ ಭಾಸ್ಯಗಳಾದ ವಸ್ತುಗಳಿಂದ - ಮೋಡಗಳಿಂದ ಸೂರ್ಯಮಂಡಲವು ಮರೆಯಾದಂತೆ- ಮರೆಯಾಗಿರುವದೆಂದು ಯಾವಾಗಲೂ ಭಾವಿಸುತ್ತಾ ವೈರಾಗ್ಯಮಯವಾದ ಅಂತಃಕರಣದಿಂದ ಕೂಡಿದವನಾದ ಯಾವ ಯೋಗಿಯಿರುವನೋ ಅವನೇ ನನ್ನ ಗುರುವು- ಎಂಬಿದು ನನ್ನ ನಿಶ್ಚಯವು.

**ಯತ್ಸೌಖ್ಯಾಂಬುಧಿಲೇಶಲೇಶತ ಇಮೇ ಶಕ್ರಾದಯೋ ನಿರ್ವೃತಾಃ**
**ಯಚ್ಚಿತ್ತೇ ನಿತರಾಂ ಪ್ರಶಾಂತಕಲನೇ ಲಬ್ಧ್ವಾ ಮುನಿರ್ನಿರ್ವೃತಃ।**
**ಯಸ್ಮಿನ್ ನಿತ್ಯಸುಖಾಂಬುಧೌ ಗಲಿತಧೀರ್ಬ್ರಹ್ಮೈವ ನ ಬ್ರಹ್ಮವಿತ್**
**ಯಃ ಕಶ್ಚಿತ್ ಸ ಸುರೇಂದ್ರವಂದಿತಪದೋ ನೂನಂ ಮನೀಷಾ**
**ಮಮ ॥**

೯. ಯಾವ ಸುಖಸಾಗರದ ತುಣುಕಿನ ತುಣುಕಿನಿಂದ ಈ ಇಂದ್ರಾದಿ ದೇವತೆಗಳು ಸೃಷ್ಟಿಸಲ್ಪಟ್ಟಿರುವರೋ ಅಲುಗಾಡದ ಪ್ರಶಾಂತವಾದ ಯಾವ (ಬ್ರಹ್ಮದಲ್ಲಿ) ಎಂದೆಂದಿಗೂ ನೆಲೆಯನ್ನು ಪಡೆದು ಮುನಿಯು ಶಾಂತನಾಗಿರುವನೋ ಯಾವ ನಿತ್ಯವಾದ ಸುಖಸಮುದ್ರದಲ್ಲಿ ಮುಳುಗಿದ ಬುದ್ಧಿಯುಳ್ಳವನಾದವನು ಬ್ರಹ್ಮವೆನಿಸಿಬಿಡುವನೋ ಬ್ರಹ್ಮವನ್ನು ಬಲ್ಲವನು- ಎಂದೆನಿಸಲಾರನೋ ಯಾವನಾದರೊಬ್ಬನೇ ಆಗಲಿ- ದೇವೇಂದ್ರನಿಂದ ನಮಸ್ಕರಿಸಲ್ಪಟ್ಟ ಪಾದವುಳ್ಳವನೋ ಅವನು ಗುರುವೆಂದು ನನ್ನ ನಿಶ್ಚಯವು.

---

## ೪. ಲಕ್ಷ್ಮೀನರಸಿಂಹಸ್ತೋತ್ರ

(ಆಧ್ಯಾತ್ಮಶಂಕರವಿಜಯ, ಪುಟ - ೭೦)

**ಶ್ರೀಮತ್ಪಯೋನಿಧಿನಿಕೇತನ ಚಕ್ರಪಾಣೇ**
**ಭೋಗೀಶ ಭೋಗಮಣಿರಂಜಿತ ಪುಣ್ಯಮೂರ್ತೇ ।**
**ಯೋಗೀಶ ಶಾಶ್ವತ ಶರಣ್ಯ ಭವಾಬ್ಧಿಪೋತ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥೧॥**

೧. ಕ್ಷೀರಸಾಗರವನ್ನು ವಾಸಸ್ಥಾನವಾಗಿ ಮಾಡಿಕೊಂಡವನೆ, ಚಕ್ರಧಾರಿಯೆ, ಹಾವುಗಳೊಡೆಯನಾದ ಆದಿಶೇಷನ ಹೆಡೆಯಲ್ಲಿರುವ ರತ್ನಮಣಿಯಿಂದ ಅಲಂಕೃತನಾದವನೆ, ಪುಣ್ಯಮೂರ್ತಿಯೆ, ಯೋಗೀಶ್ವರನೆ, ಶಾಶ್ವತನೆ, ಶರಣ್ಯನೆ, ಸಂಸಾರಸಾಗರವನ್ನು ದಾಟಿಸುವ ತೆಪ್ಪದಂತಿರುವವನೆ, ಎಲೈ ಲಕ್ಷ್ಮೀನರಸಿಂಹನೆ, ನನಗೆ ಕರಾವಲಂಬನವನ್ನು (ನಿನ್ನ ಕೈಗಳಿಂದ ಹಿಡಿದು ಆಶ್ರಯವನ್ನು) ದಯ ಪಾಲಿಸುವವನಾಗು.

**ಬ್ರಹ್ಮೇಂದ್ರರುದ್ರಮರುದರ್ಕಕಿರೀಟಕೋಟಿ-**
**ಸಂಘಟ್ಟಿತಾಂಘ್ರಿಕಮಲಾರುಣಕಾಂತಿಕಾಂತ ।**
**ಲಕ್ಷ್ಮೀಲಸತ್ಕುಚಸರೋರುಹರಾಜಹಂಸ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೨ ॥**

೨. ಬ್ರಹ್ಮ, ಇಂದ್ರ, ರುದ್ರ, ಮರುದ್ದೇವತೆಗಳು, ಸೂರ್ಯನೇ ಮೊದಲಾದ ದೇವತೆಗಳು ನಾನು ಮುಂದು, ತಾನು ಮುಂದು ಎಂದು ನಮಸ್ಕರಿಸಲು ಮುನ್ನುಗ್ಗಿ ಬಾಗಿದಾಗ ಅವರುಗಳ ಕಿರೀಟಗಳು ಒಂದಕ್ಕೊಂದು ತಗಲಿ ಅದರಿಂದುಂಟಾದ ಕೆಂಪಿನಿಂತ ನಸುಗೆಂಪಾದ ಸ್ವಚ್ಛವಾದ ಪಾದಗಳುಳ್ಳ ತೇಜೋಮಯನೆ, ಮತ್ತು ಲಕ್ಷ್ಮೀದೇವಿಯ ವಿರಾಜಮಾನವಾದ ಕುಚಗಳೆಂಬ ಸರೋವರಕ್ಕೆ ರಾಜಹಂಸ ದಂತಿರುವವನೆ, ಲಕ್ಷ್ಮೀನೃಸಿಂಹನೆ, ನನಗೆ ಕರಾವಲಂಬನವನ್ನು ನೀಡುವವನಾಗು.

**ಸಂಸಾರಘೋರಗಹನೇ ಚರತೋ ಮುರಾರೇ**
**ಮಾರೋಗ್ರಭೀಕರಮೃಗಪ್ರವರಾರ್ದಿತಸ್ಯ ।**
**ಆರ್ತಸ್ಯ ಮತ್ಸರನಿದಾಘನಿಪೀಡಿತಸ್ಯ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೩ ॥**

೩. ಎಲೌ ಮುರಾರಿಯೆ, ಸಂಸಾರವೆಂಬ ಭಯಂಕರವಾದ ದಟ್ಟವಾದ ಕಾಡಿನಲ್ಲಿ ಓಡಾಡುತ್ತಿರುವನಾದ ಹಾಗೂ ಕಾಮವೆಂಬ ಉಗ್ರನೂ ಕ್ರೂರನೂ ಆದ

ಮೃಗಶ್ರೇಷ್ಠನಿಂದ ಹೊಡೆಯಲ್ಪಟ್ಟು ಆರ್ತನಾಗಿರುವ, ಮತ್ತು ಮಾತ್ಸರ್ಯವೆಂಬ ಬೇಸಗೆಯ ಬೇಗೆಯಿಂದ ಪೀಡಿಸಲ್ಪಟ್ಟಿರುವ ನನಗೆ ಎಲೈ, ಲಕ್ಷ್ಮೀನರಸಿಂಹನೆ, ಕರಾವಲಂಬನವನ್ನು ನೀಡುವವನಾಗು.

**ಸಂಸಾರಕೂಪಮತಿಘೋರಮಗಾಧಮೂಲಂ**
**ಸಂಪ್ರಾಪ್ಯ ದುಃಖಶತಸರ್ಪಸಮಾಕುಲಸ್ಯ ।**
**ದೀನಸ್ಯ ದೇವ ಕೃಪಣಾಪದಮಾಗತಸ್ಯ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೪॥**

೪. ಅತಿಭಯಂಕರವಾದ ಹೆಚ್ಚಿನ ಆಳವಾಗಿರುವ ಸಂಸಾರವೆಂಬ ಬಾವಿಯನ್ನು ಹೊಕ್ಕು ನೂರಾರು ದುಃಖಗಳೆಂಬ ಹಾವುಗಳಿಂದ ಸುತ್ತುವರೆಯಲ್ಪಟ್ಟವನಾದ, ದೀನನಾದ, ಹಾಗೂ ಕಾರ್ಪಣ್ಯಸ್ಥಿತಿಯಲ್ಲಿದ್ದು ವಿಪತ್ತನ್ನು ಹೊಂದಿರುವ ನನ್ನನ್ನು ಎಲೈ ದೇವನೆ, ಲಕ್ಷ್ಮೀನರಸಿಂಹನೆ, ಕರಾವಲಂಬನವನ್ನು ನೀಡಿ ಕಾಪಾಡುವವನಾಗು.

**ಸಂಸಾರಸಾಗರವಿಶಾಲಕರಾಲಕಾಲ-**
**ನಕ್ರಗ್ರಹಗ್ರಸನನಿಗ್ರಹವಿಗ್ರಹಸ್ಯ ।**
**ವ್ಯಗ್ರಸ್ಯ ರಾಗರಸನೋರ್ಮಿನಿಪೀಡಿತಸ್ಯ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೫ ॥**

೫. ಸಂಸಾರವೆಂಬ ವಿಶಾಲವೂ ದುರ್ಗಮವೂ ಆದ ಸಮುದ್ರದಲ್ಲಿರುವ ಮೃತ್ಯುವೆಂಬ ಮೊಸಳೆಯ ಬಾಯಿಗೆ ಸಿಕ್ಕಿ ನುಂಗಲ್ಪಡುತ್ತಿರುವ ಶರೀರವುಳ್ಳ, ಚಂಚಲಚಿತ್ತನೂ ಕಾಮ ಮತ್ತು ಬಾಯಿಚಪಲಗಳೆಂಬ ಅಲೆಗಳಿಂದ ಪೀಡಿಸಲ್ಪಡುತ್ತಿರುವವನೂ ಆದ ನನಗೆ ಎಲೈ ಲಕ್ಷ್ಮೀನರಸಿಂಹನೆ, ಕರಾವಲಂಬನವನ್ನು ನೀಡಿ ಕಾಪಾಡುವವನಾಗು.

**ಸಂಸಾರವೃಕ್ಷಮಘಬೀಜಮನಂತಕರ್ಮ-**
**ಶಾಖಾಶತಂ ಕರಣಪತ್ರಮನಂಗಪುಷ್ಪಮ್ ।**
**ಆರುಹ್ಯ ದುಃಖಫಲಿತಂ ಪತತೋ ದಯಾಲೋ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೬ ॥**

೬. ಪಾಪವೆಂಬ ಬೀಜದಿಂದ ಹುಟ್ಟಿರುವ, ಹಾಗೂ ಲೆಕ್ಕವಿಲ್ಲದಷ್ಟು ಕರ್ಮಗಳೆಂಬ ನೂರಾರು ಕೊಂಬೆಗಳುಳ್ಳ, ಮತ್ತು ಕಾಮನೆಂಬ ಹೂವು ಅರಳಿರುವ, ದುಃಖವೆಂಬ ಹಣ್ಣುಳ್ಳ ಈ ಸಂಸಾರವೆಂಬ ಮರವನ್ನೇರಿ ಕೆಳಗೆ ಬೀಳುತ್ತಿರುವ ನನ್ನನ್ನು ದಯಾಳುವಾದ ಲಕ್ಷ್ಮೀನೃಸಿಂಹನೆ, ಕರಾವಲಂಬನವನ್ನಿತ್ತು ಕಾಪಾಡು.

**ಸಂಸಾರಸರ್ಪಘನವಕ್ತ್ರಭಯೋಗ್ರತೀವ್ರ-**
**ದಂಷ್ಟ್ರಾಕರಾಲವಿಷದಗ್ಧವಿನಷ್ಟಮೂರ್ತೇಃ ।**
**ನಾಗಾರಿವಾಹನ ಸುಧಾಬ್ಧಿನಿವಾಸ ಶೌರೇ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೭॥**

೭. ದೊಡ್ಡ ಭಯಂಕರವಾದ ಹೆಡೆಯುಳ್ಳ ಸಂಸಾರವೆಂಬ ಹಾವಿನ ಕೋರೆದಾಡೆಗಳಲ್ಲಿರುವ ತೀವ್ರವಾದ ವಿಷದಿಂದ ಬೆಂದುಹೋದ ಶರೀರವುಳ್ಳ ನನಗೆ ಎಲೈ ಗರುಡವಾಹನನೆ, ಕ್ಷೀರಸಮುದ್ರನಿವಾಸಿಯೆ, ಶೌರಿಯೆ, ಲಕ್ಷ್ಮೀನೃಸಿಂಹನೆ, ಕರಾವಲಂಬನವನ್ನಿತ್ತು ಕಾಪಾಡುವವನಾಗು.

**ಸಂಸಾರದಾವದಹನಾತುರಭೀಕರೋರು-**
**ಜ್ವಾಲಾವಲೀಭಿರತಿದಗ್ಧತನೂರುಹಸ್ಯ ।**
**ತ್ವತ್ಪಾದಪದ್ಮಸರಸೀ ಶರಣಾಗತಸ್ಯ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೮ ॥**

೮. ಸಂಸಾರವೆಂಬ ಕಾಡುಗಿಚ್ಚಿನ ಬೆಂಕಿಯ ಕ್ರೂರವಾದ ಜ್ವಾಲೆಗಳ ಸಮೂಹದಿಂದ ಬಹಳವಾಗಿ ಸುಡಲ್ಪಟ್ಟ ಶರೀರವುಳ್ಳ, ನಿನ್ನ ಪಾದಕಮಲಗಳಿಗೆ ಶರಣುಬಂದಿರುವ ನನ್ನನ್ನು ಎಲೈ ಲಕ್ಷ್ಮೀನೃಸಿಂಹನೆ, ಕರಾವಲಂಬನವನ್ನು ನೀಡಿ ಕಾಪಾಡುವವನಾಗು.

**ಸಂಸಾರಜಾಲಪತಿತಸ್ಯ ಜಗನ್ನಿವಾಸ**
**ಸರ್ವೇಂದ್ರಿಯಾರ್ಥಬಡಿಶಾರ್ಥಝಷೋಪಮಸ್ಯ।**
**ಪ್ರೋತ್ಖಂಡಿತಪ್ರಚುರತಾಲುಕಮಸ್ತಕಸ್ಯ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೯॥**

೯. ಎಲ್ಲಾ ಇಂದ್ರಿಯಗಳ ವಿಷಯಗಳೆಂಬ ಗಾಳದಿಂದ ಕೂಡಿದ ಸಂಸಾರವೆಂಬ ಬಲೆಯಲ್ಲಿ ಬಿದ್ದ ಮೀನಿನಂತಿರುವ ಹಾಗೂ ಬಹಳವಾಗಿ ತಲೆ-ದವಡೆಗಳ ಮೇಲೆ ಹೊಡೆಯಲ್ಪಟ್ಟು (ಬಳಲಿರುವ) ನನಗೆ- ಎಲೈ ಜಗನ್ನಿವಾಸನಾದ ಲಕ್ಷ್ಮೀನೃಸಿಂಹನೆ, ಕರಾವಲಂಬನವನ್ನು ನೀಡಿ ಕಾಪಾಡುವವನಾಗು.

**ಸಂಸಾರಭೀಕರಕರೀಂದ್ರಕರಾಭಿಘಾತ-**
**ನಿಷ್ಪಿಷ್ಟಮರ್ಮವಪುಷಃ ಸಕಲಾರ್ತಿನಾಶ ।**
**ಪ್ರಾಣಪ್ರಯಾಣಭವಭೀತಿಸಮಾಕುಲಸ್ಯ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧೦ ॥**

೧೧. ಸಂಸಾರವೆಂಬ ಭಯಂಕರವಾದ ಕಾಡಾನೆಯ ಸೊಂಡಲಿನ ಹೊಡೆತದಿಂದ ಜಜ್ಜಿಹೋಗಿರುವ ಮರ್ಮಸ್ಥಾನಗಳಿಂದ ಕೂಡಿದ ಶರೀರವುಳ್ಳ, ಹಾಗೂ ಪ್ರಾಣವು ದೇಹದಿಂದ ಎಲ್ಲಿ ? ಹೇಗೆ ? ಹೋಗಿಬಿಡುವದೋ- ಎಂಬ ಭೀತಿಯಿಂದ ತತ್ತರಿಸುತ್ತಿರುವ ನನಗೆ- ಎಲೈ ಸಕಲದುಃಖಪರಿಹಾರಕನೆ, ಲಕ್ಷ್ಮೀನೃಸಿಂಹನೆ- ಕರಾವಲಂಬನವನ್ನು ನೀಡುವವನಾಗು.

**ಅಂಧಸ್ಯ ಮೇ ಹೃತವಿವೇಕಮಹಾಧನಸ್ಯ**
**ಚೋರೈಃ ಪ್ರಭೋ ಬಲಿಭಿರಿಂದ್ರಿಯನಾಮಧೇಯೈಃ ।**
**ಮೋಹಾಂಧಕೂಪಕುಹರೇ ವಿನಿಪಾತಿತಸ್ಯ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧೧॥**

೧೧. ಎಲೈ ಪ್ರಭುವೆ, ಇಂದ್ರಿಯಗಳೆಂಬ ಹೆಸರಿನ ಬಲಿಷ್ಠರಾದ ಕಳ್ಳರಿಂದ ವಿವೇಕವೆಂಬ ನನ್ನ ಧನವು ಅಪಹರಿಸಲ್ಪಟ್ಟು ನಾನು ಮೋಹವೆಂಬ ಕತ್ತಲೆಯ ಬಾವಿಯಲ್ಲಿ ಕೆಡವಲ್ಪಟ್ಟಿರುವೆನು. ಲಕ್ಷ್ಮೀನೃಸಿಂಹನೆ, ನನಗೆ ಕರಾವಲಂಬವನ್ನು ಕೊಡುವವನಾಗು.

**ಲಕ್ಷ್ಮೀಪತೇ ಕಮಲನಾಭ ಸುರೇಶ ವಿಷ್ಣೋ**
**ವೈಕುಂಠ ಕೃಷ್ಣ ಮಧುಸೂದನ ಪುಷ್ಕರಾಕ್ಷ ।**
**ಬ್ರಹ್ಮಣ್ಯ ಕೇಶವ ಜನಾರ್ದನ ವಾಸುದೇವ**
**ದೇವೇಶ ದೇಹಿ ಕೃಪಣಸ್ಯ ಕರಾವಲಂಬಮ್ ॥ ೧೨॥**

೧೨. ಎಲೌ ಲಕ್ಷ್ಮೀಪತಿಯೆ, ಪದ್ಮನಾಭನೆ, ದೇವತೆಗಳೊಡೆಯನೆ, ಸರ್ವವ್ಯಾಪಕನೆ, ವೈಕುಂಠಾಧಿಪತಿಯೆ, ಕೃಷ್ಣನೆ, ಮಧುಸೂದನನೆ, ಕಮಲನೇತ್ರನೆ, ವೇದೋದ್ಧಾರಕನೆ, ಕೇಶವನೆ, ಜನಾರ್ದನನೆ, ವಾಸುದೇವನೆ, ದೇವೇಶನೆ, ಕೃಪಣನಾದ ನನಗೆ ಕರಾವಲಂಬನವನ್ನು ಕೊಡು.

**ಸಂಸಾರಸಾಗರನಿಮಜ್ಜನಮುಹ್ಯಮಾನಂ**
**ದೀನಂ ವಿಲೋಕಯ ವಿಭೋ ಕರುಣಾನಿಧೇ ಮಾಮ್ ।**
**ಪ್ರಹ್ಲಾದಖೇದಪರಿಹಾರ ಪರಾವತಾರ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧೩ ॥**

೧೩. ಸಂಸಾರವೆಂಬ ಸಾಗರದಲ್ಲಿ ಮುಳುಗಿ, ಏಳುತ್ತಿರುವ ದೀನನಾದ ನನ್ನನ್ನು ಎಲೈ ಕರುಣಾನಿಧಿಯೆ, ವಿಭುವೆ, ನೋಡುವವನಾಗು. ಪ್ರಹ್ಲಾದನ ದುಃಖವನ್ನು ಕಳೆದವನೆ, ಪರಮಾವತಾರನೆ, ಲಕ್ಷ್ಮೀನೃಸಿಂಹನೆ, ನನಗೆ ಕರಾವಲಂಬನವನ್ನು ನೀಡುವವನಾಗು.

**ಬದ್ಧ್ವಾ ಗಲೇ ಯಮಭಟಾ ಬಹು ತರ್ಜಯಂತಃ**
**ಕರ್ಷಂತಿ ಯತ್ರ ಭವಪಾಶಶತೈರ್ಯುತಂ ಮಾಮ್ ।**
**ಏಕಾಕಿನಂ ಪರವಶಂ ಚಕಿತಂ ದಯಾಲೋ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧೪ ॥**

೧೪. ಯಮನದೂತರು ಕುತ್ತಿಗೆಗೆ ಹಗ್ಗವನ್ನು ಬಿಗಿದು ಎಳೆಯುತ್ತಾ ಬಹಳವಾಗಿ ಗದರಿಸುತ್ತಾ ಇರುವಲ್ಲಿ, ನೂರಾರು ಸಂಸಾರವ್ಯಾಮೋಹಪಾಶಗಳಿಂದ (ದೇಹವನ್ನು ಬಿಡಲಾರದೆ) ಎಳೆಯಿಸಿಕೊಳ್ಳುತ್ತಾ ಪರವಶನಾಗಿರುವ, ಏಕಾಕಿಯಾಗಿ, ಹೆದರಿಬೀಳುತ್ತಿರುವ ನನ್ನನ್ನು ಎಲೈ ಲಕ್ಷ್ಮೀನೃಸಿಂಹನೆ ಕಾಪಾಡು, ಕರಾವಲಂಬನವನ್ನು ಕೊಡುವವನಾಗು.

**ಏಕೇನ ಚಕ್ರಮಪರೇಣ ಕರೇಣ ಶಂಖಂ**
**ಅನ್ಯೇನ ಸಿಂಧುತನಯಾಮವಲಂಬ್ಯ ತಿಷ್ಠನ್ ।**
**ವಾಮೇ ಕರೇಣ ವರದಾಭಯಪದ್ಮಚಿಹ್ನಂ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧೫ ॥**

೧೫. ಒಂದು ಕೈಯಲ್ಲಿ ಚಕ್ರವನ್ನೂ ಇನ್ನೊಂದು ಕೈಯಲ್ಲಿ ಶಂಖವನ್ನೂ ಮತ್ತೊಂದರಿಂದ ಲಕ್ಷ್ಮೀದೇವಿಯನ್ನು ಎಡಭಾಗದಲ್ಲಿ ಆಲಿಂಗಿಸಿಯೂ ವರದ, ಅಭಯ, ಪದ್ಮಗಳಿಂದ (ಬಲಗೈಯನ್ನು) ಧರಿಸಿದವನೂ ಆದ ನರಸಿಂಹನೆ, ನನಗೆ ಕರಾವಲಂಬನವನ್ನು ಕೊಡುವವನಾಗು.

**ಪ್ರಹ್ಲಾದನಾರದಪರಾಶರಪುಂಡರೀಕ**
**ವ್ಯಾಸಾದಿಭಾಗವತಪುಂಗವಹೃನ್ನಿವಾಸ ।**
**ಭಕ್ತಾನುರಕ್ತಪರಿಪಾಲನಪಾರಿಜಾತ**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧೬ ॥**

೧೬. ಪ್ರಹ್ಲಾದ, ನಾರದ, ಪರಾಶರ, ಪುಂಡರೀಕ, ವ್ಯಾಸರೇ ಮೊದಲಾದ ಪರಮಭಾಗವತಶ್ರೇಷ್ಠರುಗಳ ಹೃದಯದಲ್ಲಿ ನೆಲಸಿರುವವನೆ, ಅನುರಕ್ತರಾದ ಭಕ್ತರನ್ನು ಉದ್ಧರಿಸುವ ಪಾರಿಜಾತನೆ, ಲಕ್ಷ್ಮೀನೃಸಿಂಹನೆ, ನನಗೆ ಕರಾವಲಂಬನವನ್ನು ನೀಡುವವನಾಗು.

**ಯನ್ಮಾಯಯೋರ್ಜಿತವಪುಪ್ರಚುರಪ್ರವಾಹ-**
**ಮಗ್ನಾರ್ಥಮತ್ರ ನಿವಹೋರುಕರಾವಲಂಬಮ್ ।**
**ಲಕ್ಷ್ಮೀನೃಸಿಂಹಚರಣಾಬ್ಜಮಧುವ್ರತೇನ**
**ಸ್ತೋತ್ರಂ ಕೃತಂ ಸುಖಕರಂ ಭುವಿ ಶಂಕರೇಣ ॥ ೧೭ ॥**

೧೭. ಯಾವ ದೇವನ ಮಾಯೆಯಿಂದ ಸಂಪಾದಿಸಿದ ಶರೀರಪರಂಪರೆಗಳ ಪ್ರವಾಹದಲ್ಲಿ ಮುಳುಗಿದವನಾದರೂ ಕರಾವಲಂಬನವನ್ನು ಪಡೆದ, ಲಕ್ಷ್ಮೀ ನರಸಿಂಹನ ಪಾದಕಮಲಗಳೆಂಬ ತಾವರೆಗಳ ಮಧುಪಾನದಲ್ಲಿ ನಿರತನಾದ ಶಂಕರನಿಂದ- ಸುಖವನ್ನೀಯುವ ಈ ಸ್ತೋತ್ರವು ರಚಿಸಲ್ಪಟ್ಟಿತು.

## ೫. ಹಸ್ತಾಮಲಕಸೋತ್ರ

(ಅಧ್ಯಾತ್ಮಶಂಕರವಿಜಯ, ಪುಟ ೭೭)

**ಕಸ್ತ್ವಂ ಶಿಶೋ ಕಸ್ಯ ಕುತೋಽಸಿ ಗಂತಾ**
**ಕಿಂ ನಾಮ ತೇ ತ್ವಂ ಕುತ ಆಗತೋಽಸಿ ।**
**ಏತನ್ಮಯೋಕ್ತಂ ವದ ಚಾರ್ಭಕ ತ್ವಂ**
**ಮತ್ಪ್ರೀತಯೇ ಪ್ರೀತಿವಿವರ್ಧನೋಽಸಿ ॥ ೧ ॥**

೧. ಎಲೈ ಮಗುವೆ, ನೀನು ಯಾರು? ಯಾವನ ಮಗನು? ಎಲ್ಲಿಂದ ಬಂದಿರುವೆ? ಎಲ್ಲಿಗೆ ಹೋಗುವೆ? ನಿನ್ನ ಹೆಸರೇನು? ಅಪ್ಪಾ, ಈ ನಾನು ಕೇಳಿದ್ದಕ್ಕೆ ಉತ್ತರವನ್ನು ಹೇಳುವವನಾಗು. ನನಗೆ ಬಹಳ ಪ್ರೀತಿಯನ್ನುಂಟುಮಾಡಿ ಅಭಿವೃದ್ಧಿ ಗೊಳಿಸುತ್ತಿರುವೆಯಲ್ಲ?

ಹಸ್ತಾಮಲಕ ಉವಾಚ -

**ನಾಹಂ ಮನುಷ್ಯೋ ನ ಚ ದೇವಯಕ್ಷೌ**
**ನ ಬ್ರಾಹ್ಮಣಕ್ಷತ್ರಿಯವೈಶ್ಯಶೂದ್ರಾಃ ।**
**ನ ಬ್ರಹ್ಮಚಾರೀ ನ ಗೃಹೀ ವನಸ್ಥೋ**
**ಭಿಕ್ಷುರ್ನ ಚಾಹಂ ನಿಜಬೋಧರೂಪಃ ॥ ೨ ॥**

೨. **ಹಸ್ತಾಮಲಕನಿಂತೆಂದನು :** ನಾನು ಮನುಷ್ಯನಲ್ಲ; ದೇವತೆಯಾಗಲಿ, ಯಕ್ಷನಾಗಲಿ ಅಲ್ಲ; ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಲ್ಲಿ ಯಾರೂ ನಾನಲ್ಲ. ಹಾಗೆಯೇ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಾಶ್ರಮಿಗಳಲ್ಲಿ ಯಾವನೂ ಅಲ್ಲ. ನಾನು ನಿಜವಾದ ಜ್ಞಾನಸ್ವರೂಪನಾಗಿರುವೆನು.

**ನಿಮಿತ್ತಂ ಮನಶ್ಚಕ್ಷುರಾದಿಪ್ರವೃತ್ತೌ**
**ನಿರಸ್ತಾಖಿಲೋಪಾಧಿರಾಕಾಶಕಲ್ಪಃ ।**
**ರವಿರ್ಲೋಕಚೇಷ್ಟಾನಿಮಿತ್ತಂ ಯಥಾ ಯಃ**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೩ ॥**

೩. ಮನಸ್ಸು, ಕಣ್ಣು ಮುಂತಾದ ಜ್ಞಾನೇಂದ್ರಿಯಗಳು- ಇವುಗಳ ವ್ಯಾಪಾರದಲ್ಲಿ ಯಾವದು ನಿಮಿತ್ತವಾಗಿರುವದೋ, ಎಲ್ಲಾ ಉಪಾಧಿಗಳನ್ನೂ ದಾಟಿರುವದಾಗಿ ಆಕಾಶದಂತೆ ಇದ್ದುಕೊಂಡಿರುವದೋ ಮತ್ತು ಲೋಕದ ಜನರ ಹಾಗೂ ಪ್ರಾಣಿಗಳ ವ್ಯವಹಾರಕ್ಕೆ ಸೂರ್ಯನು ಹೇಗೆ ನಿಮಿತ್ತವಾಗಿರುವನೋ ಹಾಗೆ ಯಾವದು ಸಾಕ್ಷೀಭೂತವಾಗಿದ್ದುಕೊಂಡಿದೆಯೋ ಆ ನಿತ್ಯೋಪಲಬ್ಧಿ (ಜ್ಞಾನ) ಸ್ವರೂಪನಾದ ಆತ್ಮನು ನಾನಾಗಿರುವೆನು.

**ಯಮಗ್ನ್ಯುಷ್ಣವನ್ನಿತ್ಯಬೋಧಸ್ವರೂಪಂ**
**ಮನುಶ್ಚಕ್ಷುರಾದೀನ್ಯಬೋಧಾತ್ಮಕಾನಿ ।**
**ಪ್ರವರ್ತನ್ತ ಆಶ್ರಿತ್ಯ ನಿಷ್ಕಂಪಮೇಕಂ**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೪ ॥**

೪. ಅಚೇತನವಾದ ಮನುಸ್ಸು, ಕಣ್ಣೀ- ಮುಂತಾದ ಇಂದ್ರಿಯಗಳು ಬೆಂಕಿಯ ಬಿಸಿಯಂತಿರುವ ಯಾವ ನಿತ್ಯಬೋಧಸ್ವರೂಪನಾದ ಹಾಗೂ ನಿಶ್ಚಲನಾದ (ಆತ್ಮನನ್ನು) ಆಶ್ರಯಿಸಿ ಪ್ರವರ್ತಿಸುವವೋ ಆ ಏಕನೂ ನಿತ್ಯೋಪಲಬ್ಧಿಸ್ವರೂಪನೂ ಆದ ಆತ್ಮನು ನಾನು.

**ಮುಖಾಭಾಸಕೋ ದರ್ಪಣೇ ದೃಶ್ಯಮಾನೋ**
**ಮುಖತ್ವಾತ್ ಪೃಥಕ್ತ್ವೇನ ನೈವಾಸ್ತಿ ವಸ್ತು ।**
**ಚಿದಾಭಾಸಕೋ ಧೀಷು ಜೀವೋಽಪಿ ತದ್ವತ್**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೫ ॥**

೫. ಕನ್ನಡಿಯಲ್ಲಿ ಕಾಣಬರುತ್ತಿರುವ ಪ್ರತಿಬಿಂಬವು ಮುಖಕ್ಕಿಂತ ಬೇರೆಯಾಗಿ ಹೇಗೆ ವಸ್ತುವಾಗಿರುವದಲ್ಲವೋ ಹಾಗೆಯೇ ಬುದ್ಧಿವೃತ್ತಿಗಳಲ್ಲಿ ತೋರುವ ಆಭಾಸರೂಪನಾದ ಜೀವನೂ ಪರಮಾತ್ಮನಿಗಿಂತ ಬೇರೆಯಾಗಿಲ್ಲವೋ ಆ ನಿತ್ಯೋಪಲಬ್ಧಿ ಸ್ವರೂಪನಾದ ಆತ್ಮನೇ ನಾನಾಗಿರುವೆನು.

**ಯಥಾ ದರ್ಪಣಾಭಾವ ಆಭಾಸಹಾನೌ**
**ಮುಖಂ ವಿದ್ಯತೇ ಕಲ್ಪನಾಹೀನಮೇಕಮ್ ।**
**ತಥಾ ಧೀವಿಯೋಗೇ ನಿರಾಭಾಸಕೋ ಯಃ**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೬ ॥**

೬. ಕನ್ನಡಿಯಿಲ್ಲವಾದರೆ ಹೇಗೆ ಪ್ರತಿಬಿಂಬವೂ ಇಲ್ಲವಾಗುವದೋ ಆಗ (ದ್ವೈತ) ಕಲ್ಪನೆಯಿಲ್ಲದ ಮುಖವು ತಾನೊಂದೇ ಇದ್ದುಕೊಂಡಿರುವದೋ ಹಾಗೆಯೇ

ಬುದ್ಧಿವೃತ್ತಿಯು ಶಾಂತವಾಗಲು ಆಭಾಸರಹಿತವಾದ ನಿಜತತ್ತ್ವವೊಂದೇ ತಾನೇ ಉಳಿದುಕೊಳ್ಳುವದೋ ಆ ನಿತ್ಯೋಪಲಬ್ಧಿಸ್ವರೂಪನಾದ ಆತ್ಮನು ನಾನಾಗಿರುವೆನು.

**ಮನಶ್ಚಕ್ಷುರಾದೇರ್ವಿಯುಕ್ತಃ ಸ್ವಯಂ ಯೋ**
**ಮನಶ್ಚಕ್ಷುರಾದೇರ್ಮನಶ್ಚಕ್ಷುರಾದಿಃ ।**
**ಮನಶ್ಚಕ್ಷುರಾದೇರಗಮ್ಯಸ್ವರೂಪಃ**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೭ ॥**

೭. ಯಾವನು ಮನುಸ್ಸು, ಕಣ್ಣು- ಮುಂತಾದವುಗಳಿಗಿಂತ ವಿಂಗಡವಾಗಿ ಬೇರೆಯಾಗಿದ್ದುಕೊಂಡು ಅವುಗಳಿಗೂ ಸ್ವರೂಪನಾಗಿರುವನೋ, ಮತ್ತು ಮನಸ್ಸು, ಕಣ್ಣು ಮುಂತಾದವುಗಳಿಗೆ ಗೋಚರನಲ್ಲದ ಸ್ವರೂಪನಾಗಿರುವನೋ ಆ ನಿತ್ಯೋಪಲಬ್ಧಿಸ್ವರೂಪನಾದ ಆತ್ಮನು ನಾನಾಗಿರುವೆನು.

**ಯ ಏಕೋ ವಿಭಾತಿ ಸ್ವತಃಶುದ್ಧಚೇತಾಃ**
**ಪ್ರಕಾಶಸ್ವರೂಪೋಽಪಿ ನಾನೇವ ಧೀಷು ।**
**ಶರಾವೋದಕಸ್ಥೋ ಯಥಾ ಭಾನುರೇಕಃ**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೮ ॥**

೮. ಹೇಗೆ ಸೂರ್ಯನೊಬ್ಬನಾದರೂ ಮಣ್ಣಿನ ತಟ್ಟೆಯಲ್ಲಿರುವ ನೀರಿನಲ್ಲಿ ಬೇರೆಬೇರೆಯಾಗಿ ಕಂಡುಬರುವಂತೆ- ತಾನು ಸ್ವತಃ ಶುದ್ಧಚೈತನ್ಯರೂಪನೂ ಪ್ರಕಾಶರೂಪನೂ ಆಗಿದ್ದುಕೊಂಡು ಬುದ್ಧಿವೃತ್ತಿಗಳೆಂಬ ಉಪಾಧಿಸಂಬಂಧದಿಂದ ನಾನಾ ಆಗಿರುವಂತೆ ಯಾವನು ತೋರಿಬರುವನೋ ಆ ನಿತ್ಯೋಪಲಬ್ಧಿಸ್ವರೂಪನಾದ ಆತ್ಮನು ನಾನಾಗಿರುವೆನು.

**ಯಥಾನೇಕಚಕ್ಷುಃಪ್ರಕಾಶೋ ರವಿರ್ನ-**
**ಕ್ರಮೇಣ ಪ್ರಕಾಶೀಕರೋತಿ ಪ್ರಕಾಶ್ಯಮ್ ।**
**ಅನೇಕಾ ಧಿಯೋ ಯಸ್ತಥೈಕಪ್ರಬೋಧಃ**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೯ ॥**

೯. ಸೂರ್ಯನು ಅನೇಕ ಜೀವರುಗಳ ಕಣ್ಣುಗಳಿಗೆ ಅನುಗ್ರಾಹಕನಾಗಿದ್ದುಕೊಂಡು ಪ್ರಕಾಶ್ಯವಾದ ವಿಷಯಗಳನ್ನು ಒಂದೊಂದಾಗಿ ಬೆಳಗದೆ ಒಟ್ಟಿಗೆ ಬೆಳಗಿಬಿಡುವನೋ ಹಾಗೆಯೇ ಏಕವಿಜ್ಞಾನರೂಪನಾದ ಆತ್ಮನು ಅನೇಕ ಬುದ್ಧಿಪ್ರತ್ಯಯಗಳಿಗೆ ಸಾಕ್ಷಿಯಾಗಿದ್ದುಕೊಂಡು ಬೆಳಗುತ್ತಾ ನಿತ್ಯೋಪಲಬ್ಧಿಸ್ವರೂಪನಾಗಿ ಕಂಡುಬರುವನಲ್ಲವೆ? ಆ ಆತ್ಮನು ನಾನಾಗಿರುವೆನು.

**ವಿವಸ್ವತ್ ಪ್ರಭಾತಂ ಯಥಾರೂಪಮಕ್ಷಂ**
**ಪ್ರಗೃಹ್ಣಾತಿ ನಾಭಾತಮೇವಂ ವಿವಸ್ವಾನ್ ।**
**ತಥಾ ಭಾತಿ ಆಭಾಸಯತ್ಯಕ್ಷಮೇಕಃ**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೧೦ ॥**

೧೦. ಸೂರ್ಯನಿಂದ ಬೆಳಗಲ್ಪಟ್ಟ ರೂಪವನ್ನು ಕಣ್ಣು ಸ್ವೀಕರಿಸುತ್ತದೆ. ಬೆಳಗಲ್ಪಡದಿದ್ದರೆ ಸ್ವೀಕರಿಸುವದಿಲ್ಲ. ಹಾಗೆಯೇ ಸೂರ್ಯನನ್ನು ( ಈ ಕಾರ್ಯದಿಂದ) ಪ್ರಕಾಶಕನೆನ್ನುವಂತೆ- ತಾನೊಂದೇ ಆಗಿರುವ ಎಲ್ಲವನ್ನೂ ಬೆಳಗಿಸಿ ತಾನೂ ಬೆಳಗುತ್ತಿರುವ ನಿತ್ಯೋಪಲಬ್ಧಿರೂಪನಾದ ಆತ್ಮನು ನಾನಾಗಿರುವೆನು.

**ಯಥಾ ಸೂರ್ಯ ಏಕೋಽಪ್ಸ್ವನೇಕಶ್ಚಲಾಸು**
**ಸ್ಥಿತಾಸ್ವಪ್ಸು ಚೈಕೋ ವಿಭಾವ್ಯಸ್ವರೂಪಃ ।**
**ಚಲಾಸು ಪ್ರಭಿನ್ನಾಸು ಧೀಷ್ವೇಕ ಏವ**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೧೧ ॥**

೧೧. ಸೂರ್ಯನು ತಾನೊಬ್ಬನೇ ಆಗಿದ್ದು ಅಳ್ಳಾಡುವ ನೀರಿನಲ್ಲಿ ಅನೇಕನಂತೆಯೂ ನಿಂತನೀರಿನಲ್ಲಿ ಒಬ್ಬನಂತೆಯೂ ಕಂಡುಬರುವನೋ ಹಾಗೆಯೇ ಅಳ್ಳಾಡುವ ಬುದ್ಧಿಗಳಲ್ಲಿ ಅನೇಕನಾಗಿ ಕಂಡರೂ ಒಬ್ಬನೇಆಗಿರುವ ಆ ನಿತ್ಯೋಪಲಬ್ಧಿರೂಪನಾದ ಆತ್ಮನು ನಾನಾಗಿರುವೆನು.

**ಘನಚ್ಛನ್ನದೃಷ್ಟಿರ್ಘನಚ್ಛನ್ನಮರ್ಕಂ**
**ಯಥಾ ನಿಷ್ಪ್ರಭಂ ಮನ್ಯತೇ ಚಾತಿಮೂಢಃ ।**
**ತಥಾ ಬದ್ಧವದ್ ಭಾತಿ ಯೋ ಮೂಢದೃಷ್ಟೇಃ**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೧೨ ॥**

೧೨. ಮೋಡಗಳಿಂದ ಮುಚ್ಚಲ್ಪಟ್ಟ ತನ್ನ ನೋಟವನ್ನು ಅರಿಯದೆ- ಸೂರ್ಯನಿಗೇ ಮೋಡಗಳು ಕವಿದಿವೆ- ಎಂದೂ ಅವನು ಕಾಂತಿಹೀನನೆಂದೂ ಹೇಗೆ ಅತಿದಡ್ಡನು ತಿಳಿಯುತ್ತಾನೋ ಹಾಗೆ ಯಾವ ಆತ್ಮನು ಮೂಢದೃಷ್ಟಿಯವನಿಗೆ ಬದ್ಧನಾದ ಸಂಸಾರಿಯಂತೆ ಕಂಡುಬರುವನೋ ಆ ನಿತ್ಯೋಪಲಬ್ಧಿರೂಪನಾದ ಆತ್ಮನು ನಾನು.

**ಸಮಸ್ತೇಷು ವಸ್ತುಷ್ವನುಸ್ಯೂತಮೇಕಂ**
**ಸಮಸ್ತಾನಿ ವಸ್ತೂನಿ ಯಂ ನ ಸ್ಪೃಶಂತಿ ।**
**ವಿಯದ್ವತ್ ಸದಾ ಶುದ್ಧಮಚ್ಛಸ್ವರೂಪಃ**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೧೩ ॥**

೧೩. ಎಲ್ಲಾ ಪದಾರ್ಥಗಳಲ್ಲಿಯೂ ಹಾಸುಹೊಕ್ಕಾಗಿ ಹೆಣೆದುಕೊಂಡಿದ್ದು ತಾನೊಂದೇ ಆಗಿರುವ ಹಾಗೂ ಎಲ್ಲಾ ವಸ್ತುಗಳೂ ಯಾವದನ್ನು ಮುಟ್ಟಿರಲಾರವೋ- ಮತ್ತು ಆಕಾಶದಂತೆ ಯಾವದು ಯಾವಾಗಲೂ ಶುದ್ಧವೂ ಸ್ವಚ್ಛವೂ ಆದ ಸ್ವರೂಪವುಳ್ಳದ್ದೋ ಆ ನಿತ್ಯೋಪಲಬ್ಧಿರೂಪನಾದ ಆತ್ಮನು ನಾನಾಗಿರುವೆನು.

**ಉಪಾಧೌ ಯಥಾ ಭೇದತಾ ಸನ್ಮಣೀನಾಂ**
**ತಥಾ ಭೇದತಾ ಬುದ್ಧಿಭೇದೇಷು ತೇಽಪಿ ।**
**ಯಥಾ ಚಂದ್ರಿಕಾಣಾಂ ಜಲೇ ಚಂಚಲತ್ವಂ**
**ತಥಾ ಚಂಚಲತ್ವಂ ತವಾಪೀಹ ವಿಷ್ಣೋ** ॥ ೧೪ ॥

೧೪. ಶ್ರೇಷ್ಠವಾದ (ಬಿಳುಪಾದ) ಮಣಿರತ್ನಗಳಿಗೆ ಉಪಾಧಿಯಿಂದ ಹೇಗೆ ಪ್ರಭೇದಗಳು ತೋರುವವೋ, ನೀರಿನ ಚಾಂಚಲ್ಯದಿಂದ ಬೆಳದಿಂಗಳಿಗೂ ಚಂಚಲತ್ವವು ಹೇಗೆ ಕಂಡುಬರುವದೋ ಹಾಗೆಯೇ ಬುದ್ಧಿಭೇದದಿಂದ ಎಲೈ ಮಹಾವಿಷ್ಣುವೆ, ನಿನಗೂ ಚಂಚಲತ್ವವು ಉಪಾಧಿಯಿಂದಲೇ ತೋರುತ್ತಿರುವದು.

## ೬. ತೋಟಕಸ್ತುತಿ ೧

(ಆಧ್ಯಾತ್ಮಶಂಕರವಿಜಯ, ಪುಟ ೮೩)

**ವಿದಿತಾಖಿಲಶಾಸ್ತ್ರಸುಧಾಜಲಧೇ**
**ಮಹಿತೋಪನಿಷತ್ಕಥಿತಾರ್ಥನಿಧೇ ।**
**ಹೃದಯೇ ಕಲಯೇ ವಿಮಲಂ ಚರಣಂ**
**ಭವ ಶಂಕರದೇಶಿಕ ಮೇ ಶರಣಮ್** ॥ ೧ ॥

೧. ಸಮಸ್ತಶಾಸ್ತ್ರಗಳನ್ನೂ ಬಲ್ಲ ಅಮೃತಸಾಗರಸ್ವರೂಪನೆ, ಉಪನಿಷತ್ತುಗಳಲ್ಲಿ ಹೇಳಿರುವ ಮಾಹಾತ್ಮ್ಯವುಳ್ಳ (ಬ್ರಹ್ಮ) ತತ್ತ್ವವನ್ನು ಬಲ್ಲವನೆ, ಶಂಕರಗುರುವರ್ಯನೆ, ತಮ್ಮ ಪವಿತ್ರವಾದ ಪಾದಗಳನ್ನು ಹೃದಯದಲ್ಲಿ ಚಿಂತಿಸುವೆನು. ನನ್ನನ್ನು ಕಾಪಾಡುವ ಶರಣ್ಯರಾಗಿರಿ.

**ಕರುಣಾವರುಣಾಲಯ ಪಾಲಯ ಮಾಂ**
**ಭವಸಾಗರದುಃಖವಿದೂನಹೃದಮ್ ।**
**ರಚಿತಾಖಿಲದರ್ಶನ ತತ್ತ್ವವಿದಂ**
**ಭವ ಶಂಕರದೇಶಿಕ ಮೇ ಶರಣಮ್** ॥ ೨ ॥

೨. ಕರುಣಾಸಮುದ್ರರೆ, ಸಂಸಾರದುಃಖದಿಂದ ತಪ್ತವಾದ ಹೃದಯವುಳ್ಳ ನನ್ನನ್ನು ಕಾಪಾಡಿರಿ. ಮತ್ತು ಎಲ್ಲಾ ದರ್ಶನಗಳ ತತ್ತ್ವವನ್ನೂ ನಾನು ತಿಳಿಯುವಂತೆ ಮಾಡಿರಿ. ಶಂಕರಯತೀಂದ್ರರೆ, ನಿಮ್ಮನ್ನೇ ಮೊರೆಹೊಕ್ಕಿರುವೆನು.

**ಭವತಾ ಜನತಾ ಸುಹಿತಾ ಭವಿತಾ**
**ನಿಜಬೋಧವಿಚಾರಣಚಾರುಮತೇ ।**
**ಕಲಯೇಶ್ವರಜೀವವಿವೇಕವಿದಂ**
**ಭವ ಶಂಕರದೇಶಿಕ ಮೇ ಶರಣಮ್ ॥ ೩ ॥**

೩. ಆತ್ಮಬೋಧದ ನಿಜವನ್ನು ವಿಚಾರಿಸುವದರಲ್ಲಿ ಜಾಣರಾದವರೆ, ನಿಮ್ಮಿಂದ ಜನರ ಹಿತವು ಸಾಧಿಸಲ್ಪಡುತ್ತದೆ. ಜೀವೇಶ್ವರವಿವೇಕವನ್ನು ಬಲ್ಲ ನಿಮ್ಮನ್ನು ಬಳಿಸಾರುವೆನು. ಶಂಕರಯತೀಂದ್ರರೆ, ನಿಮ್ಮನ್ನೇ ಮೊರೆಹೊಕ್ಕಿರುವೆನು.

**ಭವ ಏವ ಭವಾನಿತಿ ಮೇ ನಿತರಾಂ**
**ಸಮಜಾಯತ ಚೇತಸಿ ಕೌತುಕತಾ ।**
**ಮಮ ಪಾರಯ ಮೋಹಮಹಾಜಲಧಿಂ**
**ಭವ ಶಂಕರದೇಶಿಕ ಮೇ ಶರಣಮ್ ॥ ೪ ॥**

೪. ನೀನು ಸಾಕ್ಷಾತ್ ಪರಶಿವನೇ ಎಂದು ಯಾವಾಗಲೂ ನನ್ನ ಮನಸ್ಸಿನಲ್ಲಿ ಕುತೂಹಲವುಂಟಾಗಿದೆ. ನನ್ನನ್ನು ಮೋಹಮಹಾಸಮುದ್ರದಿಂದ ದಾಟಿಸುವವನಾಗು. ಶಂಕರಯತೀಂದ್ರನೆ, ನಿನ್ನನ್ನು ಶರಣು ಹೊಕ್ಕಿರುವೆನು.

**ಸುಕೃತೇಽಧಿಕೃತೇ ಬಹುಧಾ ಭವತೋ**
**ಭವಿತಾ ಪದದರ್ಶನಲಾಲಸತಾ ।**
**ಅತಿದೀನಮಿಮಂ ಪರಿಪಾಲಯ ಮಾಂ**
**ಭವ ಶಂಕರದೇಶಿಕ ಮೇ ಶರಣಮ್ ॥ ೫ ॥**

೫. ಅತ್ಯಂತವಾಗಿ ಹೆಚ್ಚಿನಪುಣ್ಯವನ್ನು ಮಾಡಿದ್ದರೆ ನಿಮ್ಮ ಪಾದದರ್ಶನವನ್ನು ಮಾಡಬೇಕೆಂಬ ಆಸೆಯುಂಟಾದೀತು. ಇದೊ, ಅತಿದೀನನಾಗಿರುವ ಈ ನನ್ನನ್ನು ಕಾಪಾಡಿರಿ. ಶಂಕರಯತೀಂದ್ರನೆ, ನಿನಗೆ ಶರಣುಬಂದಿರುವೆನು.

**ಜಗತೀಮವಿತುಂ ಕಲಿತಾ ಕೃತಯೋ**
**ವಿಚರಂತಿ ಮಹಾಮಹಸಶ್ಛಲತಃ ।**
**ಅಹಿಮಾಂಶುರಿವಾತ್ರ ವಿಭಾಸಿ ಗುರೋ**
**ಭವ ಶಂಕರದೇಶಿಕ ಮೇ ಶರಣಮ್ ॥ ೬ ॥**

೬. ಜಗತ್ತನ್ನು ಉದ್ಧರಿಸುವ ಸಲುವಾಗಿ ನಾಮರೂಪಗಳನ್ನು ಧರಿಸಿ ಮಹಾತೇಜಸ್ಸುಗಳು (ತೇಜೋರೂಪರಾದ ದೇವತೆಗಳು) ಹಠದಿಂದ ಸಂಚರಿಸುವರು. ಎಲೈ ಗುರುವೆ, ನೀನಾದರೋ ಚಂದ್ರನಲ್ಲದವನಂತೆ (ಸೂರ್ಯನಂತೆ) ಕಂಡುಬರುವೆ. ಶಂಕರದೇಶಿಕನೆ, ನಿನಗೆ ಶರಣುಬಂದಿರುವೆನು.

**ಗುರುಪುಂಗವ ಪುಂಗವ ಕೇತನ ತೇ**
**ಸಮತಾಮಯತಾಂ ನ ಹಿ ಕೋಽಪಿ ಸುಧೀಃ ।**
**ಶರಣಾಗತವತ್ಸಲ ತತ್ತ್ವನಿಧೇ**
**ಭವ ಶಂಕರದೇಶಿಕ ಮೇ ಶರಣಮ್ ॥ ೭ ॥**

೭. ಗುರುಶ್ರೇಷ್ಠರಲ್ಲಿ ಶ್ರೇಷ್ಠನೆ, ಹಾಗೂ ಬಾವುಟದಂತೆ ಅಗ್ರಸ್ಥಾನದಲ್ಲಿರುವವನೆ, ಯಾವ ವಿದ್ವಾಂಸನೂ ನಿನ್ನಂತೆ ಸಮತಾ (ಬುದ್ಧಿ)ಯಲ್ಲಿ ನೆಲೆಗೊಂಡಿರಲಾರನು. ತತ್ತ್ವನಿಧಿಯೆ, ಶರಣಾಗತವತ್ಸಲನೆ, ಶಂಕರದೇಶಿಕನೆ, ನಿನಗೆ ಶರಣು ಬಂದಿರುವೆನು.

**ವಿದಿತಾ ನ ಮಯಾ ವಿಶದೈಕಕಲಾ**
**ನ ಚ ಕಿಂಚನ ಕಾಂಚನಮಸ್ತಿ ಗುರೋ ।**
**ದ್ರುತಮೇವ ವಿಧೇಹಿ ಕೃಪಾಂ ಸಹಜಾಂ**
**ಭವ ಶಂಕರದೇಶಿಕ ಮೇ ಶರಣಮ್ ॥ ೮ ॥**

೮. ಎಲೈ ಗುರುವೆ, ನನಗೆ ಯಾವದೊಂದು ವಿದ್ಯೆಯ ಲೇಶವೂ ತಿಳಿಯದು. ಕಾಂಚನ (ಚಿನ್ನ)ವೂ ನನ್ನಲ್ಲಿಲ್ಲ. ನೀನು ಸಹಜವಾದ ನಿನ್ನ ಕರುಣೆಯಿಂದಲೇ ಕೂಡಲೆ ಕಾಪಾಡುವವನಾಗು. ಶಂಕರದೇಶಿಕನೆ, ನೀನೇ ನನಗೆ ಶರಣ್ಯನು.

**ಸಕಲಂ ಮನಸಾ ಕ್ರಿಯಯಾ ಜನಿತಂ**
**ಸಮವೇಕ್ಷ್ಯ ವಿನಾಶಿತಯಾ ತು ಜಗತ್ ।**
**ನಿರವಿದ್ಯತ ಕಶ್ಚಿದತೋ ನಿಖಿಲಾ-**
**ದವಿನಾಶಕೃತೇ ಯತಿತವ್ಯಮಿತಿ ॥ ೯ ॥**

೯. ಈ (ದ್ವೈತ)ವೆಲ್ಲವೂ ಮನಸ್ಸಿನ ಚಾಂಚಲ್ಯಕ್ರಿಯೆಯಿಂದ ಹುಟ್ಟಿರುವದು. ಆದ್ದರಿಂದ ಈ ಜಗತ್ತು ವಿನಾಶಿ- ಎಂಬುದನ್ನರಿತು .ಯಾವನೋ ಪುಣ್ಯಶಾಲಿಯಾದವನು ಈ ಎಲ್ಲಾ ಪ್ರಪಂಚದಿಂದಲೂ ವಿರಕ್ತನಾಗಿ ನಾಶವಿಲ್ಲದ್ದನ್ನು ಪಡೆಯಲು ಪ್ರಯತ್ನಿಸಬೇಕೆಂದು (ಹೊರಡುವನು).

**ಪ್ರತಿಪಿತ್ಸುರಸಾವವಿನಾಶಿಪದಂ**
**ಯತಿಧರ್ಮರತೋ ಯತಿಮೇವ ಗುರುಮ್ ।**
**ವಿದಿತಾತ್ಮಕಲಂ ಸಮುಪೇತ್ಯ ಕವಿಃ**
**ಪ್ರಣಿಪತ್ಯ ನಿವೇದಿತವಾನ್ ಸ್ವಮತಮ್ ॥ ೧೦ ॥**

೧೦. ವಿನಾಶವಿಲ್ಲದ ಪರಮಪದವನ್ನು ಪಡೆಯಲಿಚ್ಛಿಸಿ ಯತಿಧರ್ಮನಿಷ್ಠನಾದ ಒಬ್ಬ (ಶಿಷ್ಯನು) ಯತಿಯೂ, ಆತ್ಮವಿದನೂ ಆದ ಗುರುವನ್ನು ಬಳಿ

ಸಾರಿದವನಾಗಿ, ಕವಿಯಾದ ಆತನು ನಮಸ್ಕರಿಸಿ ತನ್ನ ಅಭಿಪ್ರಾಯವನ್ನು ನಿವೇದಿಸಿಕೊಂಡನು.

## ೭. ತೋಟಕಸ್ತುತಿ - ೨

(ಅಧ್ಯಾತ್ಮಶಂಕರವಿಜಯ, ಪುಟ- ೮೩)

**ಭಗವನ್ನುದಧೌ ಮೃತಿಜನ್ಮಜಲೇ**
**ಸುಖದುಃಖಝಷೇ ಪತಿತಂ ವ್ಯಥಿತಮ್ ।**
**ಕೃಪಯಾ ಶರಣಾಗತಮುದ್ಧರ ಮಾ-**
**ಮನುಶಾಧ್ಯುಪಸನ್ನಮನನ್ಯಗತಿಮ್** ॥ ೧ ॥

೧. (ಶಿಷ್ಯನಿಂತೆಂದನು:) ಪೂಜ್ಯರೆ, ಜನನಮರಣಗಳೆಂಬ ನೀರಿನಿಂದಲೂ ಸುಖದುಃಖಗಳೆಂಬ ಮೀನುಗಳಿಂದಲೂ ಕೂಡಿದ ಸಂಸಾರಸಮುದ್ರದಲ್ಲಿ ಬಿದ್ದು ವ್ಯಥೆಪಡುತ್ತಿರುವ ಶರಣಾಗತನಾದ ನನ್ನನ್ನು ಕೃಪೆಯಿಂದ ಮೇಲೆತ್ತಿ ಕಾಪಾಡಿರಿ. ಹಾಗೂ ಬೇರೆಯ ದಿಕ್ಕಿಲ್ಲದೆ ಗುರುಸಮೀಪಕ್ಕೆ ಬಂದಿರುವ ನನ್ನನ್ನು ಅನುಶಾಸನ ಮಾಡಿರಿ.

**ವಿನಿವರ್ತ್ಯ ರತಿಂ ವಿಷಯೇ ವಿಷಮಾಂ**
**ಪರಿಮುಚ್ಯ ಶರೀರವಿಬದ್ಧಮತಿಮ್ ।**
**ಪರಮಾತ್ಮಪದೇ ಭವ ನಿತ್ಯರತೋ**
**ಜಹಿ ಮೋಹಮಯಂ ಭ್ರಮಮಾತ್ಮಮತೇ** ॥ ೨ ॥

೨. (ಗುರುವಿಂತೆಂದನು) : ಎಲೌ ಆತ್ಮಬುದ್ಧಿಯವನೆ, ವಿಷಯಗಳಲ್ಲಿರುವ ತಪ್ಪಾದ ವ್ಯಾಮೋಹವನ್ನು ಕಳೆದುಕೊಂಡವನಾಗಿ, ಶರೀರವೇ ನಾನೆಂಬ ಭ್ರಾಂತಿಬುದ್ಧಿಯನ್ನು ಕೈಬಿಟ್ಟು ನಿತ್ಯವೂ ಪರಮಾತ್ಮಸ್ವರೂಪದಲ್ಲಿ ನಿರತನಾಗು. ಮೋಹಮಯವಾದ ಈ ಭ್ರಾಂತಿಯನ್ನು ತ್ಯಜಿಸು.

**ವಿಸೃಜಾನ್ನಮಯಾದಿಷು ಪಂಚಸು ತಾ-**
**ಮಹಮಸ್ಮಿ ಮಮೇತಿ ಮತಿಂ ಸತತಮ್ ।**
**ದೃಶಿರೂಪಮನಂತಮಜಂ ವಿಗುಣಂ**
**ಹೃದಯಸ್ಥಮವೇಹಿ ಸದಾಽಹಮಿತಿ** ॥ ೩ ॥

೩. ಅನ್ನಮಯಾದಿ ಐದು (ಕೋಶ) ಗಳಲ್ಲಿ ನಾನು ನನ್ನದೆಂಬ ಬುದ್ಧಿಯನ್ನು ಯಾವಾಗಲೂ ಬಿಡು. ದೃಗ್ರೂಪನೂ ಅನಂತನೂ ಅಜನೂ ನಿರ್ಗುಣನೂ ಆದ ಆತ್ಮನು ಹೃದಯದಲ್ಲಿರುವನೆಂದೂ ಅವನೇ ನಾನೆಂದೂ ತಿಳಿಯುವವನಾಗು.

**ಜಲಭೇದಕೃತಾ ಬಹುತೇವ ರವೇ-**
**ರ್ಘಟಿಕಾದಿಕೃತಾ ನಭಸೋಽಪಿ ಯಥಾ ।**
**ಮತಿಭೇದಕೃತಾ ತು ತಥಾ ಬಹುತಾ**
**ತವ ಬುದ್ಧಿದೃಶೋಽವಿಕೃತಸ್ಯ ಸದಾ** ॥ ೪ ॥

೪. ಸೂರ್ಯನಿಗೆ ನೀರಿನ ಉಪಾಧಿಗಳ ಭೇದದಿಂದ ಬಹುತ್ವವು ಹೇಗೋ, ಆಕಾಶಕ್ಕೂ ಗಡಿಗೆ ಮುಂತಾದ ಉಪಾಧಿಯಿಂದುಂಟಾದ ಭೇದವು ಹೇಗೋ ಹಾಗೆಯೇ ಆತ್ಮನಲ್ಲಿ ಬುದ್ಧಿಭೇದದಿಂದ ಬಹುತ್ವವುಂಟಾಗಿರವದು. ಅವಿಕಾರಿಯೂ ಬುದ್ಧಿಯನ್ನೂ ನೋಡುವವನೂ ಆದ ನಿನಗೆ ಯಾವಾಗಲೂ ಭೇದಸಂಪರ್ಕವಿಲ್ಲ.

**ದಿನಕೃತ್ಪ್ರಭಯಾ ಸದೃಶೇನ ಸದಾ**
**ಜನಚಿತ್ತಗತಂ ಸಕಲಂ ಸ್ವಚಿತಾ ।**
**ವಿದಿತಂ ಭವತಾಽವಿಕೃತೇನ ಸದಾ**
**ಯತ ಏವಮತೋಽಸಿ ಸದೇವ ಸದಾ** ॥ ೫ ॥

೫. ಸೂರ್ಯನ ಬೆಳಕಿಗೆ ಸಮಾನವಾದ ತನ್ನ ಚಿತ್ಸ್ವರೂಪದಿಂದ ಜೀವರುಗಳ ಚಿತ್ತಗತವಾದ ಎಲ್ಲವನ್ನೂ ಬೆಳಗುವ ಮೂಲಕ ಸಾಕ್ಷಿಯೆನಿಸಿರುವ ನಿನ್ನ ಅವಿಕ್ರಿಯಸ್ವರೂಪದಿಂದ ಎಲ್ಲವೂ ನಿನಗೇ ವಿಷಯವಾಗಿದ್ದು ಅರಿಯಲ್ಪಟ್ಟಿದೆ. ಹೀಗಿರುವದರಿಂದ ನೀನು ಯಾವಾಗಲೂ ಸದ್ರೂಪನೇ ಆಗಿರುವೆ.

---

# ೮. ಶಿವಭುಜಂಗಪ್ರಯಾತಸ್ತೋತ್ರ

(ಅಧ್ಯಾತ್ಮಶಂಕರವಿಜಯ, ಪುಟ-೮೫)

**ಗಲದ್ದಾನಗಂಡಂ ಮಿಲದ್ ಭೃಂಗಷಂಡಂ ।**
**ಚಲಚ್ಚಾರುಶುಂಡಂ ಜಗತ್ರಾಣಶೌಂಡಮ್ ।**
**ಲಸದ್ದಂತಕಾಂಡಂ ವಿಪದ್ಭಂಗಚಂಡಂ**
**ಶಿವಪ್ರೇಮಪಿಂಡಂ ಭಜೇ ವಕ್ರತುಂಡಮ್** ॥ ೧ ॥

೧. ಗಂಡಸ್ಥಲದಲ್ಲಿ ಮದೋದಕವನ್ನು ಸುರಿಸುತ್ತಿರುವ, ಹಾಗೂ ಅದಕ್ಕೆ ಮುತ್ತಿರುವ ದುಂಬಿಗಳ ಸಮೂಹವುಳ್ಳವನಾದ, ಸುಂದರವಾದ ಸೊಂಡಿಲುಳ್ಳ, ಜಗತ್ತನ್ನು ಕಾಪಾಡುವದರಲ್ಲಿ ಸಮರ್ಥನಾದ, ಹೊಳೆಯುತ್ತಿರುವ ದಂತಭಾಗವುಳ್ಳ, ಮತ್ತು ಸಂಕಟಗಳನ್ನು ಪರಿಹರಿಸುವದರಲ್ಲಿ ಗಟ್ಟಿಗನಾದ, ಈಶ್ವರನ ಪ್ರಿಯಪುತ್ರನಾದ ವಕ್ರತುಂಡನನ್ನು ಭಜಿಸುವೆನು. (ಇದು ಮಂಗಳಶ್ಲೋಕವು).

**ಅನಾದ್ಯಂತಮಾದ್ಯಂ ಪರಂ ತತ್ತ್ವಮರ್ಥಂ**
**ಚಿದಾಕಾರಮೇಕಂ ತುರೀಯಂ ತ್ವಮೇಯಮ್ ।**
**ಹರಿಬ್ರಹ್ಮಮೃಗ್ಯಂ ಪರಬ್ರಹ್ಮರೂಪಂ**
**ಮನೋವಾಗತೀತಂ ಮಹಃ ಶೈವಮೀಡೇ** ॥ ೨ ॥

೨. ಆದ್ಯಂತರಹಿತನೂ ಜಗದಾದ್ಯನೂ ಪರನೂ ತತ್ತ್ವಂಪದಗಳ ಲಕ್ಷ್ಯಾರ್ಥನೂ ಚಿದಾಕಾರನೂ ಏಕನೂ ತುರೀಯನೂ ಅಪ್ರಮೇಯನೂ, ವಿಷ್ಣು-ಬ್ರಹ್ಮರುಗಳಿಂದ ವಿಚಾರಿಸಲ್ಪಡುವವನೂ ಪರಬ್ರಹ್ಮರೂಪನೂ ವಾಙ್ಮನಸ್ಸುಗಳನ್ನು ಮೀರಿರುವವನೂ ಆದ ಶಿವನೆಂಬ ಮಹಾತೇಜಸ್ಸನ್ನು ಸ್ತುತಿಸುವೆನು.

**ಸ್ವಶಕ್ತ್ಯಾದಿಶಕ್ತ್ಯಂತಸಿಂಹಾಸನಸ್ಥಂ**
**ಮನೋಹಾರಿಸರ್ವಾಂಗರತ್ನಾದಿಭೂಷಮ್ ।**
**ಜಟಾಚಂದ್ರಗಂಗಾಸ್ಥಿಸಂಪರ್ಕಮೌಲಿಂ**
**ಪರಾಶಕ್ತಿಮಿತ್ರಂ ನುಮಃ ಪಂಚವಕ್ತ್ರಮ್** ॥ ೩ ॥

೩. ತನ್ನ ಶಕ್ತಿಯಿಂದಾರಂಭಿಸಿ ಆದಿಶಕ್ತಿಯಾದ ದೇವಿಯನ್ನೊಳಗೊಂಡು ನಿರ್ಮಿತವಾಗಿರುವ ಸಿಂಹಾಸನದಲ್ಲಿ ಕುಳಿತಿರುವವನೂ ಎಲ್ಲಾ ಅವಯವಗಳಲ್ಲಿಯೂ ಮನೋಹರವಾದ ರತ್ನಮಯವಾದ ಒಡವೆಗಳನ್ನು ಧರಿಸಿರುವವನಾಗಿಯೂ ಜಟಾಜೂಟದಲ್ಲಿ ಚಂದ್ರ, ಗಂಗೆ, (ಆಕೆಯಲ್ಲಿ ಬಿದ್ದ) ಆಸ್ಥಿಗಳು- ಇವುಗಳ ಸಂಪರ್ಕವುಳ್ಳವನೂ ಆದ, ಐದು ಮುಖವುಳ್ಳವನೂ ಪರಾಶಕ್ತಿದೇವಿಯ ಆಪ್ತನೂ ಆದವನನ್ನು ನಮಸ್ಕರಿಸುವೆವು.

**ಶಿವೇಶಾನತತ್ಪೂರುಷಾಘೋರವಾಮಾ -**
**ದಿಭಿಃ ಬ್ರಹ್ಮಭಿರ್ಹೃನ್ಮುಖ್ಯೈಃ ಷಡ್ಭಿರಂಗೈಃ ।**
**ಅನೌಪಮ್ಯಷಟ್ತ್ರಿಂಶಕಂ ತತ್ತ್ವ ವಿದ್ಯಾ -**
**ಮತೀತಂ ಪರಂ ತ್ವಾಂ ಕಥಂ ವೇತ್ತಿ ಕೋ ವಾ** ॥ ೪ ॥

೪. ಶಿವ- ಈಶಾನ- ತತ್ಪುರುಷ- ಅಘೋರ - ವಾಮದೇವನೇ ಮೊದಲಾದ ಬ್ರಹ್ಮರುಗಳಿಂದಲೂ ಹೃದಯವೇ ಮುಂತಾದ ಆರು ಅಂಗಗಳಿಂದಲೂ ಕೂಡಿರುವನಾದರೂ ಉಪಮಾರಹಿತವಾದ ಮೂವತ್ತಾರು ತತ್ತ್ವಗಳ ಶಿವವಿದ್ಯೆಯನ್ನೂ ಮೀರಿ ಇದ್ದುಕೊಂಡಿರುವ ನಿನ್ನನ್ನು ಯಾವನು ತಾನೆ ಹೇಗೆ ತಾನೆ ತಿಳಿದಾನು?

**ಪ್ರವಾಲಪ್ರವಾಹಪ್ರಭಾಶೋಣಮರ್ಧಂ**
**ಮರುತ್ವನ್ಮಣಿಶ್ರೀಮಹಃಶ್ಯಾಮಮರ್ಧಮ್ ।**
**ಗುಣಸ್ಯೂತಮೇಕಂ ವಪುಶ್ಚೈಕಮನ್ತಃ**
**ಸ್ಮರಾಮಿ ಸ್ಮರಾಪತ್ತಿಸಂಪತ್ತಿಹೇತುಮ್** ॥ ೫ ॥

೫. ಹವಳದ ಕಾಂತಿಯ ಪ್ರವಾಹದ ಬೆಳಕಿನಂತೆ ನಸುಗೆಂಪಾದ, ಹಾಗೂ ಮರಕತಮಣಿಯ ಕಾಂತಿಯ ತೇಜಸ್ಸಿನಂತೆ ನೀಲವಾದ ಅರ್ಧರ್ಧಭಾಗವುಳ್ಳ ಗುಣ (ವರ್ಣ)ದಿಂದ ಹೆಣೆಯಲ್ಪಟ್ಟ ಒಂದೇ ಶರೀರವುಳ್ಳ (ಅರ್ಧನಾರೀಶ್ವರನಾದ) ದೇವನನ್ನು- ಕಾಮನ ಬಾಧೆಯೆಂಬ ಭಯದಿಂದ ಕಾಪಾಡುವ ಸಂಪತ್ತೆಂಬ ಐಶ್ವರ್ಯಕಾರಣನಾದ- (ಶಿವನನ್ನು) ಸ್ಮರಿಸುತ್ತೇನೆ.

**ಸ್ವಸೇವಾಸಮಾಯಾತದೇವಾಸುರೇಂದ್ರಾ-**
**ನಮನ್ ಮೌಲಿಮಂದಾರಮಾಲಾಭಿಷಿಕ್ತಮ್ ।**
**ನಮಸ್ಯಾಮಿ ಶಂಭೋ ಪದಾಂಭೋರುಹಂ ತೇ**
**ಭವಾಂಬೋಧಿಪೋತಂ ಭವಾನೀವಿಭಾವ್ಯಮ್ ॥ ೬ ॥**

೬. ಎಲೈ ಶಂಭುವೆ, ನಿನ್ನ ಸೇವೆಗಾಗಿ ಬಳಿಗೆ ಬಂದ ದೇವೇಂದ್ರ-ರಾಕ್ಷಸೇಂದ್ರರುಗಳು ನಮಿಸಲು ಬಗ್ಗಿದಾಗ ಅವರ ಕಿರೀಟಗಳಲ್ಲಿದ್ದ ಮಂದಾರಮಾಲೆಗಳಿಂದ ಸ್ಪರ್ಶಿಸಲ್ಪಟ್ಟ ಹಾಗೂ ಸಂಸಾರಸಾಗರವನ್ನು ದಾಟುವ ತೆಪ್ಪದಂತಿರುವ, ಮತ್ತು ಪಾರ್ವತಿಯಿಂದ ಅರ್ಚಿಸಲ್ಪಟ್ಟ ನಿನ್ನ ಪಾದಾರವಿಂದಗಳನ್ನು ನಮಸ್ಕರಿಸುವೆನು.

**ಜಗನ್ನಾಥ ಮನ್ನಾಥ ಗೌರೀಸನಾಥ**
**ಪ್ರಪನ್ನಾನುಕಂಪಿನ್ ವಿಪನ್ನಾರ್ತಿಹಾರಿನ್ ।**
**ಮಹಃಸ್ತೋಮಮೂರ್ತೇ ಸಮಸ್ತೈಕಬಂಧೋ**
**ನಮಸ್ತೇ ನಮಸ್ತೇ ಪುನಸ್ತೇ ನಮೋಽಸ್ತು ॥ ೭ ॥**

೭. ಎಲೈ ಜಗನ್ನಾಥನೆ, ನನ್ನ ಪ್ರಭುವೆ, ಗೌರಿಯೊಡನಿರುವವನೆ, ಶರಣಾಗತರಲ್ಲಿ ಅನುಕಂಪೆಯುಳ್ಳವನೆ, ದುಃಖಿತರ ಸಂಕಟವನ್ನು ಕಳೆಯುವವನೆ, ತೇಜಃಪುಂಜಮೂರ್ತಿಯೆ, ಎಲ್ಲರಿಗೂ ಮುಖ್ಯಬಂಧುವೆ, ನಿನಗೆ ಮತ್ತೆ ಮತ್ತೆ ನಮಸ್ಕಾರಗಳು.

**ಮಹಾದೇವ ದೇವೇಶ ದೇವಾದಿದೇವ**
**ಸ್ಮರಾರೇ ಪುರಾರೇ ಯಮಾರೇ ಹರೇತಿ ।**
**ಬ್ರುವಾಣಃ ಸ್ಮರಿಷ್ಯಾಮಿ ಭಕ್ತ್ಯಾ ಭವಂತಂ**
**ತತೋ ಮೇ ದಯಾಶೀಲ ದೇವ ಪ್ರಸೀದ ॥ ೮ ॥**

೮. ಎಲೈ ಮಹಾದೇವನೆ, ದೇವೇಶನೆ, ದೇವಾದಿದೇವನೆ, ಮನ್ಮಥ ವೈರಿಯೆ, ಪುರಶತ್ರುವೆ, ಯಮವೈರಿಯೆ, ಹರನೆ- ಎಂದು ಹೇಳುತ್ತಾ ಭಕ್ತಿಯಿಂದ ನಿನ್ನನ್ನು ನೆನೆಯುವೆನು. ಅನಂತರ ಎಲೈ ದಯಾಶೀಲನೆ, ದೇವನೆ, ಪ್ರಸನ್ನನಾಗು.

**ವಿರೂಪಾಕ್ಷ ವಿಶ್ವೇಶ ವಿಶ್ವಾಧಿಪೇಶ**
**ತ್ರಯೀಮೂಲ ಶಂಭೋ ಶಿವ ತ್ರ್ಯಂಬಕ ತ್ವಮ್ ।**
**ಪ್ರಸೀದ ಸ್ಮರ ತ್ರಾಹಿ ಪುಷ್ಯಾವ ಪುಷ್ಯ**
**ಕ್ಷಮಸ್ವಾಪ್ನುಹೀತಿ ಕ್ಷಪಾ ಹಿ ಕ್ಷಿಪಾಮಃ ॥ ೯ ॥**

೯. "ಎಲೈ ವಿರೂಪಾಕ್ಷನೆ, ವಿಶ್ವೇಶನೆ, ಪ್ರಪಂಚಕ್ಕೆಲ್ಲ ಒಡೆಯನೆ, ಪತಿಯೆ, ವೇದಕಾರಣನೆ, ಶಂಭುವೆ, ಶಿವನೆ, ಮುಕ್ಕಣ್ಣನೆ, ನೀನು ಪ್ರಸನ್ನನಾಗು, (ನಮ್ಮನ್ನು) ಜ್ಞಾಪಿಸಿಕೊ, ಕಾಪಾಡು, ಪೋಷಿಸು, ರಕ್ಷಿಸು; ಎಲೈ ಪೋಷಕನೆ, ನಮ್ಮನ್ನು ಕ್ಷಮಿಸು; ನಮ್ಮನ್ನು ಬಳಿಸಾರುವವನಾಗು" - ಹೀಗೆಂದುಕೊಳ್ಳುತ್ತಾ ರಾತ್ರೆಯನ್ನೆಲ್ಲ ಕಳೆಯುವೆವು.

**ತ್ವದನ್ಯಃ ಶರಣ್ಯಃ ಪ್ರಪನ್ನಸ್ಯ ನೇತಿ**
**ಪ್ರಸೀದ ಸ್ಮರನ್ನೇವ ಹನ್ಯಾಶು ದೈನ್ಯಮ್ ।**
**ನ ಚೇತ್ ತೇ ಭವೇದ್ ಭಕ್ತವಾತ್ಸಲ್ಯಹಾನಿಃ**
**ತತೋ ಮೇ ದಯಾಲೋ ದಯಾಂ ಸಂವಿಧೇಹಿ ॥ ೧೦ ॥**

೧೦. ಪ್ರಪನ್ನನಾದವನಿಗೆ (ಬಳಿಸಾರಿದವನಿಗೆ) ನಿನ್ನನ್ನು ಬಿಟ್ಟರೆ ಬೇರೊಬ್ಬನು ಉದ್ಧಾರಮಾಡುವವನು ಇಲ್ಲವೆಂಬುದನ್ನು ನೆನಪಿಟ್ಟುಕೊಂಡು ಕೂಡಲೆ ಪ್ರಸನ್ನನಾಗು. ದೈನ್ಯವನ್ನು ಕಳೆಯುವವನಾಗು. ಹಾಗಿಲ್ಲವಾದರೆ ನೀನು ಭಕ್ತವತ್ಸಲನೆಂಬುದಕ್ಕೆ ಹಾನಿಯಾದೀತು. ಆದ್ದರಿಂದ ಎಲೈ ದಯಾಳುವೆ, ನನ್ನ ಮೇಲೆ ದಯೆಯನ್ನು ತೋರುವವನಾಗು.

**ಅಯಂ ದಾನಕಾಲಸ್ತ್ವಹಂ ದಾನಪಾತ್ರಂ**
**ಭವಾನ್ನಾಥ ದಾತಾ ತ್ವದನ್ಯಂ ನ ಯಾಚೇ ।**
**ಭವದ್ಭಕ್ತಿಮೇವ ಸ್ಥಿರಾಂ ದೇಹಿ ಮಹ್ಯಂ**
**ಕೃಪಾಶೀಲ ಶಂಭೋ ಕೃತಾರ್ಥೋಽಸ್ಮಿ ತಸ್ಮಾತ್ ॥ ೧೦ ॥**

೧೧. ಇದು ದಾನಮಾಡಲು ಸಮಯವು. ನಾನಾದರೊ, ದಾನಕ್ಕೆ ತಕ್ಕವನಿರುವೆನು. ನೀನಾದರೋ ಎಲೈ ಪ್ರಭುವೆ, ದಾನಮಾಡುವವನಾಗಿರುವೆ. ನಿನ್ನನ್ನು ಹೊರತು ಬೇರೆ ಯಾರನ್ನೂ ನಾನು ಬೇಡುವದೂ ಇಲ್ಲ. ನನಗೆ ನಿನ್ನಲ್ಲಿ ಸ್ಥಿರವಾದ ಭಕ್ತಿಯನ್ನು ಕೊಡು. ಎಲೈ ಕೃಪಾಶೀಲನೆ, ಶಂಭುವೆ, ಅದರಿಂದ ನಾನು ಕೃತಾರ್ಥನಾಗುವೆನು.

**ಪಶುಂ ವೇತ್ಸಿ ಚೇನ್ಮಾಂ ತ್ವಮೇವಾಧಿರೂಢಃ**
**ಕಲಂಕೀತಿ ವಾ ಮೂರ್ಧ್ನಿ ಧತ್ಸೇ ತ್ವಮೇವ ।**
**ದ್ವಿಜಿಹ್ವಃ ಪುನಃ ಸೋಽಪಿ ತೇ ಕಂಠಭೂಷಾ**
**ತ್ವದಂಗೀಕೃತಾಃ ಶರ್ವ ಸರ್ವೇಽಪಿ ಧನ್ಯಾಃ ॥ ೧೨ ॥**

೧೨. ನಾನೊಬ್ಬ ಪಶು (ಅಜ್ಞ) ವೆಂದು ನೀನು ಭಾವಿಸುವೆಯಾದರೆ ಪಶುವಾದ ನಂದಿಯನ್ನು ನೀನೇ ಏರಿರುತ್ತೀಯೆ. ನಾನೊಬ್ಬ ಪಾಪಿ (ಕಳಂಕಿ) ಯೆಂದು ತಿಳಿಯುವೆಯಾದರೆ ಕಳಂಕವುಳ್ಳ ಚಂದ್ರನನ್ನು ನೀನೇ ತಲೆಯಮೇಲೆ ಹೊತ್ತಿರುವೆ. ನಾನು ಎರಡು ನಾಲಗೆಯವನೆಂದು ತಿಳಿಯುವೆಯಾದರೆ ಅದೇ (ಎರಡು ನಾಲಗೆಯ) ಹಾವನ್ನೇ ನೀನು ಕಂಠಾಭರಣವಾಗಿ ಮಾಡಿಕೊಂಡಿರುವೆ. ಎಲೈ ಶರ್ವನೆ, ನಿನ್ನಿಂದ ಸ್ವೀಕರಿಸಲ್ಪಟ್ಟವರೆಲ್ಲರೂ ಧನ್ಯರೇ ಸರಿ.

**ನ ಶಕ್ನೋಮಿ ಕರ್ತುಂ ಪರದ್ರೋಹಲೇಶಂ**
**ಕಥಂ ಪ್ರೀಯಸೇ ತ್ವಂ ನ ಜಾನೇ ಗಿರೀಶ ।**
**ತಥಾ ಹಿ ಪ್ರಸನ್ನೋಽಸಿ ಕಸ್ಯಾಪಿ ಕಾಂತಾ -**
**ಸುತದ್ರೋಹಿಣೋ ವಾ ಪಿತೃದ್ರೋಹಿಣೋ ವಾ ॥ ೧೩ ॥**

೧೩. ಎಲೈ ಗಿರೀಶನೆ, ಬೇರೊಬ್ಬರಿಗೆ ದ್ರೋಹವನ್ನು ಲೇಶಮಾತ್ರವೂ ಮಾಡಲು ನಾನು ಸಮರ್ಥನಾಗಿಲ್ಲ. ಹೀಗಿರುವಲ್ಲಿ ನನಗೆ ನೀನು ಹೇಗೆ ತಾನೆ ಒಲಿಯುವೆಯೋ ನಾನು ಕಾಣೆನು. ಹೇಗೆಂದರೆ ನೀನು ಹೆಂಡತಿ, ಮಗ, ತಂದೆಯವರಿಗೆ ದ್ರೋಹಮಾಡಿರುವ ಯಾರಿಗಾದರೂ ಪ್ರಸನ್ನನಾಗಿಯೇ ಇರುವೆ.

**ಸ್ತುತಿಂ ಧ್ಯಾನಮರ್ಚಾಂ ಯಥಾವದ್ ವಿಧಾತುಂ**
**ಭಜನ್ನಪ್ಯಜಾನನ್ ಮಹೇಶಾವಲಂಬೇ ।**
**ವಸಂತಂ ಸುತಂ ತ್ರಾತುಮಗ್ರೇ ಮೃಕಂಡೋ-**
**ರ್ಯಮಪ್ರಾಣನಿರ್ವಾಪಣಂ ತ್ವತ್ಪದಾಬ್ಜಮ್ ॥ ೧೪ ॥**

೧೪. ಎಲೈ ಮಹೇಶನೆ, ನಿನ್ನ ಸ್ತೋತ್ರ, ಧ್ಯಾನ, ಪೂಜೆಗಳನ್ನು ಯೋಗ್ಯರೀತಿಯಿಂದ ಮಾಡಲು ಅರಿಯದವನಾಗಿಯೇ ನಿನ್ನನ್ನು ಭಜಿಸುತ್ತಾ ಆಶ್ರಯಿಸಿರುವೆನು. ಏಕೆಂದರೆ ನಿನ್ನ ಪಾದಾರವಿಂದವು ಎದುರಿಗೇ ಇದ್ದ ಮೃಕಂಡುಮುನಿಯ ಪುತ್ರನನ್ನು ಕಾಪಾಡಿ ಯಮನ ಪ್ರಾಣವನ್ನೇ ನುಂಗುವದರಲ್ಲಿ ಸಮರ್ಥವೆಂಬುದು ಕಂಡುಬಂದಿದೆಯಲ್ಲವೆ?

**ಅಕಂಠೇ ಕಲಂಕಾದನಂಗೇ ಭುಜಂಗಾ-**
**ದಪಾಣೌ ಕಪಾಲಾದಫಾಲೇಽನಲಾಕ್ಷಾತ್ ।**
**ಅಮೌಲೌ ಶಶಾಂಕಾದವಾಮೇ ಕಲತ್ರಾ-**
**ದಹಂ ದೇವಮನ್ಯಂ ನ ಮನ್ಯೇ ನ ಮನ್ಯೇ ॥ ೧೫ ॥**

೧೫. ಕಂಠದಲ್ಲಿ (ವಿಷನಿಮಿತ್ತವಾದ) ಗುರುತಿಲ್ಲದ, ಶರೀರದಲ್ಲಿ ನಾಗಗಳ (ಆಭರಣ) ವಿಲ್ಲದ, ಕೈಯಲ್ಲಿ (ಬ್ರಹ್ಮ) ಕಪಾಲವಿಲ್ಲದ, ಹಣೆಯಲ್ಲಿ (ಪ್ರಲಯಾಗ್ನಿ) ಯಿಲ್ಲದ, ಜಟಾಜೂಟದಲ್ಲಿ ಚಂದ್ರನಿಲ್ಲದ, ಎಡಭಾಗದಲ್ಲಿ ಪತ್ನಿಯಾದ (ಪಾರ್ವತಿ) ಯಿಲ್ಲದ ಬೇರೆಯ ಯಾವ ದೇವನನ್ನೂ ನಾನರಿಯೆನು. ಕಾಣೆನು.

**ಶಿರೋದೃಕ್ಷಿಹೃದ್ರೋಗಶೂಲಪ್ರಮೇಹ**
**ಜ್ವರಾರ್ಶೋ ಜರಾಯಕ್ಷ್ಮಹಿಕ್ಕಾವಿಷಾರ್ತಾನ್ ।**
**ತ್ವಮಾದ್ಯೋ ಭಿಷಕ್ ಭೇಷಜಂ ಭಸ್ಮ ಶಂಭೋ**
**ತ್ವಮುಲ್ಲಾಘಯಾಸ್ಮಾನ್ ವಪುರ್ಲಾಘವಾಯ ॥ ೧೬ ॥**

೧೬. ತಲೆ, ಕಣ್ಣು, ಹೃದಯಗಳಲ್ಲಿ ವೇದನೆ, ಹೊಟ್ಟೆನೋವು, ಗುಹ್ಯ ರೋಗ, ಜ್ವರ, ಮೂಲವ್ಯಾಧಿ, ಮುಪ್ಪು, ಕ್ಷಯ, ಹಿಕ್ಕರೋಗ, ವಿಷಪ್ರಯೋಗ ಇಂಥ ಎಲ್ಲಾ ರೋಗಗಳಿಂದ ನರಳುತ್ತಿರುವವರಿಗೆ ಎಲೈ ಶಂಭುವೆ, ನೀನೇ ಹಿರಿಯ ವೈದ್ಯನು. ಭಸ್ಮವೇ ಔಷಧವು. ಆದ್ದರಿಂದ ನಮ್ಮ ದೇಹವು ಹಗುರವಾಗಿ (ಆರೋಗ್ಯದಿಂದ ಕೂಡಿರುವದಕ್ಕಾಗಿ) ನೀನು ಚಿಕಿತ್ಸೆ ಮಾಡು.

**ದರಿದ್ರೋಽಸ್ಮ್ಯಭದ್ರೋಽಸ್ಮಿ ಭಗ್ನೋಽಸ್ಮಿ ದೂಯೇ**
**ವಿಷಣ್ಣೋಽಸ್ಮಿ ಸನ್ನೋಽಸ್ಮಿ ಖಿನ್ನೋಽಸ್ಮಿ ಚಾಹಮ್ ।**
**ಭವಾನ್ ಪ್ರಾಣಿನಾಮಂತರಾತ್ಮಾಸಿ ಶಂಭೋ**
**ಮಮಾಧಿಂ ನ ವೇತ್ಸಿ ಪ್ರಭೋ ರಕ್ಷ ಮಾಂ ತ್ವಮ್ ॥ ೧೭ ॥**

೧೭. ಶಂಭುವೆ, ನಾನು ದರಿದ್ರನು ; ಅಶಕ್ತನು ; ಪತಿತನು ; ದುಃಖಿಯಾಗಿರುವೆನು. ವಿಷಾದವನ್ನು ಹೊಂದಿರುವೆನು. ಕೃಶನಾಗಿರುವೆನು ; ಖಿನ್ನನಾಗಿರುವೆನು ; ನೀನು ಎಲ್ಲಾ ಪ್ರಾಣಿಗಳ ಅಂತರಾತ್ಮನಾಗಿರುವೆ. ನನ್ನ ಮನೋವ್ಯಥೆಯನ್ನು ಅರಿಯದೆ ಇರುವೆಯಾ? ಪ್ರಭುವೆ, ನನ್ನನ್ನು ಕಾಪಾಡು.

**ತ್ವದಕ್ಷ್ಣೋಃ ಕಟಾಕ್ಷಃ ಪತೇತ್ ತ್ರ್ಯಕ್ಷ ಯತ್ರ**
**ಕ್ಷಣಂ ಕ್ಷ್ಮಾ ಚ ಲಕ್ಷ್ಮೀಃ ಸ್ವಯಂ ತಂ ವೃಣಾತೇ ।**
**ಕಿರೀಟಸ್ಫುರಚ್ಚಾಮರಛತ್ರಮಾಲಾ**
**ಕಲಾಚೀಗಜಕ್ಷೌಮಭೂಷಾವಿಶೇಷೈಃ ॥ ೧೮ ॥**

೧೮. ಎಲೈ ಮುಕ್ಕಣ್ಣನೆ, ನಿನ್ನ ಎರಡು ಕಣ್ಣುಗಳ ಕಟಾಕ್ಷವು ಕ್ಷಣಕಾಲ ಎಲ್ಲಿ ಬೀಳುವದೋ ಅಂಥವನನ್ನು ಭೂದೇವಿಯೂ ಮಹಾಲಕ್ಷ್ಮಿಯೂ ತಾವಾಗಿಯೇ ವರಿಸುವರು. ಅಂಥವನು ಕಿರೀಟ, ಹೊಳೆಯುವ ಚಾಮರಗಳು, ಛತ್ರಿ, ಪುಷ್ಪಮಾಲೆ,

ಕಲಾಚಿ, (?) ಆನೆ, ರೇಷ್ಮೆವಸ್ತ್ರಗಳೇ ಮೊದಲಾದ ಅಲಂಕಾರಗಳಿಂದ ಕೂಡಿದವನಾಗುವನು.

**ಭವಾನ್ಯೈ ಭವಾಯಾಪಿ ಮಾತ್ರೇ ಚ ಪಿತ್ರೇ**
**ಮೃಡಾನ್ಯೈ ಮೃಡಾಯಾಪ್ಯಘಘ್ನ್ಯೈ ಮಖಘ್ನೇ ।**
**ಶಿವಾಂಗ್ಯೈ ಶಿವಾಂಗಾಯ ಕುರ್ಮಃ ಶಿವಾಯೈ**
**ಶಿವಾಯಾಂಬಿಕಾಯೈ ನಮಸ್ತ್ರ್ಯಂಬಕಾಯ ॥ ೧೯ ॥**

೧೯. ತಾಯಿಯಾದ ಭವಾನಿಗೂ ಮೃಡಾನಿಗೂ ಪಾಪಹಾರಿಣಿಗೂ ಮಂಗಳಾಂಗಿಯಾದವಳಿಗೂ ಶಿವೆಗೂ ಅಂಬಿಕೆಗೂ ಮತ್ತು ತಂದೆಯಾದ ಭವನಿಗೂ ಮೃಡನಿಗೂ (ದಕ್ಷ) ಯಜ್ಞನಾಶಕನಿಗೂ ಮಂಗಳಶರೀರನಿಗೂ ಶಿವನಿಗೂ ಮುಕ್ಕಣ್ಣನೆನಿಸಿದವನಿಗೂ ವಂದನೆಗಳು.

**ಭವದ್ಗೌರವಂ ಮಲ್ಲಘುತ್ವಂ ವಿದಿತ್ವಾ**
**ಪ್ರಭೋ ರಕ್ಷ ಕಾರುಣ್ಯದೃಷ್ಟ್ಯಾನುಗಂ ಮಾಮ್ ।**
**ಶಿವಾತ್ಮಾನುಭಾವ ಸ್ತುತಾವಕ್ಷಮೋಽಹಂ**
**ಸ್ವಶಕ್ತ್ಯಾ ಕೃತಂ ಮೇಽಪರಾಧಂ ಕ್ಷಮಸ್ವ ॥ ೨೦ ॥**

೨೦. ಪ್ರಭುವೆ, ನಿನ್ನ ಹೆಚ್ಚುಗಾರಿಕೆಯನ್ನೂ ನನ್ನ ಅಲ್ಪತ್ವವನ್ನೂ ಅರಿತವನಾಗಿ ಕರುಣಾದೃಷ್ಟಿಯಿಂದ ನನ್ನನ್ನು ಕಾಪಾಡು. ನಾನು ನಿನ್ನನ್ನೇ ಹಿಂಬಾಲಿಸಿರುವೆನು. ಎಲೈ ಮಂಗಳಾತ್ಮಸ್ವಭಾವನೆ, ನಿನ್ನನ್ನು ಸ್ತುತಿಸಲು ನಾನು ಸಮರ್ಥನಲ್ಲ. ಶಕ್ತಿಯಿದ್ದಷ್ಟು (ಸ್ತುತಿಮಾಡುವೆನು). ನಾನು ಮಾಡಿರುವ ಅಪಾರಾಧಗಳನ್ನು ಮನ್ನಿಸು.

**ಯದಾ ಕರ್ಣರಂಧ್ರಂ ವ್ರಜೇತ್ ಕಾಲವಾಹ-**
**ದ್ವಿಷತ್ಕಂಠಘಂಟಾಘಣಾತ್ಕಾರನಾದಃ ।**
**ವೃಷಾಧೀಶಮಾರುಹ್ಯ ದೇವೌಪವಾಹ್ಯಂ**
**ತದಾ ವತ್ಸ ಮಾ ಭೀರಿತಿ ಪ್ರೀಣಯ ತ್ವಮ್ ॥ ೨೧ ।**

೨೧. .ಯಾವಾಗ ಯಮನ ವಾಹನದ ಕಂಠದಲ್ಲಿರುವ ಘಂಟೆಯ ಘಣ ಘಣಶಬ್ದವು ನನ್ನ ಕಿವಿಗಳನ್ನು ಮುಟ್ಟುವದೋ ಆ ಸಮಯಕ್ಕೆ ದೇವವಾಹನನಾದ ನಂದಿಯನ್ನೇರಿ ಬಂದ ನೀನು 'ಮಗು, ಹೆದರಬೇಡ' ಎಂದು ಅಭಯವಚನವನ್ನು ನೀಡಿ ಸಂತೋಷಗೊಳಿಸುವವನಾಗು.

**ಯದಾ ದಾರುಣಾ ಭಾಷಣಾ ಭೀಷಣಾ ಮೇ**
**ಭವಿಷ್ಯಂತ್ಯುಪಾಂತೇ ಕೃತಾಂತಸ್ಯ ದೂತಾಃ ।**
**ತದಾ ಮನ್ಮನಸ್ತ್ವತ್ಪದಾಂಭೋರುಹಸ್ಥಂ**
**ಕಥಂ ನಿಶ್ಚಲಂ ಸ್ಯಾನ್ನಮಸ್ತೇಽಸ್ತು ಶಂಭೋ ॥ ೨೨ ॥**

೨೨. ಯಾವಾಗ ಯಮನ ಭಟರು ನನ್ನ ವಿಷಯವಾಗಿ ಕ್ರೂರವೂ ಭಯಂಕರವೂ ಆದ ಮಾತುಗಳನ್ನಾಡುತ್ತಾ (ಸಮೀಪಿಸುವರೋ) ಆಗ ನನ್ನ ಮನಸ್ಸು ನಿನ್ನ ಪಾದಾರವಿಂದಗಳಲ್ಲಿ ಹೇಗೆ ತಾನೆ ನೆಲೆಗೊಂಡೀತು? ಶಂಭುವೆ, (ನನ್ನನ್ನು ಕಾಪಾಡು). ನಿನಗೆ ನಮಸ್ಕಾರವಿರಲಿ.

**ಯದಾ ದುರ್ನಿವಾರವ್ಯಥೋಽಹಂ ಶಯಾನೋ**
**ಲುಠನ್ ನಿಃಶ್ವಸನ್ ನಿಃಸೃತಾವ್ಯಕ್ತವಾಣಿಃ ।**
**ತದಾ ಜಹ್ನುಕನ್ಯಾಜಲಾಲಂಕೃತಂ ತೇ**
**ಜಟಾಮಂಡಲಂ ಮನ್ಮನೋಮಂದಿರಂ ಸ್ಯಾತ್ ॥ ೨೩ ॥**

೨೩. ಯಾವಾಗ ನಾನು ತಡೆಯಲಾರದ ವ್ಯಥೆಯಿಂದ (ಹಾಸಿಗೆ) ಯಲ್ಲಿ ಮಲಗಿಕೊಂಡು ಹೊರಳಾಡುತ್ತಾ ನಿಟ್ಟುಸಿರುಬಿಡುತ್ತಾ ಸ್ಫುಟವಾದ ಮಾತುಗಳನ್ನು ಆಡಲಾರದೆ ಇರುವೆನೋ ಆಗ ಗಂಗಾದೇವಿಯಿಂದ ಸಿಂಗರಿಸಲ್ಪಟ್ಟ ನಿನ್ನ ಜಟಾಮಂಡಲವೇ ನನ್ನ ಮನಸ್ಸಿಗೆ ವಾಸಸ್ಥಾನವಾಗಲಿ.

**ಯದಾ ಪುತ್ರಮಿತ್ರಾದಯೋ ಮತ್ಸಕಾಶೇ**
**ರುದಂತ್ಯಸ್ಯ ಹಾ ಕೀದೃಶೀಯಂ ದಶೇತಿ ।**
**ತದಾ ದೇವದೇವೇಶ ಗೌರೀಶ ಶಂಭೋ**
**ನಮಸ್ತೇ ಶಿವಾಯೇತ್ಯಜಸ್ರಂ ಬ್ರವಾಣಿ ॥ ೨೪ ॥**

೨೪. ಯಾವಾಗ ಮಕ್ಕಳು, ಸ್ನೇಹಿತರೇ ಮೊದಲಾದವರು ನನ್ನ ಸಮೀಪಕ್ಕೆ ಬಂದು ''ಅಯ್ಯೋ, ಇವನಿಗೆ ಈ ಗತಿಯು ಬಂತೆ?' ಎಂದು ಅಳುವರೋ ಆಗ ಎಲೈ ದೇವದೇವನೆ, ಗೌರೀಶನೆ, ಶಂಭುವೆ, ಶಿವನಿಗೆ ನಮಸ್ಕಾರ ಎಂದು ಮತ್ತೆ ಮತ್ತೆ ನಾನು ಹೇಳುವಂತಾಗಲಿ.

**ಯದಾ ಪಶ್ಯತಾಂ ಮಾಮಸೌ ವೇತ್ತಿ ನಾಸ್ಮಾ-**
**ನಯಂ ಶ್ವಾಸ ಏವೇತಿ ವಾಚೋ ಭವೇಯುಃ ।**
**ತದಾ ಭೂತಿಭೂಷಂ ಭುಜಂಗಾವನದ್ಧಂ**
**ಪುರಾರೇ ಭವಂತಂ ಸ್ಫುಟಂ ಭಾವಯೇಯಮ್ ॥ ೨೫ ॥**

೨೫. ಯಾವಾಗ ನನ್ನನ್ನು ನೋಡುತ್ತಿರುವವರು 'ಅಯ್ಯೋ ಇವನು ನಮ್ಮನ್ನು ಗುರುತಿಸಲಾರನು ; ಕೇವಲ ಉಸಿರಾಡುತ್ತಿರುವನು' ಎಂಬ ಮಾತುಗಳನ್ನಾಡುವರೋ ಆಗ ವಿಭೂತಿಯಿಂದ ಅಲಂಕೃತನೂ ಸರ್ಪಗಳಿಂದ ಭೂಷಿತನೂ ಆದ ಪುರಾರಿಯೆ, ನಿನ್ನನ್ನು ಸ್ಫುಟವಾಗಿ ನಾನು ಧ್ಯಾನಿಸುವಂತಾಗಲಿ.

**ಯದಾ ಯಾತನಾದೇಹಸಂದೇಶವಾಹೀ**
**ಭವೇದಾತ್ಮದೇಹೇ ನ ಮೋಹೋ ಮಹಾನ್ ಮೇ ।**
**ತದಾ ಕಾಶಶೀತಾಂಶುಸಂಕಾಶಮೀಶ**
**ಸ್ಮರಾರೇ ವಪುಸ್ತೇ ನಮಸ್ತೇ ಸ್ಮರಾಮಿ ॥ ೨೬ ॥**

೨೬. ಯಾವಾಗ ನನ್ನ ದೇಹದಲ್ಲಿ ಸೂಕ್ಷ್ಮ ಶರೀರದೊಡಗೂಡಿದ ಪ್ರಜ್ಞೆಯನ್ನು ಹೊತ್ತು ಹೊರಡುವ ಜೀವನು ನಾನು- ಎಂಬ ಮೋಹವು ಉಂಟಾಗಲಾರದೋ ಆಗ ಹೊಳೆಯುತ್ತಿರುವ ಚಂದ್ರನಂತಿರುವ ನಿನ್ನ ದೇಹವನ್ನು ಎಲೈ ಈಶನೆ, ಮನ್ಮಥವೈರಿಯೆ, ನಾನು ಸ್ಮರಿಸುವೆನು.

**ಯದಾಪಾರಮಚ್ಛಾಯಮಸ್ಥಾನಮದ್ಭಿ-**
**ರ್ಜನೈರ್ವಾ ವಿಹೀನಂ ಗಮಿಷ್ಯಾಮಿ ಮಾರ್ಗಮ್ ।**
**ತದಾ ತಂ ನಿರುಂಧನ್ ಕೃತಾಂತಸ್ಯ ಮಾರ್ಗಂ**
**ಮಹಾದೇವ ಮಹ್ಯಂ ಮನೋಜ್ಞಂ ಪ್ರಯಚ್ಛ ॥ ೨೭ ॥**

೨೭. ಯಾವಾಗ ನಾನು ತುದಿಯಿಲ್ಲದ, ನೆರಳಿಲ್ಲದ, ವಿಶ್ರಾಂತಿ ಸ್ಥಾನವಿಲ್ಲದ, ನೀರಾಗಲಿ, ಜನರಾಗಲಿ ಇಲ್ಲದ ಹಾದಿಯಲ್ಲಿ ಹೋಗಲಿರುವೆನೋ ಆಗ ಯಮನ ಮಾರ್ಗವಾದ ಅದನ್ನು ತಡೆಗಟ್ಟಿ ಎಲೈ ಮಹಾದೇವನೆ, ನನಗೆ ಮನಸ್ಸಿಗೆ ಆಹ್ಲಾದಕರವಾದ ಮಾರ್ಗವನ್ನು ದಯಾಪಾಲಿಸುವವನಾಗು.

**ಯದಾ ರೌರವಾದಿ ಸ್ಮರನ್ನೇವ ಭೀತ್ಯಾ**
**ವ್ರಜಾಮ್ಯತ್ರ ಮೋಹಂ ಮಹಾದೇವ ಘೋರಮ್ ।**
**ತದಾ ಮಾಮಹೋ ನಾಥ ಕಸ್ತಾರಯಿಷ್ಯ-**
**ತ್ಯನಾಥಂ ಪರಾಧೀನಮರ್ಧೇಂದುಮೌಳೇ ॥ ೨೮ ॥**

೨೮. ಎಲೈ ಮಹಾದೇವನೆ, ನಾನು ಯಾವಾಗ ರೌರವವೇ ಮುಂತಾದ ನರಕಗಳನ್ನು ನೆನೆಸಿಕೊಂಡು ಹೆದರಿದವನಾಗಿ ಘೋರವಾದ ಮೋಹವನ್ನು ಹೊಂದುವೆನೋ ಆಗ ಎಲೈ ಸ್ವಾಮಿಯೆ, ನನ್ನನ್ನು ಯಾರು ತಾನೆ ಕಾಪಾಡಿ ಯಾರು? ಎಲೌ ಅರ್ಧೇಂದುಮೌಳಿಯೆ, ಪರಾಧೀನನೂ ಅನಾಥನೂ ಆದ ನನ್ನನ್ನು (ನೀನೇ ಕಾಪಾಡಬೇಕು).

**ಯದಾ ಶ್ವೇತಪತ್ರಾಯತಾಲಂಘ್ಯಶಕ್ತೇಃ**
**ಕೃತಾಂತಾದ್ಭಯಂ ಭಕ್ತವಾತ್ಸಲ್ಯಭಾವಾತ್ ।**
**ತದಾ ಪಾಹಿ ಮಾಂ ಪಾರ್ವತೀವಲ್ಲಭಾನ್ಯಂ**
**ನ ಪಶ್ಯಾಮಿ ಪಾತಾರಮೇತಾದೃಶಂ ಮೇ ॥ ೨೯ ॥**

೨೯. ಎದುರಿಸಲಾಗದ ಶಕ್ತಿಯುಳ್ಳವನಾದ, ಶ್ವೇತಛತ್ರಿಯ ಗೌರವವುಳ್ಳ ಲೋಕಪಾಲಕನಾದ ಯಮನ ಬಾಧೆಯು ಯಾವಾಗ ನನಗೆ ಬಂದೊದಗುವದೋ ಆಗ ಎಲೈ ಪಾರ್ವತೀಪತಿಯೆ, ನನ್ನನ್ನು ಕಾಪಾಡು. ಇಂಥ ಬೇರೊಬ್ಬ ರಕ್ಷಕನನ್ನು ನಾನೆಲ್ಲಿಯೂ ಕಾಣೆನು.

**ಇದಾನೀಮಿದಾನೀಂ ಮೃತಿರ್ಮೇ ಭವಿತ್ರೀ-**
**ತ್ಯಹೋ ಸಂತತಂ ಚಿಂತಯಾ ಪೀಡಿತೋಽಸ್ಮಿ ।**
**ಕಥಂ ನಾಮ ಮಾ ಭೂನ್ಮೃತೌ ಭೀತಿರೇಷಾ**
**ನಮಸ್ತೇಽಗತೀನಾಂ ಗತೇ ನೀಲಕಂಠ ॥ ೩೦ ॥**

೩೦. ಈಗ ಎಂದರೆ ಈಗಲೇ ನನಗೆ ಸಾವು ಸಂಭವಿಸಲಿದೆ- ಎಂಬುದಾಗಿ ಯಾವಾಗಲೂ ಚಿಂತೆಯಿಂದ ನಾನು ಪೀಡಿಸಲ್ಪಡುತ್ತಿರುವೆನು. ಅಯ್ಯೋ, ಈ ಹೆದರಿಕೆಯು ಸಾವಿನಸಮಯಕ್ಕೆ ಉಂಟಾಗದಂತೆ ಆಗಲು ಹೇಗೆ ಸಾಧ್ಯವಾದೀತು? ಎಲೈ ಗತಿಯಿಲ್ಲದವರಿಗೆಲ್ಲ ಗತಿಯಾದವನೆ, ನೀಲಕಂಠನೆ, ನಿನ್ನ (ಕೃಪೆಯಿಂದ ಮಾತ್ರ- ಅಭಯಪ್ರಾಪ್ತಿಯಾದೀತು).

**ಅಮರ್ಯಾದಮೇವಾಹಮಾಬಾಲವೃದ್ಧಂ**
**ಹರಂತಂ ಕೃತಾಂತಂ ಸಮೀಕ್ಷ್ಯಾಸ್ಮಿ ಭೀತಃ ।**
**ಮೃತೌ ತಾವಕಾಂಘ್ರ್ಯಬ್ಜದಿವ್ಯಪ್ರಸಾದಾ-**
**ದ್ಭವಾನೀಪತೇ ನಿರ್ಭಯೋಽಹಂ ಭವಾನಿ ॥ ೩೧ ॥**

೩೧. ನಾನು. ಹುಡುಗರು, ಮುದುಕರು, ಎಂಬ ವಿವೇಚನೆಯೇ ಇಲ್ಲದೆ ಸೆಳೆದೊಯ್ಯುವ ಯಮನನ್ನು ಕಂಡು ಬಹಳ ಭಯಗೊಂಡಿರುವೆನು. ಹೀಗೆ ಸಾವಿನ (ದವಡೆಯಲ್ಲಿರುವ ನಾನು) ಎಲೈ ಭವಾನೀಪತಿಯೆ, ನಿನ್ನ ಪಾದಾರವಿಂದಗಳ ದಿವ್ಯಾನುಗ್ರಹದಿಂದ ಮಾತ್ರವೇ ನಿರ್ಭಯವಾಗಿ ಇರಬಲ್ಲೆನು.

**ಜರಾಜನ್ಮಗರ್ಭಾದಿವಾಸಾದಿದುಃಖಾ-**
**ನ್ಯಸಹ್ಯಾನಿ ಜಹ್ಯಾಂ ಜಗನ್ನಾಥ ದೇವ ।**
**ಭವಂತಂ ವಿನಾ ಮೇ ಗತಿರ್ನೈವ ಶಂಭೋ**
**ದಯಾಲೋ ನ ಜಾಗರ್ತಿ ಕಿಂ ವಾ ದಯಾ ತೇ ॥ ೩೨ ॥**

೩೨. ಮುಪ್ಪು, ಹುಟ್ಟು, ಗರ್ಭವಾಸವೇ ಮುಂತಾದ ಸಹಿಸಲಸಾಧ್ಯವಾದ ದುಃಖಗಳಿಂದ ಎಲೈ ಜಗನ್ನಾಥನೆ, ದೇವನೆ, ಬಿಡುಗಡೆ ಹೊಂದಲಿಚ್ಛಿಸುವೆನು. ಆದರೆ ಈ ಸಂದರ್ಭದಲ್ಲಿ ನಿನ್ನನ್ನು ಬಿಟ್ಟು ನನಗೆ ಬೇರೆ ಗತಿಯಿರುವದಿಲ್ಲ. ಎಲೈ ದಯಾಳುವೆ, ನಿನ್ನ ದಯೆಯಾದರೂ ಎಚ್ಚರವಾಗಿಲ್ಲವೇನು ?

**ಶಿವಾಯೇತಿ ಶಬ್ದೋ ನಮಃ ಪೂರ್ವ ಏಷಃ**
**ಸ್ಮರನ್ ಮುಕ್ತಿಕೃನ್ಮೃತ್ಯುಹಾ ತತ್ತ್ವವಾಚೀ ।**
**ಮಹೇಶಾನ ಮಾ ಗಾನ್ಮನಸ್ತೋ ವಚಸ್ತಃ**
**ಸದಾ ಮಹ್ಯಮೇತತ್ಪ್ರದಾನಂ ಪ್ರಯಚ್ಛ ॥ ೩೩ ॥**

೩೩. ''ನಮಃ ಶಿವಾಯ'' ಎಂಬ ಶಬ್ದವು ಸ್ಮರಿಸುವವರಿಗೆ ಮೃತ್ಯುವನ್ನು ಹೊಡೆದೋಡಿಸಿ ಮುಕ್ತಿಯನ್ನುಂಟುಮಾಡುವ ತತ್ತ್ವವಾಚಿಯಾದ ಶಬ್ದವು. ಆದ್ದರಿಂದ ಎಲೈ ಮಹೇಶ್ವರನೆ, ನನ್ನ ಮಾತಿನಿಂದಾಗಲಿ, ಮನಸ್ಸಿನಿಂದಾಗಲಿ ದೂರ ಸರಿಯಬೇಡ. ಯಾವಾಗಲೂ ನನಗೆ ಈ ವರವನ್ನು ಕೊಡು.

**ತ್ವಮಪ್ಯಂಬ ಮಾಂ ಪಶ್ಯ ಶೀತಾಂಶುಮೌಲಿ-**
**ಪ್ರಿಯೇ ಭೇಷಜಂ ತ್ವಂ ಭವವ್ಯಾಧಿಶಾಂತೌ ।**
**ಬಹುಕ್ಲೇಶಭಾಜಂ ಪದಾಂಭೋಜಪೋತೇ**
**ಭವಾಬ್ಧೌ ನಿಮಗ್ನಂ ನಯಸ್ವಾದ್ಯ ಪಾರಮ್ ॥ ೩೪ ॥**

೩೪. ಎಲೌ ತಾಯಿಯೆ, ಚಂದ್ರಮೌಳಿಪ್ರಿಯಳೆ, ನೀನು ಕೂಡ ನನ್ನನ್ನು ಕರುಣಿಸಿ ನೋಡು. ನೀನು ಸಂಸಾರರೋಗಪರಿಹಾರಕ್ಕೆ ಔಷಧವಾಗಿರುವೆ. ಬಹಳವಾದ ಕಷ್ಟಗಳಿಗೆ ಸಿಕ್ಕಿರುವ ಹಾಗೂ ಸಂಸಾರಸಮುದ್ರದಲ್ಲಿ ಮುಳುಗಿರುವ ನನ್ನನ್ನು ನಿನ್ನ ಪಾದಾರವಿಂದಗಳೆಂಬ ಹಡಗಿನಿಂದ ದಡವನ್ನು ಮುಟ್ಟಿಸು

**ಅನುದ್ಯಲ್ಲಲಾಟಾಕ್ಷಿವಹ್ನಿಪ್ರರೋಹೈ-**
**ರವಾಮಸ್ಫುರಚ್ಚಾರುವಾಮೋರುಶೋಭೈಃ ।**
**ಅನಂಗಭ್ರಮದ್ಭೋಗಿಭೂಷಾವಿಶೇಷೈ-**
**ರಚಂದ್ರಾರ್ಧಚೂಡೈರಲಂ ದೈವತೈರ್ನಃ ॥ ೩೫ ॥**

೩೫. ಹಣೆಗಣ್ಣಿನಲ್ಲಿ ಹುಟ್ಟದೆ ಇರುವ ಅಗ್ನಿಜ್ವಾಲೆಗಳುಳ್ಳ, ಸುಂದರವಾದ ಅಂಗಗಳುಳ್ಳ ಸ್ತ್ರೀಯಿಂದ ಎಡಭಾಗದಲ್ಲಿ ಅಲಂಕೃತರಾಗದಿರುವ, ಶರೀರಾವಯವ ಗಳಲ್ಲಿ ಅಲಂಕಾರವೆನಿಸಿರುವ ಹರಿದಾಡುವ ಹಾವುಗಳಿಲ್ಲದ, ಜಟೆಯಲ್ಲಿ ಚಂದ್ರಲೇಖೆಯಿಲ್ಲದ ದೇವತೆಗಳಿಂದ ನಮಗೇನಾಗಬೇಕು?

**ಮಹಾದೇವ ಶಂಭೋ ಗಿರೀಶ ತ್ರಿಶೂಲಿನ್**
**ತ್ವಯೀದಂ ಸಮಸ್ತಂ ವಿಭಾತೀತಿ ಯಸ್ಮಾತ್ ।**
**ಶಿವಾದನ್ಯಥಾ ದೈವತಂ ನಾಭಿಜಾನೇ**
**ಶಿವೋಽಹಂ ಶಿವೋಽಹಂ ಶಿವೋಽಹಂ ಶಿವೋಽಹಮ್ ॥ ೩೬ ॥**

೩೬. ಮಹಾದೇವನೆ, ಶಂಭುವೆ, ಗಿರೀಶನೆ, ತ್ರಿಶೂಲಧಾರಿಯೆ, ಈ ಸಮಸ್ತಜಗತ್ತೂ ನಿನ್ನಲ್ಲಿ ತೋರಿಕೊಳ್ಳುತ್ತಲಿದೆಯಾದ್ದರಿಂದ ಶಿವನಿಗಿಂತ ಬೇರೊಂದು ದೇವತೆಯನ್ನು ನಾನರಿಯೆನು. ನಾನು ಶಿವನು, ಶಿವನು.

**ಯತೋ ಜಾಯತೇದಂ ಪ್ರಪಂಚಂ ವಿಚಿತ್ರಂ**
**ಸ್ಥಿತಿಂ ಯಾತಿ ಯಸ್ಮಿನ್ ಯದೇಕಾಂತಮಂತೇ ।**
**ಸ ಕರ್ಮಾದಿಹೀನಃ ಸ್ವಯಂಜ್ಯೋತಿರಾತ್ಮಾ**
**ಶಿವೋಽಹಂ ಶಿವೋಽಹಂ ಶಿವೋಽಹಂ ಶಿವೋಽಹಮ್ ॥ ೩೭ ॥**

೩೭. ಈ ವಿಚಿತ್ರವಾದ ಪ್ರಪಂಚವು ಎಲ್ಲಿಂದ ಹುಟ್ಟಿಬಂದಿತೋ ಈಗ ಇದ್ದುಕೊಂಡಿದೆಯೋ ಕೊನೆಯಲ್ಲಿ ನಿಶ್ಚಿತವಾಗಿ ಎಲ್ಲಿ ಸೇರಿಹೋಗುವದೋ ಅಂಥ ಕರ್ಮಾದಿದೂರನೂ ಸ್ವಯಂಜ್ಯೋತಿಯೂ ಆತ್ಮನೂ ಆದ ಶಿವನು ನಾನು. ಶಿವನು ನಾನು ; ಶಿವನು ನಾನು.

**ಕಿರೀಟೇ ನಿಶೇಶೋ ಲಲಾಟೇ ಹುತಾಶೋ**
**ಭುಜೇ ಭೋಗಿರಾಜೋ ಗಲೇ ಕಾಲಿಮಾ ಚ ।**
**ತನೌ ಕಾಮಿನೀ ಯಸ್ಯ ತತ್ತುಲ್ಯದೇವಂ**
**ನ ಜಾನೇ ನ ಜಾನೇ ನ ಜಾನೇ ನ ಜಾನೇ ॥ ೩೮ ॥**

೩೮. ಕಿರೀಟ (ಜಟಾಜೂಟ)ದಲ್ಲಿ ಚಂದ್ರನೂ ಹಣೆಯಲ್ಲಿ ಅಗ್ನಿಯೂ ಭುಜಗಳಲ್ಲಿ ಸರ್ಪರಾಜನೂ ಕಂಠದಲ್ಲಿ ಕಪ್ಪೂ ಶರೀರಾರ್ಧದಲ್ಲಿ ಕಾಮಿನಿಯೂ ಯಾವನಿಗೆ ಉಂಟೋ ಅವನಿಗೆ ಸರಿಸಾಟಿಯಾದ ದೇವನನ್ನು ನಾನು ಅರಿಯೆನು. ಅರಿಯೆನು. ಅರಿಯೆನು.

**ಅನೇನ ಸ್ತವೇನಾದರಾದಂಬಿಕೇಶಂ**
**ಪರಾಂ ಭಕ್ತಿಮಾಸಾದ್ಯ ಯಂ ಯೇ ನಮನ್ತಿ ।**
**ಮೃತೌ ನಿರ್ಭಯಾಸ್ತೇ ಜನಾಸ್ತಂ ಭಜಂತೇ**
**ಹೃದಂಭೋಜಮಧ್ಯೇ ಸದಾಸೀನಮೀಶಮ್ ॥ ೩೯ ॥**

೩೯. ಈ ಸ್ತೋತ್ರದಿಂದ ಅಂಬಿಕಾಪತಿಯನ್ನು ಯಾರು ವಿಶ್ವಾಸಪೂರ್ವಕವಾಗಿ ಹೆಚ್ಚಿನ ಭಕ್ತಿಯಿಂದ ಸ್ತುತಿಸಿ ನಮಸ್ಕರಿಸುವರೋ ಅವರು ಸಾಯುವ ಕಾಲಕ್ಕೆ ನಿರ್ಭಯರಾಗಿ ಹೃದಯಕಮಲಮಧ್ಯದಲ್ಲಿ ಯಾವಾಗಲೂ ಇದ್ದುಕೊಂಡಿರುವ ಈಶ್ವರನನ್ನು ಭಜಿಸುತ್ತಾ ಮುಕ್ತಿಯನ್ನು ಹೊಂದುವರು.

**ಭುಜಂಗಪ್ರಿಯಾಕಲ್ಪ ಶಂಭೋ ಮಯ್ಯೈವಂ**
**ಭುಜಂಗಪ್ರಯಾತೇನ ವೃತ್ತೇನ ಕ್ಲೃಪ್ತಮ್ ।**
**ನರಃ ಸ್ತೋತ್ರಮೇತತ್ ಪಠಿತ್ವೋರುಭಕ್ತ್ಯಾ**
**ಸುಪುತ್ರಾಯುರಾರೋಗ್ಯಮೈಶ್ವರ್ಯಮೇತಿ ॥ ೪೦ ॥**

೪೦. ನಟನಪ್ರಿಯನಾದ ಶಂಭುವೆ, 'ಭುಜಂಗಪ್ರಯಾತ' ವೆಂಬ ವೃತ್ತದಿಂದ ಕೂಡಿದ ನಾನು ರಚಿಸಿರುವ ಈ ಸ್ತೋತ್ರವು (ನಿನಗೆ ಅರ್ಪಿತವಾಗಲಿ). ಇದನ್ನು ಭಕ್ತಿಪೂರ್ವಕವಾಗಿ ಪಠಿಸುವ ಮನುಷ್ಯನು ಸುಪುತ್ರರನ್ನೂ ಆಯುರಾರೋಗ್ಯ ಐಶ್ವರ್ಯಾದಿಗಳನ್ನೂ ಹೊಂದುವನು.

## ೯. ವಿಷ್ಣುಭುಜಂಗಪ್ರಯಾತಸ್ತೋತ್ರ

(ಅಧ್ಯಾತ್ಮಶಂಕರವಿಜಯ, ಪುಟ- ೮೫)

**ಚಿದಂಶಂ ವಿಭುಂ ನಿರ್ಮಲಂ ನಿರ್ವಿಕಲ್ಪಂ**
**ನಿರೀಹಂ ನಿರಾಕಾರಮೋಂಕಾರಗಮ್ಯಮ್ ।**
**ಗುಣಾತೀತಮವ್ಯಕ್ತಮೇಕಂ ತುರೀಯಂ**
**ಪರಂ ಬ್ರಹ್ಮ ಯಂ ವೇದ ತಸ್ಮೈ ನಮಸ್ತೇ ॥ ೧ ॥**

೧. ಜ್ಞಾನದ ಅಂಶನೂ ವ್ಯಾಪಕನೂ ನಿರ್ಮಲನೂ ನಿರ್ವಿಕಲ್ಪನೂ ಆಸೆಗಳಿಲ್ಲದವನೂ ಆಕಾರರಹಿತನೂ ಓಂಕಾರದ ಮೂಲಕ ತಿಳಿದುಬರುವವನೂ ಗುಣಗಳನ್ನು ಮೀರಿದವನೂ ಅವ್ಯಕ್ತನೂ ಏಕನೂ ತುರೀಯನೂ ಆದ ಪರಬ್ರಹ್ಮವನ್ನು ಯಾವನು ಅರಿತಿರುವನೋ ಅವನಿಗೆ ನಮಸ್ಕಾರಗಳು.

**ವಿಶುದ್ಧಂ ಶಿವಂ ಶಾಂತಮಾದ್ಯಂತಶೂನ್ಯಂ**
**ಜಗಜ್ಜೀವನಂ ಜ್ಯೋತಿರಾನಂದಮೂರ್ತಿಮ್ ।**
**ಅದಿಗ್ದೇಶಕಾಲವ್ಯವಚ್ಛೇದನೀಯಂ**
**ತ್ರಯೀವಾರ್ತಿ ಯಂ ವೇದ ತಸ್ಮೈ ನಮಸ್ತೇ ॥ ೨ ॥**

೨. ಪರಿಶುದ್ಧನೂ ಶಿವನೂ ಶಾಂತನೂ ಆದ್ಯಂತಗಳಿಲ್ಲದವನೂ ಜಗತ್ತಿಗೆಲ್ಲ ಜೀವನದಾತನೂ ಜ್ಯೋತಿಃಸ್ವರೂಪನೂ ಆನಂದಮೂರ್ತಿಯೂ ದಿಕ್ಕು, ದೇಶ, ಕಾಲಗಳಿಂದ ಪರಿಚ್ಛೇದಮಾಡಲಾಗದವನೂ ವೇದಗಳಲ್ಲಿ ನೆಲೆಸಿರುವವನೂ ಆದವನನ್ನು ಯಾವನು ಬಲ್ಲನೋ ಅವನಿಗೆ ವಂದನೆಗಳು.

**ಮಹಾಯೋಗಪೀಠೇ ಪರಿಭ್ರಾಜಮಾನೇ**
**ಧರಣ್ಯಾದಿತತ್ತ್ವಾತ್ಮಕೇ ಶಕ್ತಿಯುಕ್ತೇ ।**
**ಗುಣಾಹಸ್ಕರೇಂದ್ರಾಗ್ನಿಬಿಂಬೇಂದುಮಧ್ಯೇ**
**ಸಮಾಸೀನಮೋಂಕರ್ಣಿಕಾಷ್ಟಾಕ್ಷರಾಬ್ಜೇ ॥ ೩ ॥**

೩. ಹೊಳೆಯುತ್ತಿರುವ, ಶಕ್ತಿಸಮೇತನಾದ, ಭೂಮಿಯೇ ಮೊದಲಾದ ತತ್ತ್ವಗಳ ರೂಪವಾದ ಮತ್ತು ತ್ರಿಗುಣಗಳು, ಸೂರ್ಯ, ಇಂದ್ರ, ಅಗ್ನಿಗಳ ಬಿಂಬಮಧ್ಯದಲ್ಲಿ ಓಂ ಎಂಬ ನಾಮವುಳ್ಳ ಎಂಟಕ್ಷರದ ಪದ್ಮದಲ್ಲಿ ಮಹಾಯೋಗ ಪೀಠದಲ್ಲಿ ಕುಳಿತಿರುವ ದೇವನಿಗೆ ನಮಸ್ಕಾರಗಳು.

**ಸಮಾನೋದಿತಾನೇಕಸೂರ್ಯೇಂದುಕೋಟಿ-**
**ಪ್ರಭಾಪೂರತುಲ್ಯದ್ಯುತಿಂ ದುರ್ನಿರೀಕ್ಷಮ್ ।**
**ನ ಶೀತಂ ನ ಚೋಷ್ಣಂ ಸುವರ್ಣಾವದಾತಂ**
**ಪ್ರಸನ್ನಂ ಸದಾನಂದಸಂವಿತ್ಸ್ವರೂಪಮ್ ॥ ೪ ॥**

೪. ಒಮ್ಮೆಗೇ ಸಮಾನವಾದ ಕಾಂತಿಯಿಂದ ಉದಯಿಸಿರುವ ಕೋಟಿ ಸಂಖ್ಯೆಯ ಸೂರ್ಯಚಂದ್ರರ ಕಾಂತಿಗೆ ಸಮಾನವಾದ ತೇಜಸ್ಸುಳ್ಳ, ಬರಿಗಣ್ಣಿನಿಂದ ನೋಡಲಸಾಧ್ಯನಾದ ಅತಿತಂಪೂ ಅಲ್ಲದ ಬಿಸಿಯೂ ಅಲ್ಲದ, ಚಿನ್ನದಂತೆ ಶುದ್ಧನಾದ ಪ್ರಸನ್ನನಾದ ಸಚ್ಚಿದಾನಂದಸ್ವರೂಪನಾದ (ಭಗವಂತನಿಗೆ ವಂದನೆಗಳು).

**ಸುನಾಸಾಪುಟಂ ಸುಂದರಭ್ರೂಲಲಾಟಂ**
**ಕಿರೀಟೋಚಿತಾಕುಂಚಿತಸ್ನಿಗ್ಧಕೇಶಮ್ ।**
**ಸ್ಫುರತ್ಪುಂಡರೀಕಾಭಿರಾಮಾಯತಾಕ್ಷಂ**
**ಸಮುತ್ಫುಲ್ಲರತ್ನಪ್ರಸೂನಾವತಂಸಮ್ ॥ ೫ ॥**

೫. ಲಕ್ಷಣವಾದ ಮೂಗು, ಸುಂದರವಾದ ಹುಬ್ಬು ಹಾಗೂ ಹಣೆ, ಕಿರೀಟಕ್ಕೊಪ್ಪುವಂಥ ಸುರುಳಿಯಾದ ದಟ್ಟವಾದ ತಲೆಗೂದಲು, ಕಾಂತಿಯುತವಾದ ಕಮಲದಂತೆ ವಿಶಾಲವಾದ ಕಣ್ಣುಗಳು, ಚೆನ್ನಾಗಿ ಅರಳಿದ ರತ್ನದ ಬಳ್ಳಿಯ ಕಿವಿಗಲಂಕಾರವಾದ ಹೂಗಳು- ಇವುಗಳಿಂದ ಕೂಡಿದವನಾದ (ಶ್ರೀ ಮಹಾವಿಷ್ಣುವಿಗೆ ನಮಸ್ಕಾರಗಳು).

**ಲಸತ್ಕುಂಡಲಾಮೃಷ್ಟಗಂಡಸ್ಥಲಾಂತಂ**
**ಜಪಾರಾಗಚೋರಾಧರಂ ಚಾರುಹಾಸಮ್ ।**
**ಅಲಿವ್ಯಾಕುಲಾಮೋದಿಮಂದಾರಮಾಲಂ**
**ಮಹೋರಃಸ್ಫುರತ್ ಕೌಸ್ತುಭೋದ್ದಾಮಹಾರಮ್ ॥ ೬ ॥**

೬. ಹೊಳೆಯುತ್ತಿರುವ ಕರ್ಣಾಭರಣದ ಕಾಂತಿಯಿಂದ ವ್ಯಾಪಿಸಿದ ಕೆನ್ನೆಗಳುಳ್ಳ, ದಾಸಿವಾಳದ ಹೂವಿನ ಕೆಂಪನ್ನು ಅಪಹರಿಸಿದಂಥ ತುಟಿಗಳುಳ್ಳ, ನಗುಮೊಗದವನಾದ, ಮತ್ತು ಭ್ರಮರಗಳ ಝೇಂಕಾರನಾದದಿಂದ ಸುವಾಸನೆಯನ್ನು ಪ್ರಕಟಿಸುವ ಮಂದಾರಹೂಮಾಲೆಯಿಂದಲಂಕೃತನಾದ, ಉನ್ನತವಾದ ಎದೆಯಲ್ಲಿ ಹೊಳೆಯುತ್ತಿರುವ ಕೌಸ್ತುಭರತ್ನದಿಂದ ಕೂಡಿದ ಹಾರವುಳ್ಳ (ಶ್ರೀಮಹಾವಿಷ್ಣುವಿಗೆ ವಂದನೆಗಳು).

**ಸುರತ್ನಾಂಗದೈರನ್ವಿತಂ ಬಾಹುದಂಡೈ-**
**ಶ್ಚತುರ್ಭಿಶ್ಚಲತ್‌ಕಂಕಣಾಲಂಕೃತಾಗ್ರೈಃ ।**
**ಉದಾರೋದರಾಲಂಕೃತಂ ಪೀತವಸ್ತ್ರಂ**
**ಪದದ್ವಂದ್ವನಿರ್ಧೂತಪದ್ಮಾಭಿರಾಮಮ್ ॥ ೭ ॥**

೭. ಒಳ್ಳೆಯ ರತ್ನಗಳನ್ನು ಮೆಟ್ಟಿರುವ ಕೇಯೂರ (ತೋಳುಭೂಷಣ) ಗಳಿಂದ ಕೂಡಿದ ಚತುರ್ಬಾಹುಗಳುಳ್ಳ, ಮತ್ತು ಕೈಗಳ ಮಣಿಕಟ್ಟುಗಳಲ್ಲಿ ಅಳ್ಳಾಡುತ್ತಿರುವ ಕಂಕಣಗಳಿಂದೊಡಗೂಡಿದವನಾದ, ಉದಾರವಾದ ಹೊಟ್ಟೆಯ ಮೇಲೆ ಉಟ್ಟಿರುವ ಪೀತಾಂಬರವುಳ್ಳ, ಎರಡುಪಾದಗಳ ಶೋಭೆಯಿಂದ ಪದ್ಮಗಳ ಸೌಂದರ್ಯವನ್ನೂ ಹಿಮ್ಮೆಟ್ಟಿಸಿರುವನಾದ ( ಶ್ರೀಮಹಾವಿಷ್ಣುವಿಗೆ ವಂದನೆಗಳು).

**ಸ್ವಭಕ್ತೇಷು ಸಂದರ್ಶಿತಾಕಾರಮೇಕಂ**
**ಸದಾ ಭಾವಯನ್ ಸಂನಿರುದ್ಧೇಂದ್ರಿಯಸ್ತ್ವಾಮ್ ।**
**ದುರಾಪಂ ನರೋ ಯಾತಿ ಸಂಸಾರಪಾರಂ**
**ಪರಸ್ಮೈ ಪರೇಭ್ಯೋಽಪಿ ತಸ್ಮೈ ನಮಸ್ತೇ ॥ ೮ ॥**

೮. ತನ್ನ ಭಕ್ತರಿಗೆ ತೋರಿಸಿದ (ನಾನಾ) ಆಕಾರವುಳ್ಳವನಾದರೂ ತಾನೊಬ್ಬನೇ ಆಗಿರುವ, ಹಾಗೂ 'ಎಲೈ ದೇವನೆ, ನಿನ್ನನ್ನು ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಮಾನವನು ಯಾವಾಗಲೂ ಚಿಂತಿಸುತ್ತಿರುವನಾದರೆ ದಾಟಲಸಾಧ್ಯವಾದ ಸಂಸಾರಸಾಗರದ ದಡವನ್ನು ಮುಟ್ಟಬಲ್ಲನು. ಹೆಚ್ಚಿನದೆಲ್ಲವುಗಳಿಗಿಂತಲೂ ಹೆಚ್ಚಿನವನಾಗಿರುವ ನಿನಗೆ ನಮಸ್ಕಾರಗಳು.

**ಶ್ರಿಯಾ ಶಾತಕುಂಭದ್ಯುಸ್ನಿಗ್ಧಕಾಂತ್ಯಾ**
**ಧರಣ್ಯಾ ಚ ದೂರ್ವಾದಲಶ್ಯಾಮಲಾಂಗ್ಯಾ ।**
**ಕಲತ್ರದ್ವಯೇನಾಮುನಾ ತೋಷಿತಾಯ**
**ತ್ರಿಲೋಕೀಗೃಹಸ್ಥಾಯ ವಿಷ್ಣೋ ನಮಸ್ತೇ ॥ ೯ ॥**

೯. ಚಿನ್ನದಂತೆ ಮೈ ಬಣ್ಣವುಳ್ಳ ಕಾಂತಿಯುಕ್ತಳಾದ ಲಕ್ಷ್ಮಿಯೊಡನೆಯೂ ಚಿಗುರಾದ ಗರಿಕೆಯಂತೆ ಶ್ಯಾಮಲಬಣ್ಣವುಳ್ಳ ಭೂದೇವಿಯೊಡನೆಯೂ ಕೂಡಿರುವ ಮತ್ತು ಈ ಇಬ್ಬರು ಪತ್ನಿಯರೊಡಗೂಡಿ ಸಂತೋಷವುಳ್ಳವನಾಗಿ ತ್ರೈಲೋಕ್ಯ ಗೃಹಸ್ಥನೆನಿಸಿರುವ ಎಲೈ ಮಹಾವಿಷ್ಣುವೆ, ನಿನಗೆ ನಮಸ್ಕಾರಗಳು.

**ಶರೀರಂ ಕಲತ್ರಂ ಸುತಂ ಬಂಧುವರ್ಗಂ**
**ವಯಸ್ಯಂ ಧನಂ ಸದ್ಮ ಭೃತ್ಯಂ ಭುವಂ ಚ ।**
**ಸಮಸ್ತಂ ಪರಿತ್ಯಜ್ಯ ಹಾ ಕಷ್ಟಮೇಕೋ**
**ಗಮಿಷ್ಯಾಮಿ ದುಃಖೇನ ದೂರಂ ಕಿಲಾಹಮ್ ॥ ೧೦ ॥**

೧೦. ಶರೀರ, ಹೆಂಡತಿ, ಮಗ, ಬಂಧುಜನರು, ಸ್ನೇಹಿತ, ಹಣ, ಮನೆ, ಸೇವಕ, ಭೂಮಿ- ಈ ಎಲ್ಲವನ್ನೂ ಇಲ್ಲಿಯೇ ಬಿಟ್ಟು ಬಹಳ ದುಃಖದಿಂದ ನಾನು ಒಬ್ಬನೇ ದೂರವಾಗಿ ಹೋಗಲಿದ್ದೇನೆ. ಅಯ್ಯೋ, ಕಷ್ಟವೇ ಸರಿ.

**ಜರೇಯಂ ಪಿಶಾಚೀವ ಹಾ ಜೀವತೋ ಮೇ**
**ವಸಾಮತ್ತಿ ರಕ್ತಂ ಚ ಮಾಂಸಂ ಬಲಂ ಚ ।**
**ಅಹೋ ದೇವ ಸೀದಾಮಿ ದೀನಾನುಕಂಪಿನ್**
**ಕಿಮತ್ರಾಪಿ ಹಂತ ತ್ವಯೋದಾಸಿತವ್ಯಮ್ ॥ ೧೧ ॥**

೧೧. ಅಯ್ಯೊ, ಬದುಕಿರುವ ನನಗೆ ಈ ಮುಪ್ಪೆಂಬುದು ಪಿಶಾಚಿಯಂತೆ ಅಡಗಿಕೊಂಡು ನನ್ನ ದೇಹದ ಕೊಬ್ಬು, ರಕ್ತ, ಮಾಂಸ, ಬಲಗಳನ್ನೆಲ್ಲ ತಿನ್ನುತ್ತಿದೆ. ಎಲೈ ದೇವನೆ, ದೀನರಲ್ಲಿ ಕೃಪೆಮಾಡುವವನೆ, ನಾನು ಬಹಳ ಸೊರಗಿ ಹೋಗಿರುತ್ತೇನೆ. ಇಂಥ ಸಂದರ್ಭದಲ್ಲಿಯೂ ನೀನು ಉದಾಸೀನಮಾಡುವ ದೇಕೆ?

**ಕಫವ್ಯಾಹತೋಷ್ಣೋಲ್ಬಣಶ್ವಾಸವೇಗ-**
**ವ್ಯಥಾವಿಸ್ಫುರತ್ಸರ್ವಮರ್ಮಾಸ್ಥಿಬಂಧಾಮ್ ।**
**ವಿಚಿಂತ್ಯಾಹಮಂತ್ಯಾಮಚಿಂತ್ಯಾಮವಸ್ಥಾಂ**
**ಬಿಭೇಮಿ ಪ್ರಭೋ ಕಿಂ ಕರೋಮಿ ಪ್ರಸೀದ ॥ ೧೨ ॥**

೧೨. ಕಫದಿಂದ ನಿರೋಧಿಸಲ್ಪಟ್ಟು ಉಲ್ಬಣವಾದ ಬಿಸಿಯುಸಿರಿನ ವೇಗದಿಂದ ಹರಡಿಕೊಂಡಿರುವ ಎಲ್ಲಾ ಪಕ್ಕೆಲುಬುಗಳು, ಕೀಲುಗಳಲ್ಲಿ ಉಂಟಾಗಿರುವ ನೋವನ್ನು ಚಿಂತಿಸಿದಾಗ, ಕಡೆಯ ಅವಸ್ಥೆಗೆ ಬಂದಾಗ ಎಲೈ ಪ್ರಭುವೆ, ಭಯಪಟ್ಟವನಾಗಿರುವೆನು. ಏನು ಮಾಡಲಿ? ಪ್ರಸನ್ನನಾಗು.

**ನಮಸ್ತೇ ಜಗನ್ನಾಥ ವಿಷ್ಣೋ ನಮಸ್ತೇ**
**ನಮಸ್ತೇ ಗದಾಚಕ್ರಪಾಣೇ ನಮಸ್ತೇ ।**
**ನಮಸ್ತೇ ಪ್ರಪನ್ನಾರ್ತಿಹಾರಿನ್ ನಮಸ್ತೇ**
**ಸಮಸ್ತಾಪರಾಧಂ ಕ್ಷಮಸ್ವಾಖಿಲೇಶ ॥ ೧೩ ॥**

೧೩. ಎಲೈ ಜಗನ್ನಾಥನೆ, ವಿಷ್ಣುವೆ, ಗದಾಚಕ್ರಗಳನ್ನು ಧರಿಸಿರುವವನೆ, ಶರಣಾಗತರ ದುಃಖಪರಿಹಾರಕನೆ, ನಿನಗೆ ನಮಸ್ಕಾರಗಳು. ಅಖಿಲೇಶನೆ, ಎಲ್ಲಾ ತಪ್ಪುಗಳನ್ನೂ ಕ್ಷಮಿಸು.

**ಮುಖೇ ಮಂದಹಾಸಂ ನಖೇ ಚಂದ್ರಭಾಸಂ**
**ಕರೇ ಚಾರುಚಕ್ರಂ ಸುರೇಶಾಭಿವಂದ್ಯಮ್ ।**
**ಭುಜಂಗೇ ಶಯಾನಂ ಭಜೇ ಪದ್ಮನಾಭಂ**
**ಹರೇರನ್ಯದೇವಂ ನ ಮನ್ಯೇ ನ ಮನ್ಯೇ ॥ ೧೪ ॥**

೧೪. ಮುಖದಲ್ಲಿ ಮುಗುಳುನಗೆಯೂ ಉಗುರಿನಲ್ಲಿ ಚಂದ್ರನ ಕಾಂತಿಯೂ ಕೈಯಲ್ಲಿ ಸುಂದರವಾದ ಚಕ್ರಾಯುಧವೂ ಉಳ್ಳ, ಬ್ರಹ್ಮನಿಂದ ವಂದಿತನಾದ ಮತ್ತು ಆದಿಶೇಷನ ಹಾಸಿಗೆಯಲ್ಲಿ ಮಲಗಿರುವ ಪದ್ಮನಾಭನನ್ನು ಭಜಿಸುತ್ತೇನೆ. ಶ್ರೀಹರಿಗಿಂತ ಬೇರೊಬ್ಬ ದೇವನನ್ನು ನಾನು ತಿಳಿಯೆನು. ತಿಳಿಯೆನು.

**ಲಪನ್ನಚ್ಯುತಾನಂತಗೋವಿಂದ ವಿಷ್ಣೋ**
**ಮುರಾರೇ ಹರೇ ನಾಥ ನಾರಾಯಣೇತಿ ।**
**ಯಥಾನುಸ್ಮರಿಷ್ಯಾಮಿ ಭಕ್ತ್ಯಾ ಭವಂತಂ**
**ತಥಾ ಮೇ ದಯಾಶೀಲ ದೇವ ಪ್ರಸೀದ ॥ ೧೫ ॥**

೧೫. ಅಚ್ಯುತ, ಅನಂತ, ಗೋವಿಂದ, ವಿಷ್ಣೋ, ಮುರಾರೇ, ಹರಿಯೆ, ನಾಥ, ನಾರಾಯಣನೆ- ಹೀಗೆಂದು ಭಕ್ತಿಯಿಂದ ನಾನು ಸ್ಮರಿಸಿದಂತೆಲ್ಲ ಎಲೈ ದಯಾಶೀಲನಾದ ದೇವನೆ, ಪ್ರಸನ್ನನಾಗು.

**ಭುಜಂಗಪ್ರಯಾತಂ ಪಠೇದ್ಯಸ್ತು ಭಕ್ತ್ಯಾ**
**ಸಮಾಧಾಯ ಚಿತ್ತೇ ಭವಂತಂ ಮುರಾರೇ ।**
**ಸ ಮೋಹಂ ವಿಹಾಯಾಶು ಯುಷ್ಮತ್ಪ್ರಸಾದಾತ್**
**ಸಮಾಶ್ರಿತ್ಯ ಯೋಗಂ ವ್ರಜತ್ಯಚ್ಯುತ ತ್ವಾಮ್ ॥ ೧೬ ॥**

೧೬. ಯಾವನು ಭಕ್ತಿಯಿಂದ ಈ ಭುಜಂಗಪ್ರಯಾತಸ್ತೋತ್ರವನ್ನು ಮುರಾರಿಯಾದ ದೇವನನ್ನು ಮನಸ್ಸಿನಲ್ಲಿ ನೆನೆಯುತ್ತಾ ಸಮಾಧಾನದಿಂದ ಪಠಿಸುವನೋ ಅವನು ಮೋಹವನ್ನು ಕಳೆದುಕೊಂಡು ಎಲೈ, ಅಚ್ಯುತನೆ, ನಿನ್ನ ಪ್ರಸಾದದಿಂದ ಯೋಗವನ್ನು ಹೊಂದಿದವನಾಗಿ ಅನಂತರ ನಿನ್ನನ್ನೇ ಬಳಿಸಾರುವನು.

## ೧೦. ತತ್ತ್ವಮಸಿ ತತ್ತ್ವಮ್

(ಅಧ್ಯಾತ್ಮಶಂಕರವಿಜಯ, ಪುಟ- ೬೪)

**ನೇತಿ ನೇತ್ಯಾದಿ ನಿಗಮವಚನೇನ**
**ನಿಪುಣಂ ನಿಷಿಧ್ಯ ಮೂರ್ತಾಮೂರ್ತರಾಶಿಮ್ ।**
**ಯದಶಕ್ಯನಿಹ್ನವಂ ಸ್ವಾತ್ಮರೂಪತಯಾ**
**ಜಾನಂತಿ ಕೋವಿದಾಃ ತತ್ತ್ವಮಸಿ ತತ್ತ್ವಮ್ ॥ ೧ ॥**

೧. ನೇತಿ, ನೇತಿ- ಎಂಬ ವೇದಾಂತವಾಕ್ಯದಿಂದ ಮೂರ್ತಾಮೂರ್ತಗಳೆಂಬ ಉಪಾಧಿಗಳನ್ನೆಲ್ಲ ನಿಷೇಧಿಸಿದ ಅನಂತರ ಯಾವದನ್ನು ಮತ್ತೆ ಪ್ರತಿಷೇಧಮಾಡಲಾಗದೆ ಇರುವದೋ- ಏಕೆಂದರೆ ಅದು ನಿಷೇಧಮಾಡುವವನ ಆತ್ಮವೇ ಆಗಿರುವದೋ, ಹಾಗೆಂದು ಬಲ್ಲವರು ತಿಳಿದಿರುವರೋ ಆ ತತ್ತ್ವವೇ ನೀನಾಗಿರುವೆ.

**ಖಾದ್ಯಮುತ್ಪಾದ್ಯ ವಿಶ್ವಮನುಪ್ರವಿಶ್ಯ**
**ಗೂಢಮನ್ನಮಯಾದಿಕೋಶತುಷಜಾಲೇ ।**
**ಕವಯೋ ವಿವಿಚ್ಯ ಯುಕ್ತ್ಯವಘಾತತೋ**
**ಯತ್ತಂಡುಲವದಾದದತಿ ತತ್ತ್ವಮಸಿ ತತ್ತ್ವಮ್ ॥ ೨ ॥**

೨. ಆಕಾಶವೇ ಮುಂತಾದ ಮಹಾಭೂತಗಳನ್ನು ಉಂಟುಮಾಡಿ ಜಗತ್ತನ್ನು ಒಳಹೊಕ್ಕು ಅನ್ನಮಯವೇ ಮುಂತಾದ ಕೋಶಗಳಲ್ಲಿ- ಹೊಟ್ಟಿನಲ್ಲಿ ಅಡಗಿರುವ ಅಕ್ಕಿಯ ಕಾಳಿನಂತೆ ಅಡಗಿಕೊಂಡಿರುವ (ಬ್ರಹ್ಮವನ್ನು) ವಿವೇಕಿಗಳು ಯುಕ್ತಿಗಳ ಮೂಲಕ ಶೋಧಿಸಿ-, ಹೇಗೆ ಹೊಟ್ಟಿನಿಂದ ಅಕ್ಕಿಯನ್ನು ಬೇರ್ಪಡಿಸಿ ಜನರು ಪಡೆಯುವರೋ ಹಾಗೆ- ಕಂಡುಕೊಳ್ಳುವರೋ ಅಂಥ ಆತ್ಮತತ್ತ್ವವೇ ನೀನಾಗಿರುವೆ.

**ವಿಷಮವಿಷಯೇಷು ಸಂಚಾರಿಣೋಽಕ್ಷಾಶ್ವಾನ್**
**ದೋಷದರ್ಶನಕಶಾಭಿಘಾತತಃ ।**
**ಸ್ವೈರಂ ಸಂನಿವರ್ತ್ಯ ಸ್ವಾಂತರಶ್ಮಿಭಿರ್ಧೀರಾ**
**ಬಧ್ನಂತಿ ಯತ್ರ ತತ್ತ್ವಮಸಿ ತತ್ತ್ವಮ್** ॥ ೩ ॥

೩. ವಿಷಮವಾದ (ಅಹಿತಕರವಾದ) ವಿಷಯಗಳಲ್ಲಿ ತೊಡಗುವ ಇಂದ್ರಿಯಗಳೆಂಬ ಕುದುರೆಗಳನ್ನು- ಆಯಾ ವಿಷಯಭೋಗಗಳಲ್ಲಿರುವ ದೋಷಗಳನ್ನು ಕಂಡುಕೊಳ್ಳುವದೆಂಬ ಚಾವಟಿಏಟುಗಳಿಂದ ಧೈರ್ಯವಾಗಿ ಹಿಂದಿರುಗಿಸಿ ಒಳಗಿನ (ಮನೋ) ನಿಗ್ರಹವೆಂಬ ಲಗಾಮುಗಳಿಂದ ಧೀರರಾದವರು ಎಲ್ಲಿ ಕಟ್ಟುವರೋ ಆ ಕೇಂದ್ರವಾಗಿರುವ ಬ್ರಹ್ಮವೆಂಬ ತತ್ತ್ವವೇ ನೀನಾಗಿರುವೆ.

**ವ್ಯಾವೃತ್ತಜಾಗ್ರದಾದಿಷ್ವನುಸ್ಯೂತಂ**
**ತೇಭ್ಯೋಽನ್ಯದಿವ ಪುಷ್ಪೇಭ್ಯ ಇವ ಸೂತ್ರಮ್ ।**
**ಇತಿ ಯದೌಪಾಧಿಕತ್ರಯಪೃಥಕ್ತ್ವೇನ**
**ವಿದಂತಿ ಸೂರಯಸ್ತತ್ತ್ವಮಸಿ ತತ್ತ್ವಮ್** ॥ ೪ ॥

೪. ಎಚ್ಚರವೇ ಮುಂತಾದ ಅವಸ್ಥೆಗಳು ನಿವೃತ್ತವಾಗುವಾಗಲೂ ತಾನು ಅನುಗತವಾಗಿರುವದಾಗಿ- ಹೇಗೆ ಹೂವುಗಳನ್ನು ಕಟ್ಟುವ ದಾರವು ಹೂಗಳಿಗಿಂತ ಬೇರೆಯಾಗಿದೆಯೋ ಹಾಗೆ- ಸ್ವತಂತ್ರವಾಗಿ ಬೇರೆಯಾಗಿರುವ- ಮತ್ತು ಎಚ್ಚರವೇ ಮುಂತಾದ ಅವಸ್ಥೆಗಳೆಂಬ ಉಪಾಧಿತ್ರಯಗಳಿಗಿಂತಲೂ ವಿಲಕ್ಷಣವಾಗಿ ಪ್ರತ್ಯೇಕವಾಗಿರುವ ತತ್ತ್ವವೆಂದು ಬಲ್ಲವರು ಯಾವದನ್ನು ತಿಳಿಯುವರೋ ಆ ತತ್ತ್ವವೇ ನೀನಾಗಿರುವೆ.

**ಪುರುಷ ಏವೇದಮಿತ್ಯಾದಿ ವೇದೇಷು**
**ಸರ್ವಕಾರಣತಯಾ ಯಸ್ಯ ಸಾರ್ವಾತ್ಮ್ಯಮ್ ।**
**ಹಾಟಕಸ್ಯೇವ ಮುಕುಟಾದಿ ತಾದಾತ್ಮ್ಯಂ**
**ಸರಸಮಾಮ್ನಾಯತೇ ತತ್ತ್ವಮಸಿ ತತ್ತ್ವಮ್** ॥ ೫ ॥

೫. ಇದೆಲ್ಲವೂ ಪುರುಷನೇ- ಎಂದು ವೇದಗಳಲ್ಲಿ ಸರ್ವಕ್ಕೂ ಕಾರಣವೆಂದು ಯಾವ ತತ್ತ್ವದ- ಹೇಗೆ ಕಿರೀಟಾದಿಗಳು ಚಿನ್ನಕ್ಕಿಂತ ಬೇರೆಯಲ್ಲದೆ ಚಿನ್ನವೇ ಆಗಿರುವವೋ ಹಾಗೆಂದು - ಸಾರ್ವಾತ್ಮ್ಯವನ್ನು ಹಾಡಿಹೊಗಳಿದೆಯೋ ಆ ತತ್ತ್ವವೇ ನೀನಾಗಿರುವೆ.

**ಯಶ್ಚಾಹಮತ್ರ ವರ್ಷ್ಮಣಿ ಭಾಮಿ ಸೋಽಸೌ**
**ಯೋಽಸೌ ವಿಭಾತಿ ರವಿಮಂಡಲೇ ಸೋಽಹಮಿತಿ ।**
**ವೇದವಾದಿನೋ ವ್ಯತಿಹಾರತೋ ಯದಧ್ಯಾಪಯಂತಿ**
**ಯತ್ನತಃ ತತ್ತ್ವಮಸಿ ತತ್ತ್ವಮ್ ॥ ೬ ॥**

೬. ಯಾವ ನಾನು ಈ ಶರೀರದಲ್ಲಿದ್ದು ಬೆಳಗುತ್ತಿರುವೆನೋ ಯಾವ ಬೆಳಕು ಸೂರ್ಯಮಂಡಲದಲ್ಲಿದ್ದು ಪ್ರಕಾಶಿಸುತ್ತಿರುವದೋ ಅವೆರಡೂ ನಾನೇ ಎಂದು ವೇದವಾದಿಗಳು ಯತ್ನಪೂರ್ವಕವಾಗಿ ಪರಸ್ಪರಸಂಬಧದಿಂದ ತಿಳಿಸುತ್ತಿರುವರೋ ಆ ತತ್ತ್ವವೇ ನೀನಾಗಿರುವೆ.

**ವೇದಾನುವಚನಸದ್ದಾನಮುಖಧರ್ಮೈಃ**
**ಶ್ರದ್ಧಯಾನುಷ್ಠಿತೈರ್ವಿದ್ಯಯಾ ಯುಕ್ತೈಃ ।**
**ವಿವಿದಿಷಂತ್ಯತ್ಯಂತವಿಮಲಸ್ವಾಂತಾ**
**ಬ್ರಾಹ್ಮಣಾ ಯದ್ಬ್ರಹ್ಮ ತತ್ತ್ವಮಸಿ ತತ್ತ್ವಮ್ ॥ ೭ ॥**

೭. ವೇದಾಧ್ಯಯನ, ದಾನ, ಮುಂತಾದ ಧರ್ಮಗಳನ್ನು ತಿಳಿವಳಿಕೆಯಿಂದೊಡಗೂಡಿ ಶ್ರದ್ಧೆಯಿಂದ ಅನುಷ್ಠಾನ ಮಾಡಿ ಅಂತಃಕರಣವನ್ನು ಸ್ವಚ್ಛಗೊಳಿಸಿಕೊಂಡ ಬ್ರಾಹ್ಮಣರು ಯಾವ ಬ್ರಹ್ಮವನ್ನು ತಿಳಿಯಲೆಳಸುವರೋ ಆ ತತ್ತ್ವವೇ ನೀನಾಗಿರುವೆ.

**ಶಮದಮೋಪರಮಾದಿಸಾಧನೈಃ ಧೀರಾಃ**
**ಸ್ವಾತ್ಮನಾತ್ಮನಿ ಯದನ್ವಿಷ್ಯ ಕೃತಕೃತ್ಯಾಃ ।**
**ಅಧಿಗತಾಮಿತಸಚ್ಚಿದಾನಂದರೂಪಾ**
**ನ ಪುನರಿಹ ಖಿದ್ಯಂತೇ ತತ್ತ್ವಮಸಿ ತತ್ತ್ವಮ್ ॥ ೮ ॥**

೮. ಶಮ, ದಮ, ಉಪರತಿ- ಮುಂತಾದ ಸಾಧನೆಗಳಿಂದ ಧೀರರು ತಮ್ಮಲ್ಲಿಯೇ ವಿಚಾರಮಾಡಿ ಯಾವ ನೆಲೆಯನ್ನು ಕಂಡು ಕೃತಾರ್ಥರಾಗಿ ಅಪರಿಮಿತವಾದ ಸಚ್ಚಿದಾನಂದರೂಪವನ್ನು ಪಡೆದು ಇನ್ನು ದುಃಖವನ್ನೆಂದಿಗೂ ಇಲ್ಲಿ ಹೊಂದಲಾರರೋ ಅಂಥ ತತ್ತ್ವವೇ ನೀನಾಗಿರುವೆ.

---

# ೧೧. ಭ್ರಮರಾಂಬಾಷ್ಟಕಮ್

(ಅಧ್ಯಾತ್ಮಶಂಕರವಿಜಯ, ಪುಟ- ೬೬)

**ಚಾಂಚಲ್ಯಾರುಣಲೋಚನಾಂಚಿತಕೃಪಾಚಂದ್ರಾರ್ಕಚೂಡಮಣಿಂ**
**ಚಾರುಸ್ಮೇರಮುಖಾಂ ಚರಾಚರಜಗತ್ಸಂರಕ್ಷಿಣೀಂ ತತ್ಪದಾಮ್।**
**ಚಂಚಚ್ಚಂಪಕನಾಸಿಕಾಗ್ರವಿಲಸನ್ ಮುಕ್ತಾಮಣೀರಂಜಿತಾಂ**
**ಶ್ರೀಶೈಲಸ್ಥಲವಾಸಿನೀಂ ಭಗವತೀಂ ಶ್ರೀಮಾತರಂ ಭಾವಯೇ ॥ ೧ ॥**

೧. ಚಂಚಲವಾದ ಹಾಗೂ ನಸುಗೆಂಪಾದ ಕಟಾಕ್ಷದಿಂದ ಅನುಗ್ರಹಿಸಲ್ಪಟ್ಟ ಸೂರ್ಯಚಂದ್ರರೆಂಬ ಚೂಡಾಮಣಿಗಳನ್ನು ಧರಿಸಿದವಳಾದ, ಸುಂದರವಾದ ಮುಗುಳುನಗೆಯ ಮುಖದಿಂದ ಕೂಡಿದವಳಾದ, ಚರಾಚರಾತ್ಮಕಪ್ರಪಂಚವನ್ನೆಲ್ಲ ಕಾಪಾಡುವವಳಾದ, ತತ್ ಎಂಬ ಪರಮಪದವಾಸಿನಿಯಾದ, ಸಂಪಿಗೆ ಹೂವಿನಂತೆ (ಸುಂದರವಾದ) ಮೂಗಿನ ತುದಿಯಲ್ಲಿ ಅಳ್ಳಾಡುತ್ತಿರುವ ಮುತ್ತಿನ ಮಣಿಯಿಂದ ವಿರಾಜಮಾನಳಾದ, ಶ್ರೀಶೈಲವೆಂಬ ಪುಣ್ಯಸ್ಥಳದಲ್ಲಿ ನೆಲಸಿರುವ ಭಗವತಿಯಾದ ಶ್ರೀಮಾತೆಯನ್ನು (ಮನಸ್ಸಿಗೆ) ತಂದುಕೊಳ್ಳುವೆನು.

**ಕಸ್ತೂರೀತಿಲಕಾಂಚಿತೇಂದುವಿಲಸತ್ ಪ್ರೋದ್ಭಾಸಿಫಾಲಸ್ಥಲೀಂ**
**ಕರ್ಪೂರದ್ರವಮಿಶ್ರಚೂರ್ಣಖದಿರಾಮೋದೋಲ್ಲಸದ್ವೀಟಿಕಾಮ್।**
**ಲೋಲಾಪಾಂಗತರಂಗಿತೈರಧಿಕೃಪಾಸಾರೈರ್ನತಾನಂದಿನೀಂ**
**ಶ್ರೀಶೈಲಸ್ಥಲವಾಸಿನೀಂ ಭಗವತೀಂ ಶ್ರೀಮಾತರಂ ಭಾವಯೇ**
**॥ ೨ ॥**

೨. ಕಸ್ತೂರಿ (ಗಂಧ) ದಿಂದ ರಚಿತವಾದ ಚಂದ್ರನಾಕಾರದ ತಿಲಕದಿಂದ ಹೊಳೆಯುವ ಪ್ರಕಾಶಮಾನವಾದ ಹಣೆಯುಳ್ಳವಳಾದ, ಕರ್ಪೂರರಸದಿಂದ ಕೂಡಿಧ, ಕಾಚಿನಪುಡಿಯ ಸುವಾಸನೆಯಿಂದ ಪೂರ್ಣವಾದ ತಾಂಬೂಲ ಸೇವನೆಯುಳ್ಳವಳಾದ, ಲೋಲವಾದ ಕುಡಿನೋಟಗಳ ಅಲೆಗಳಿಂದ ನಮಸ್ಕರಿಸಿದವರನ್ನು ಕೃಪೆಮಾಡುವವಳೂ ಆನಂದಗೊಳಿಸುವವಳೂ ಆದ ಶ್ರೀಶೈಲಕ್ಷೇತ್ರನಿವಾಸಿನಿಯಾದ ಭಗವತಿಯಾದ ಶ್ರೀ ಮಾತೆಯನ್ನು (ಮನಸ್ಸಿನಲ್ಲಿ) ಅನುಸಂಧಾನಮಾಡುವೆನು.

**ರಾಜನ್ಮತ್ತಮರಾಲಮಂದಗಮನಾಂ ರಾಜೀವಪತ್ರೇಕ್ಷಣಾಂ**
**ರಾಜೀವಪ್ರಭವಾದಿದೇವಮಕುಟೈಃ ರಾಜತ್ಪದಾಂಭೋರುಹಾಮ್।**
**ರಾಜೀವಾಯತಮಂದಮಂಡಿತಕುಚಾಂ ರಾಜಾಧಿರಾಜೇಶ್ವರೀಂ**
**ಶ್ರೀಶೈಲಸ್ಥಲವಾಸಿನೀಂ ಭಗವತೀಂ ಶ್ರೀಮಾತರಂ ಭಾವಯೇ ॥ ೩ ॥**

೩. ಚೆನ್ನಾಗಿ ಮದಿಸಿದ ಹಂಸದಂತೆ ಸುಂದರವಾದ ನಿಧಾನವಾದ ನಡಗೆಯುಳ್ಳವಳಾದ, ಕಮಲಪತ್ರದಂತೆ ಕಣ್ಣುಗಳುಳ್ಳ, ಕಮಲಸಂಭವನಾದ ಬ್ರಹ್ಮನೇ ಮುಂತಾದ ದೇವತೆಗಳ ಕಿರೀಟಗಳ ಕಾಂತಿಯಿಂದ ಹೊಳೆಯುವ ಪಾದಾರವಿಂದ ಗಳುಳ್ಳವಳಾದ, ವಿಶಾಲವಾದ ಎದೆಯಲ್ಲಿ ಕೊಕ್ಕರೆಯಂತೆ ಆಕಾರವುಳ್ಳ ಕುಚದ್ವಯಗಳಿಂದ ಶೋಭಿಸುತ್ತಿರುವವಳಾದ, ರಾಜಾಧಿರಾಜರು ಗಳಿಗೂ ಒಡತಿಯಾದ ಶ್ರೀಶೈಲಸ್ಥಲನಿವಾಸಿನಿಯಾದ ಪೂಜ್ಯಳಾದ ಶ್ರೀಮಾತೆಯನ್ನು ಭಾವನೆಮಾಡುವೆನು.

**ಷಟ್ತಾರಾಂ ಗಣದೀಪಿಕಾಂ ಶಿವಸತೀಂ ಷಡ್ವೈರಿವರ್ಗಾಪಹಾಂ**
**ಷಟ್ಚಕ್ರಾಂತರಸಂಸ್ಥಿತಾಂ ವರಸುಧಾಂ ಷಡ್ಯೋಗಿನೀವೇಷ್ಟಿತಾಮ್।**
**ಷಟ್ಚಕ್ರಾಂಚಿತಪಾದುಕಾಂಚಿತಪದಾಂ ಷಡ್ಭಾವಗಾಂ ಷೋಡಶೀಂ**
**ಶ್ರೀಶೈಲಸ್ಥಲವಾಸಿನೀಂ ಭಗವತೀಂ ಶ್ರೀಮಾತರಂ ಭಾವಯೇ ॥ ೪ ॥**

೪. (ಕೃತ್ತಿಕಾಮಾತೆಯರೆನಿಸಿದ) ಆರು ನಕ್ಷತ್ರಗಳ ಪುಂಜದ ರೂಪಿಣಿಯಾದ, ದೇವಗಣಗಳನ್ನು ಬೆಳಗುವವಳಾದ, ಶಿವನ ಪತ್ನಿಯಾದ, ಕಾಮಾದಿ ಅರಿಷಡ್ವರ್ಗಗಳನ್ನು ನಾಶಗೊಳಿಸುವವಳಾದ, (ಮೂಲಾಧಾರಾದಿ) ಆರುಚಕ್ರಗಳ ನಡುವೆ ಇದ್ದುಕೊಂಡಿರುವವಳಾದ, ಶ್ರೇಷ್ಠವಾದ ಅಮೃತರೂಪಳಾದ, ಆರು ಯೋಗಿನಿದೇವತೆಗಳಿಂದ ಪರಿವೃತಳಾದ ಆರು ಚಕ್ರಗಳಿಂದ ಸುತ್ತುವರೆಯಲ್ಪಟ್ಟ ದಿವ್ಯಪಾದುಕೆಗಳಲ್ಲಿ ಪಾದಗಳನ್ನು ಇಟ್ಟಿರುವವಳಾದ (ನೈಯಾಯಿಕರು ತಿಳಿಸುವ) ಆರು (ದ್ರವ್ಯಾದಿ) ಪದಾರ್ಥಗಳಲ್ಲಿದ್ದು ಕೊಂಡಿರುವವಳಾದ, ಹದಿನಾರುವರ್ಷ ವಯಸ್ಸಿನವಳಾದ, ಶ್ರೀಶೈಲಕ್ಷೇತ್ರವಾಸಿನಿಯಾದ ಪೂಜ್ಯಳಾದ ಶ್ರೀಮಾತೆಯನ್ನು ಧ್ಯಾನಿಸುವೆನು.

**ಶ್ರೀನಾಥಾದೃತಪಾಲಿತತ್ರಿಭುವನಾಂ ಶ್ರೀಚಕ್ರಸಂಚಾರಿಣೀಂ**
**ಜ್ಞಾನಾಸಕ್ತಮನೋಜಯೌವನಲಸದ್ಗಂಧರ್ವಕನ್ಯಾದೃತಾಮ್ ।**
**ದೀನಾನಾಮತಿವೇಲಭಾಗ್ಯಜನನೀಂ ದಿವ್ಯಾಂಬರಾಲಂಕೃತಾಂ**
**ಶ್ರೀಶೈಲಸ್ಥಲವಾಸಿನೀಂ ಭಗವತೀಂ ಶ್ರೀಮಾತರಂ ಭಾವಯೇ ॥ ೫ ॥**

೫. ಲಕ್ಷ್ಮೀಪತಿಯಾದ ವಿಷ್ಣುವಿನಿಂದ ಗೌರವಿಸಲ್ಪಟ್ಟವಳೂ ಮೂರು ಲೋಕಗಳನ್ನೂ ಕಾಪಾಡುವವಳೂ ಆದ, ಶ್ರೀಚಕ್ರದಲ್ಲಿ ಸಂಚರಿಸುವವಳಾದ, ತತ್ತ್ವ ಜ್ಞಾನವನ್ನು ಬಯಸಿ- ಇನ್ನೂ ಹದಿಹರೆಯದ ವಯಸ್ಸಿನವಳಾದ ಸುಂದರಿಯಾದ ಗಂಧರ್ವಕನ್ಯೆಯಿಂದ ಪೂಜಿಸಲ್ಪಡುವವಳಾದ, ದೀನರಿಗೆ ಎಲ್ಲೆ ಮೀರಿದ ಐಶ್ವರ್ಯವನ್ನುಂಟುಮಾಡುವವಳಾದ, ದಿವ್ಯವಸ್ತ್ರಗಳಿಂದ ಅಲಂಕೃತಳಾದ, ಶ್ರೀಶೈಲ ಕ್ಷೇತ್ರವಾಸಿನಿಯಾದ ಭಗವತಿಯಾದ ಶ್ರೀಮಾತೆಯನ್ನು ಧ್ಯಾನಿಸುವೆನು.

ಶ್ರೀನಾಥಾದೃತಪಾಲಿತತ್ರಿಭುವನಾಂ ಶ್ರೀಚಕ್ರಸಂಚಾರಿಣೀಂ
ಜ್ಞಾನಾಸಕ್ತಮನೋಜಯೌವನಲಸದ್ಗಂಧರ್ವಕನ್ಯಾದೃತಾಮ್ ।
ದೀನಾನಾಮತಿವೇಲಭಾಗ್ಯಜನನೀಂ ದಿವ್ಯಾಂಬರಾಲಂಕೃತಾಂ
ಶ್ರೀಶೈಲಸ್ಥಲವಾಸಿನೀಂ ಭಗವತೀಂ ಶ್ರೀಮಾತರಂ ಭಾವಯೇ ॥ ೫ ॥

೫. ಲಕ್ಷ್ಮೀಪತಿಯಾದ ವಿಷ್ಣುವಿನಿಂದ ಗೌರವಿಸಲ್ಪಟ್ಟವಳೂ ಮೂರು ಲೋಕಗಳನ್ನೂ ಕಾಪಾಡುವವಳೂ ಆದ, ಶ್ರೀಚಕ್ರದಲ್ಲಿ ಸಂಚರಿಸುವವಳಾದ, ತತ್ತ್ವಜ್ಞಾನವನ್ನು ಬಯಸಿ- ಇನ್ನೂ ಹದಿಹರೆಯದ ವಯಸ್ಸಿನವಳಾದ ಸುಂದರಿಯಾದ ಗಂಧರ್ವಕನ್ಯೆಯಿಂದ ಪೂಜಿಸಲ್ಪಡುವವಳಾದ, ದೀನರಿಗೆ ಎಲ್ಲೆ ಮೀರಿದ ಐಶ್ವರ್ಯವನ್ನುಂಟುಮಾಡುವವಳಾದ, ದಿವ್ಯವಸ್ತ್ರಗಳಿಂದ ಅಲಂಕೃತಳಾದ, ಶ್ರೀಶೈಲ ಕ್ಷೇತ್ರವಾಸಿನಿಯಾದ ಭಗವತಿಯಾದ ಶ್ರೀಮಾತೆಯನ್ನು ಧ್ಯಾನಿಸುವೆನು.

ಲಾವಣ್ಯಾಧಿಕಭೂಷಿತಾಂಗಲತಿಕಾಂ ಲಾಕ್ಷಾಲಸದ್ರಾಗಿಣೀಂ
ಸೇವಾಯಾತಸಮಸ್ತದೇವವನಿತಾಂ ಸೀಮಂತಭೂಷಾನ್ವಿತಾಮ್।
ಭಾವೋಲ್ಲಾಸವಶೀಕೃತಪ್ರಿಯತಮಾಂ ಭಂಡಾಸುರಚ್ಛೇದಿನೀಂ
ಶ್ರೀಶೈಲಸ್ಥಲವಾಸಿನೀಂ ಭಗವತೀಂ ಶ್ರೀಮಾತರಂ ಭಾವಯೇ
॥ ೬ ॥

೬. ಅತಿಹೆಚ್ಚಿನ ಲಾವಣ್ಯದಿಂದ ಕೂಡಿದ, ಬಳ್ಳಿಯಂಥ ಶರೀರವುಳ್ಳವಳಾದ, ಲಾಕ್ಷಾ (ಅರಗು) ರಸದಿಂದ ಕೆಂಪಾದ ಶರೀರಾವಯವಗಳುಳ್ಳ, ಸೇವೆಯನ್ನು ಕೈಗೊಳ್ಳುವ ಸಲುವಾಗಿಯೇ ಬಂದಿರುವ ದೇವತಾ ಸ್ತ್ರೀ ಸಮೂಹವುಳ್ಳ, ಬೈತಲೆಯ ಬೊಟ್ಟು (ಮುಂತಾದ) ಒಡವೆಗಳಿಂದ ಅಲಂಕೃತಳಾದ, ಹಾವಭಾವ- ಉಲ್ಲಾಸಗಳಿಂದ ತನ್ನ ಪ್ರಿಯತಮನನ್ನು ವಶಗೊಳಿಸಿಕೊಂಡಿರುವವಳಾದ, ಭಂಡಾಸುರನೆಂಬ ರಾಕ್ಷಸನನ್ನು ನಾಶಮಾಡಿದವಳಾದ ಶ್ರೀಶೈಲಕ್ಷೇತ್ರವಾಸಿನಿಯಾದ ಶ್ರೀಮಾತೆಯನ್ನು ಭಾವಿಸುವೆನು.

ಧನ್ಯಾಂ ಸೋಮವಿಭಾವನೀಯಚರಿತಾಂ ಧಾರಾಧರಶ್ಯಾಮಲಾಂ
ಮುನ್ಯಾರಾಧನಮೇಧಿನೀಂ ಸುಮವತಾಂ ಮುಕ್ತಿ ಪ್ರದಾನವ್ರತಾಮ್।
ಕನ್ಯಾಪೂಜನಸುಪ್ರಸನ್ನಹೃದಯಾಂ ಕಾಂಚೀಲಸನ್ಮಧ್ಯಮಾಂ
ಶ್ರೀಶೈಲಸ್ಥಲವಾಸಿನೀಂ ಭಗವತೀಂ ಶ್ರೀಮಾತರಂ ಭಾವಯೇ ॥ ೭ ॥

೭. ಧನ್ಯಳಾದ, ಚಂದ್ರನಂತೆ ಶುಭ್ರವಾದ ಅವತಾರಚರಿತ್ರೆಯುಳ್ಳ, ಮೋಡದಂತೆ ನೀಲವರ್ಣಳಾದ, ಋಷಿಮುನಿಗಳ ಪೂಜಾದಿಗಳಿಂದ ಬೆಳೆಯುವವಳಾದ ಮತ್ತು (ಹೃದಯವೆಂಬ) ಆಕಾಶದಲ್ಲಿ ಆರಾಧಿಸುವವರಿಗೆ ಮುಕ್ತಿಯನ್ನು ಕರುಣಿಸುವ ನಿಷ್ಠಳೂ ಆದ, ಹಾಗೂ ಕನ್ನಿಕಾಪೂಜೆಯಿಂದ

ಸಂತೋಷಗೊಳ್ಳುವ ಹೃದಯವುಳ್ಳವಳಾದ, ನಡುವಿನಲ್ಲಿರುವ ಸೊಂಟದ ಪಟ್ಟಿಯಿಂದ ವಿರಾಜಮಾನಳಾದ, ಶ್ರೀಶೈಲಕ್ಷೇತ್ರವಾಸಿನಿಯಾದ ಭಗವತಿಯಾದ ಶ್ರೀಮಾತೆಯನ್ನು ಧ್ಯಾನಿಸುವೆನು.

**ಕರ್ಪೂರಾಗರುಕುಂಕುಮಾಂಕಿತಕುಚಾಂ ಕರ್ಪೂರವರ್ಣಸ್ಥಿತಾಂ**
**ಕೃಷ್ಟೋತ್ಕೃಷ್ಟಸುಕೃಷ್ಟಕರ್ಮದಹನಾಂ ಕಾಮೇಶ್ವರೀಂ ಕಾಮಿನೀಮ್।**
**ಕಾಮಾಕ್ಷೀಂ ಕರುಣಾರಸಾರ್ದ್ರಹೃದಯಾಂ ಕಲ್ಪಾಂತರಸ್ಥಾಯಿನೀಂ**
**ಶ್ರೀಶೈಲಸ್ಥಲವಾಸಿನೀಂ ಭಗವತೀಂ ಶ್ರೀಮಾತರಂ ಭಾವಯೆ ॥ ೮ ॥**

೮. ಕರ್ಪೂರ, ಅಗರು, ಕುಂಕುಮಗಳಿಂದ ಲೇಪಿಸಲ್ಪಟ್ಟ ಕುಚಗಳುಳ್ಳವಳಾದ, ಕರ್ಪೂರದಂತೆ ಶುಭ್ರವರ್ಣಳಾದ, ಮಾಡಿರುವ ಪಾಪಪುಣ್ಯಗಳೆಂಬ- ಎಲ್ಲಾ ವಿಧವಾದ ಕರ್ಮಗಳನ್ನೂ ಸುಟ್ಟು ಬೂದಿಗೈಯುವವಳಾದ ಕಾಮೇಶ್ವರಿಯೆನಿಸಿದ, ಕಾಮಿನಿಯಾದ, ಕಾಮಾಕ್ಷಿಯಾದ, ಕರುಣೆಯಿಂದ ತೇವವಾದ ಹೃದಯವುಳ್ಳ, ಕಲ್ಪಾಂತರಗಳಲ್ಲಿಯೂ ಇದ್ದುಕೊಂಡಿರುವವಳಾದ, ಶ್ರೀಶೈಲವಾಸಿನಿಯಾದ ಭಗವತಿಯಾದ ಶ್ರೀಮಾತೆಯನ್ನು ಧ್ಯಾನಿಸುವೆನು.

**ಗಾಯತ್ರೀಂ ಗರುಡಧ್ವಜಾಂ ಗಗನಗಾಂ ಗಾಂಧರ್ವಗಾನಪ್ರಿಯಾಂ**
**ಗಂಭೀರಾಂ ಗಜಗಾಮಿನೀಂ ಗಿರಿಸುತಾಂ ಗಂಧಾಕ್ಷತಾಲಂಕೃತಾಮ್।**
**ಗಂಗಾಗೌತಮಗರ್ಗಸಂನುತಪದಾಂ ಗಾಂ ಗೌತಮೀಂ ಗೋಮತೀಂ**
**ಶ್ರೀಶೈಲಸ್ಥಲವಾಸೀನಿಂ ಭಗವತೀಂ ಶ್ರೀಮಾತರಂ ಭಾವಯೇ ॥ ೯ ॥**

೯. ಗಾಯತ್ರೀಸ್ವರೂಪಳೂ ಗರುಡಧ್ವಜಳೂ ಆಕಾಶಗಾಮಿನಿಯೂ ಗಂಧರ್ವರ ಗಾನದಿಂದ ಸಂತುಷ್ಟಳೂ ಆಗಿರುವ ಗಂಭೀರ (ಸ್ವಭಾವಳಾದ) ಆನೆಯನ್ನೇರಿ ಸಂಚರಿಸುವವಳಾದ, ಹಿಮಗಿರಿಕನ್ಯೆಯಾದ, ಗಂಧ, ಅಕ್ಷತೆಗಳಿಂದ ಭೂಷಿತಳಾದ, ಗಂಗಾದೇವಿ, ಗೌತಮ, ಗರ್ಗರೆಂಬವರಿಂದ ನಮಸ್ಕರಿಸಲ್ಪಟ್ಟ ಪಾದವುಳ್ಳ ಭೂರೂಪಿಣಿಯಾದ, ಗೌತಮೀ, ಗೋಮತೀ- ಎಂಬ (ನದೀರೂಪಳಾದ) ಶ್ರೀಶೈಲಕ್ಷೇತ್ರನಿವಾಸಿನಿಯಾದ ಭಗವತಿಯಾದ ಶ್ರೀಮಾತೆಯಾದ ಭ್ರಮರಾಂಭೆಯನ್ನು ಧ್ಯಾನಿಸುವೆನು.

---